ಟ್ರೇನಿಂಗ ಕಾಲೇಜಗಳ T. C. L. ಮತ್ತು T. C. H. ಪರೀಕ್ಷೆಯ
ಒಂದನೆಯ ಪೇಪರಿನ ಅಭ್ಯಾಸ ಪತ್ರಿಕೆಯಂತೆ ಬರೆದಿರುವ

# ಅಭಿನವ ಶಿಕ್ಷಣ

## ಭಾಗ ೧

( ಶಿಕ್ಷಣದ ತತ್ವಗಳು ಹಾಗೂ ಶೈಕ್ಷಣಿಕ ಮಾನಸಶಾಸ್ತ್ರ )





ಬರೆದವರು :
ಶಾಮರಾವ ಗಜೇಂದ್ರಗಡ
ಬಿ. ಎ; ಬಿ. ಟಿ.



ಪ್ರಕಾಶಕರು :
ಶಾ. ಗೋ. ಹುಕ್ಕೇರಿ
ದಿ ಸ್ಟುಡಂಟ್ಸ ಓನ್ ಬುಕ್ ಡಿಪೋ,
ಮಾರ್ಕೆಟ ರೋಡ—ಧಾರವಾಡ.

೧೯೬೩]

[ಬೆಲೆ : ೫-೫೦

# ನಿವೇದನೆ

ಸಾಮಾನ್ಯ ಹಾಗೂ ಜೀವನ ಶಿಕ್ಷಣ ಶಿಕ್ಷಕರ ತರಬೇತಿಯ ಸಂಸ್ಥೆಗಳಿಗಾಗಿ, ಶಿಕ್ಷಣ ಖಾತೆಯವರು ಗೊತ್ತುಪಡಿಸಿದ ಅಭ್ಯಾಸ ಪತ್ರಿಕೆಯಂತೆ ಈ ಪುಸ್ತಕವನ್ನು ರಚಿಸಲಾಗಿದೆ. ಅಭ್ಯಾಸ ಪತ್ರಿಕೆಯಲ್ಲಿ ಗೊತ್ತುಪಡಿಸಿದ ಎಲ್ಲ ವಿಷಯಗಳನ್ನೂ ಇಲ್ಲಿ ವಿವರವಾಗಿ ವಿವೇಚಿಸಲಾಗಿದೆ.

ಅಭ್ಯಾಸ ಪತ್ರಿಕೆಯು ಮೂರು ಪ್ರಶ್ನೆ ಪತ್ರಿಕೆಗಳ ರೂಪವಾಗಿದೆ. ಈ ಮೂರು ಪ್ರಶ್ನೆ ಪತ್ರಿಕೆಗಳನ್ನು ಮೂರು ಭಾಗಗಳಾಗಿ ಈ ಪುಸ್ತಕದಲ್ಲಿ ಪರಿಗಣಿಸಲಾಗಿದೆ. ೧–೭ರ ವರೆಗಿನ ವರ್ಗಗಳ ವಿಷಯಯೋಜನೆಯನ್ನು ಸವಿವರವಾಗಿ ಅಭ್ಯಸಿಸಬೇಕೆಂದು, ಈ ಸಲದ ನೂತನ ಅಂಶವಾಗಿದೆ, ವಿಷಯ ಯೋಜನೆಯ ಪೀಠಿಕೆಗಳಲ್ಲಿ ನಿರೂಪಿತವಾಗಿರುವ ಮಾನಸ ಶಾಸ್ತ್ರದ ತತ್ವಗಳನ್ನೂ, ಚಟುವಟಿಕೆಗಳನ್ನೂ ಬಹುಮಟ್ಟಿಗೆ ಅನುವಾದಮಾಡಿ ಇಲ್ಲಿ ಕೊಟ್ಟಿದೆ. ಈ ಪುಸ್ತಕದಲ್ಲಿ ಇದೊಂದು ವಿಶೇಷ ಸಂಗತಿಯೆಂದು ಹೇಳಬಹುದು. ತರಬೇತಿಯ ವಿದ್ಯಾರ್ಥಿ ಶಿಕ್ಷಕರಿಗಂತೂ ಅದು ಪರೀಕ್ಷೆಯ ಒಂದು ವಿಷಯವಾಗಿದೆ. ನೂತನ ಅಭ್ಯಾಸಪತ್ರಿಕೆಯ ಅಪೂರ್ವತೆಯನ್ನು ತಿಳಿದುಕೊಳ್ಳಲು ಸಾಮಾನ್ಯ ಪಾಲಕರಿಗೂ ಇದರಿಂದ ಸಹಾಯವಾಗುವದು. ಅಭ್ಯಾಸಪತ್ರಿಕೆಯಲ್ಲಿ ಎಲ್ಲ ವಿಷಯಗಳನ್ನೂ ಮೂಲ (ಜೀವನ) ಶಿಕ್ಷಣ ದೃಷ್ಟಿಯಿಂದಲೂ ವಿವೇಚಿಸಲಾಗಿದೆ.

ಶಿಕ್ಷಕರಿಗೆ ಹತ್ತು ಸಂಗತಿಗಳು ಹೆಚ್ಚಿಗೆ ಗೊತ್ತಿರಬೇಕು. ಅದರಿಂದ ತಮ್ಮ ಕಾರ್ಯದಲ್ಲಿ ಅವರಿಗೆ ಆತ್ಮವಿಶ್ವಾಸವು ಹೆಚ್ಚುವದು' ಎಂಬ ಕಲ್ಪನೆಯನ್ನು ಮುಂದಿಟ್ಟು ಕೊಂಡು ವಿಷಯ ನಿವೇಚನೆಯಲ್ಲಿ ಶಕ್ಯವಿರುವಷ್ಟು ಪೂರ್ಣತೆಯನ್ನು ತರಲು ಪ್ರಯತ್ನ ಮಾಡಿದೆ.

ತಮ್ಮ ವೃತ್ತಿಯ ಹಿರಿಮೆ ಹೊಣೆಗಾರಿಕೆಗಳ ತಿಳುವಳಿಕೆ ಶಿಕ್ಷಕರಿಗೆ ಉಂಟಾಗ ಬೇಕು. ಅಭಿನವ ಶಿಕ್ಷಣದ ಬಗ್ಗೆ ಹೊಸದೃಷ್ಟಿ ಅವರಲ್ಲಿ ಮೂಡುವಂತಾಗಬೇಕು. ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಯಥೋಚಿತವಾದ ಸೇವೆಯನ್ನು ಅವರು ಸಲ್ಲಿಸುವಂತಾಗಬೇಕು. ಶಿಕ್ಷಕರಲ್ಲಿ ಈ ಸದ್ಭಾವನೆಗಳನ್ನು ಪ್ರೇರಿಪಿಸಲು ಸಮರ್ಥವಾದರೆ, ಈ ಪುಸ್ತಕಕ್ಕಾಗಿ ಮಾಡಿದ ಪ್ರಾಮಾಣಿಕ ಪರಿಶ್ರಮವು ಸಫಲವಾದಂತಾಗುವದು.

ಈ ಪುಸ್ತಕವನ್ನು ಬರೆಯಲು ನೆರವಾಗಿದ್ದ ಎಲ್ಲ ಶಿಕ್ಷಣ ಗ್ರಂಥಗಳಿಗೂ ಲೇಖಕನು ಕೃತಜ್ಞನಾಗಿರುವನು.

ವಿಜಾಪೂರ
ತಾ. ೧೫-೧-೬೩

ಗಜೇಂದ್ರಗಡ ಶಾಮರಾಯರು

# ಮುನ್ನುಡಿ

ಶ್ರೀ ಗಜೇಂದ್ರಗಡ ಶಾಮರಾಯರು ಬರೆದ 'ಅಭಿನವ ಶಿಕ್ಷಣ' ಎಂಬ ಹೊಸ ಪಠ್ಯಪುಸ್ತಕವನ್ನು ಅಲ್ಲಲ್ಲಿ ಓದಿದ್ದೇನೆ. ಪ್ರಾಥಮಿಕ ಶಿಕ್ಷಕರ ಟ್ರೇನಿಂಗ ಕಾಲೇಜುಗಳಿಗಾಗಿ ಅನ್ವಯಿಸಲಾದ T. C. L. ಮತ್ತು T. C. H. ಪರೀಕ್ಷೆಗಳ ಹೊಸ ಅಭ್ಯಾಸ ಪತ್ರಿಕೆಯಲ್ಲಿಯ ಶಿಕ್ಷಣ ಪೇಪರ 1ರಲ್ಲಿ ಬರಬೇಕಾದ ಎಲ್ಲ ವಿಷಯಗಳ ಬಗ್ಗೆ ಯೂ ಒಳ್ಳೇ ಅನುಭವಪೂರಿತವಾದ ವಿವೇಚನೆಯನ್ನು ಈ ಗ್ರಂಥದಲ್ಲಿ ಮಾಡಿದ್ದು ಇದನ್ನು ಟ್ರೇನಿಂಗ ಕಾಲೇಜುಗಳಿಗಾಗಿ ಪಠ್ಯವೆಂದು ಉಪಯೋಗಿಸುವದು ಸಮಂಜಸವಾಗಿದೆ.

ಈ ಪುಸ್ತಕದ ಭಾಗ ೧ರಲ್ಲಿ 'ಶಿಕ್ಷಣದ ತತ್ವಗಳು' ಮತ್ತು ಭಾಗ ೨ರಲ್ಲಿ 'ಶೈಕ್ಷಣಿಕ ಮಾನಸಶಾಸ್ತ್ರ' ಈ ವಿಷಯಗಳು ಅಡಕವಾಗಿದ್ದು ಒಳ್ಳೇ ಸರಳ ಕನ್ನಡ ಭಾಷೆಯಲ್ಲಿ ಸಾಮಾನ್ಯ ಶಿಕ್ಷಕನೂ ಓದಿ ತಿಳಿದುಕೊಳ್ಳುವಂತೆ ಈ ಗ್ರಂಥವನ್ನು ಬರೆಯಲಾಗಿದ್ದು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಕಳಕಳಿಯ ಪ್ರಯತ್ನಪಡುವ ಎಲ್ಲ ಸುಶಿಕ್ಷಿತ ತಂದೆ-ತಾಯಂದಿರೂ ಈ ಗ್ರಂಥವನ್ನು ಓದಿ ಮಹತ್ತರವಾದ 'ಶಿಕ್ಷಣ' ಮತ್ತು 'ಮನೋವಿಜ್ಞಾನ'ಗಳ ಬಗ್ಗೆ ಅಭಿರುಚಿಯನ್ನು ಬೆಳೆಯಿಸಿಕೊಳ್ಳಬಹುದು.

ಕನ್ನಡ ಭಾಷೆಯಲ್ಲಿ ಇಂಥ ಸರಳ ಶೈಲಿಯಲ್ಲಿ ಬರೆದ ಪಠ್ಯಪುಸ್ತಕಗಳ ಅಭಾವ ಹೆಚ್ಚಾಗಿದ್ದು ಟ್ರೇನಿಂಗ ಕಾಲೇಜಿನ ಎಲ್ಲ ಶಿಕ್ಷಕ-ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಅವಶ್ಯವಾಗಿ ಈ ಗ್ರಂಥವನ್ನು ಓದಿ ಲಾಭಪಡೆಯುವರೆಂದು ಆಶಿಸುತ್ತೇನೆ.

ಶ್ರೀ. ಜಿ. ಬಿ. ಪುಂಚ
M.A.; B.T.; I.E.O.
ಲಚ್ಯಾಣದ S. S. ಟ್ರೇನಿಂಗ ಕಾಲೇಜಿನ
ಪ್ರಿನ್ಸಿಪಾಲರು.

ಲಚ್ಯಾಣ
ತಾ. ೮-೧-೬೩

# ಅಭಿನವ ಶಿಕ್ಷಣ

## ಭಾಗ ೧

## ವಿಭಾಗ ೧ : ಶಿಕ್ಷಣದ ತತ್ವಗಳು

### ೧. ಶಿಕ್ಷಣವೆಂದರೇನು ?

ಶಿಕ್ಷಣವೆಂದರೆ 'ಸಂಸ್ಕಾರ', ತಿದ್ದುವುದು. ಅಪೇಕ್ಷಿತವಾದ ಉದ್ದೇಶಕ್ಕಾಗಿ ಸಮರ್ಪಕವಾದ ವಿಧಾನದಿಂದ ಚೈತನ್ಯರೂಪಿಯಾದ ಮಗುವಿನ ಸ್ವಾಭಾವಿಕ ಒಲವು ಶಕ್ತಿಗಳನ್ನು ರೂಪಿಸುವದು, ಕ್ರಮಬದ್ಧವಾದ ಶಿಕ್ಷಣವೆನಿಸುವದು. ಗಿಳಿಗೆ ಧ್ವನಿ ಇದೆ; ಕುದುರೆಗೆ ಗತಿ ಇದೆ. ಗಿಳಿಯು ನುಡಿಯ ಬಲ್ಲದು; ಕುದುರೆಯು ನಡೆಯ ಬಲ್ಲದು. ನಮಗೆ ಇಷ್ಟವಾಗಿರುವ ಶಬ್ದಗಳನ್ನು ಹೇಳುವಂತೆ ಗಿಳಿಯ ನುಡಿಯನ್ನು ತಿದ್ದುವದು, ಇಷ್ಟವಾದ ರೀತಿಯಲ್ಲಿ ಹೆಜ್ಜೆ ಹಾಕುವಂತೆ ಕುದುರೆಯ ನಡಿಗೆಯನ್ನು ತಿದ್ದುವದು – ಗಿಳಿ ಹಾಗು ಕುದುರೆಗಳಿಗಿರುವ ಸ್ವಾಭಾವಿಕ ಶಕ್ತಿಗಳಿಗೆ ಉಚಿತವಾದ 'ಸಂಸ್ಕಾರ'ವನ್ನು ನೀಡುವ ಶಿಕ್ಷಣವೆನಿಸುವದು. ಬಳಕೆ ಮಾತಿನಲ್ಲಿಯೂಕೂಡ ಗಿಳಿಗೆ 'ಮಾತು ಕಲಿಸುವದು'; ಕುದುರೆಗೆ 'ನಡಿಗೆ ಕಲಿಸುವದು' ಎಂತಲೆ ಹೇಳುವದುಂಟು.

ಶಿಕ್ಷಣವು 'ಚೈತನ್ಯ'ಕ್ಕಾಗಿ; ಜಡವಸ್ತುವಿಗಲ್ಲ. ಗಿಳಿ-ಕುದುರೆಗಳ ವಿಷಯದಲ್ಲಿ ಹೇಳುವಂತೆ, ಕಲ್ಲು ಕಟಿದು, ಕಟ್ಟಿಗೆ ಕೆತ್ತಿ ಅವುಗಳಿಗೆ ಒಂದು ರೂಪ-ಆಕಾರವನ್ನು ಕೊಡುವದಕ್ಕೆ ಶಿಕ್ಷಣವೆನಿಸುವದಿಲ್ಲ ಕಲ್ಲು ಕಟ್ಟಿಗೆಗಳಿಗೆ 'ಕಲಿಸುವೆವು', ಎಂದು ಯಾರೂ ಹೇಳುವದಿಲ್ಲ ಸಚೇತನವಾದ ಪ್ರತಿಯೊಂದು ಪ್ರಾಣಿಯಲ್ಲಿ ಕೆಲವೊಂದು ಸ್ವಾಭಾವಿಕವಾದ ಪ್ರವೃತ್ತಿಗಳೂ ಶಕ್ತಿಗಳೂ ಕಂಡುಬರುವವು. ಜಡವಸ್ತುಗಳಾದ ಕಲ್ಲು ಕಟ್ಟಿಗೆಗಳಿಗೆ ಕುಶಲವಾದ ಶಿಲ್ಪಿಯು ತನಗೆ ಇಷ್ಟವಾದ ರೂಪು-ಆಕಾರಗಳನ್ನು ಕೊಡಬಲ್ಲನು. ಜಡವಸ್ತುಗಳಿಗೆ ಸ್ವಕೀಯವಾದ 'ಇಷ್ಟ'ವೆಂಬುವದಿರುವದಿಲ್ಲ. ವಿಶಿಷ್ಟವಾಗಿರುವ ಒಲವು-ಶಕ್ತಿಗಳಿರುವದಿಲ್ಲ. ಹೀಗೆಯೆ ಆಗಬೇಕು-ಎನ್ನುವ 'ಹಟ' ಅವುಗಳಿಗಿರುವದಿಲ್ಲ. ಮಾಡಿದಂತೆ ಆಗುವದು ಆ ಕಲ್ಲು ಕಟ್ಟಿಗೆಗಳ ಸ್ವಭಾವ. ಅವುಗಳ ವಿಷಯದಲ್ಲಿ ಕಲಾವಿದನ ಕಾರ್ಯವೇ ಪ್ರಧಾನವಾದುದು. ಆತನು ಕೊಟ್ಟದ್ದೇ ರೂಪ; ಬರೆದದ್ದೇ ಬಣ್ಣ. ಆದರೆ ಶಿಕ್ಷಣದ ಸಾಮಗ್ರಿಯು ಸಚೇನವಾದುದು; ಸಜೀವವಾದುದು. ಮಾಡಿದಂತೆ ಆಗುವದು ಅದರ ಸ್ವಭಾವವಲ್ಲ. ಮಗುವಂತೂ ಚೈತನ್ಯಮೂರ್ತಿ. ಪ್ರತಿಯೊಂದು ಮಗುವಿಗೂ ಒಂದು ವಿಶಿಷ್ಟವಾದ ವ್ಯಕ್ತಿತ್ವವಿರುವದು; ಭಿನ್ನವಾದ ಶಕ್ತಿಗಳಿರುವವು; ಪ್ರತ್ಯೇಕವಾದ ಒಲವುಗಳಿರುವವು- ಈ ಸ್ವಾಭಾವಿಕವಾದ ಶಕ್ತಿ-ಒಲವುಗಳಿಗೆ ಅವುಗಳ ಹದ-ಹವಣಿಗಳನ್ನರಿತುಕೊಂಡು ಹಿತಕರವಾಗುವಂತೆ ಸಂಸ್ಕಾರವನ್ನು ಒದಗಿಸುವದೆ ಶಿಕ್ಷಣವೆನ್ನಬಹುದು. ಮಗುವಿಗೆ ದೊರೆಯುವ ಈ ಸಂಸ್ಕಾರದಲ್ಲಿ ಆತನ ಸಹಕಾರವೂ ಅಗತ್ಯವೆನಿಸುವದು.

ಈ ಸಂಸ್ಕಾರ ರೂಪವಾದ ಶಿಕ್ಷಣವು ವ್ಯಾಪಕವೂ ಆಗಿದೆ, ಮರ್ಯಾದಿತವೂ ಆಗಿದೆ. ವ್ಯಾಪಕಾರ್ಥದಲ್ಲಿ ಶಿಕ್ಷಣವು ಹುಟ್ಟಿದಂದಿನಿಂದ ಕೊನೆಯ ಉಸಿರೆಳೆಯುವವರೆಗೆ ವ್ಯಕ್ತಿಯ ಸಮಗ್ರ ಜೀವನವನ್ನೆಲ್ಲ ಆವರಿಸುವದು. ಸಂಕುಚಿತಾರ್ಥದಲ್ಲಿ ಅತನ ಶಾಲೆಯ ಅವಧಿಗೆ ಮಾತ್ರ ಸೀಮಿತವಾಗಿರುವದು. ವ್ಯಾಪಕಾರ್ಥದಲ್ಲಿ ಮಗುವಿಗೆ ದೊರೆಯುವ ಸಂಸ್ಕಾರವು ಹುಟ್ಟಿದಂದಿನಿಂದ ಸಾಯುವವರೆಗೆ ಬಹುಮುಖವಾಗಿ ಸಾಗುವದು. ತಾಯಿಯ ಗರ್ಭದಲ್ಲಿಯೂ ಕೂಡ ಮಗು ಅಂತರಿಕವಾಗಿ ಸೂಕ್ಷ್ಮ ಸಂಸ್ಕಾರಗಳಿಗೆ ಒಳಗಾಗಿರುವ ದೆಂದು ಹೇಳುವರು. ಗರ್ಭಿಣಿಯ ಆಹಾರ, ಅಚಾರ, ವಿಚಾರಗಳ ಸೂಕ್ಷ್ಮವಾದ ಪ್ರಭಾವವು ಗರ್ಭದಲ್ಲಿ ಬೆಳೆಯುತ್ತಿರುವ ಶಿಶುವಿನ ಮೇಲೆ ಆಗುವದೆಂದು ಶಾಸ್ತ್ರಜ್ಞರು ಹೇಳುವರು. ಉತ್ತರೆಯ ಗರ್ಭದಲ್ಲಿರುವಾಗಲೆ ಅಭಿಮನ್ಯುವಿಗೆ ಚಕ್ರವ್ಯೂಹ ಭೇದದ ಚತುರತೆ ದೊರೆತಿತಂತೆ. ಲವಕುಶರಿಗೆ ಜೃಂಭಕಾಸ್ತ್ರದ ಪರಿಚಯವುಂಟಾಯಿತಂತೆ. ದೈತ್ಯಕುಲದಲ್ಲಿ ಹುಟ್ಟಿದರೂ ಪ್ರಲ್ಹಾದನಿಗೆ ಅಚಲವಾದ ದೈವ ಭಕ್ತಿಯುಂಟಾಯಿತಂತೆ. ನಿಜ್ಞಾನದ ಹೇಳಿಕೆಯನ್ನೇ ಈ ಪೌರಾಣಿಕ ಉದಾಹರಣೆಗಳು ವಿವರಿಸುವವೆಂದು ಹೇಳಬಹುದು. ಮುಂದೊರೆದ ಕೆಲವು ಆಧುನಿಕ ರಾಷ್ಟ್ರಗಳಲ್ಲಿ ಗರ್ಭಿಣಿಯ ಆರೈಕೆ ಸಂಗೋಪನೆಗಳನ್ನು ಅಲ್ಲಿಯ ಸರಕಾರವೆ ವಹಿಸಿಕೊಳ್ಳುವದು. ಅವಳ ಗರ್ಭದಲ್ಲಿರುವ ಶಿಶು ತಮ್ಮ ರಾಷ್ಟ್ರದ ಭಾವೀ ನಾಗರಿಕನೆಂಬ ಭಾವನೆಯೆ ಇದಕ್ಕೆ ಹಿನ್ನೆಲೆಯಾಗಿರುವದು. ಅವಳಿಗೆ ಪೌಷ್ಟಿಕವಾದ ಆಹಾರ, ಉಚಿತವಾದ ವಿಹಾರ, ಅಗತ್ಯವಿರುದ ವಿಶ್ರಾಂತಿಗಳನ್ನು ಒದಗಿಸಲು ಏರ್ಪಾಡು ಮಾಡುವರು. ಅವಳ ಗರ್ಭದಲ್ಲಿ ಬೆಳೆಯುತ್ತಿರುವ ಸಂತಾನ ಸತ್ವಶಾಲಿಯಾದ ನಾಗರಿಕ ನಾಗಬೇಕೆಂಬುವದೇ ಅವರ ಉದ್ದೇಶವಾಗಿದೆ.

ವ್ಯಾಪಕವಾದ ಶಿಕ್ಷಣವು–ಸಂಸ್ಕಾರವು–ಮಗು ಹುಟ್ಟಿದ ಕ್ಷಣದಿಂದಲೆ ಪ್ರಾರಂಭ ವಾಗುವದು. ಭೂ ಸ್ಪರ್ಶವೆ ಮಗುವಿಗೆ ಮೊದಲು ಸಂಸ್ಕಾರ. ಅಂಗಾಂಗಗಳ ಚಲನವಲನ ದಿಂದಲೆ ಶಿಕ್ಷಣದ ಆರಂಭ, ಮುಂದೆ ಕೆಲ ಅವಧಿಯವರೆಗೆ ಮಂದ ಪ್ರಕಾಶದ 'ಬಾಣಂತಿ ಕೋಣೆ'ಯಲ್ಲಿ ಮಗು ಒಂದಿಲ್ಲೊಂದು ಬಗೆಯ ಸಂಸ್ಕಾರವನ್ನು ಹೊಂದುತ್ತಲೆ ಇರುವದು. ಆ ಕೋಣೆಯಲ್ಲಿ ಹಚ್ಚಿರುವ ಪಣತಿಯ ಮಂದ ಪ್ರಕಾಶವು ಮಗುವಿನ ಲಕ್ಷವನ್ನು ತನ್ನೆಡೆಗೆ ಸೆಳೆದು ಕೊಳ್ಳುವದು. ಮೊದಲು ಪಣತಿಯ ಮಂದ ಪ್ರಕಾಶಕ್ಕೆ ಕುಕ್ಕುವ ಆ ಮಗುವಿನ ಕಣ್ಣುಗಳು ಮುಂದೆ ವಿಶಾಲವಾಗಿ ಹರಡಿದ ಸುತ್ತು ಮುತ್ತಲಿನ ಸೃಷ್ಟಿಯನ್ನು ನೋಡಲು ಸಮರ್ಥವಾಗುವವು. ತನ್ನ ಎಲ್ಲ ಇಂದ್ರಿಯಗಳನ್ನು ಅಳವಡಿಸಿಕೊಂಡು ಆ ಮಗು 'ವಿಶ್ವದ ಬೌದ್ಧಿಕ ದಿಗ್ವಿಜಯ'ಕ್ಕಾಗಿ ಹೋರಾಡುವದು. ಈ ಬಗೆಯ ಹೋರಾಟವೆ ಮಗುವಿನ ಚೈತನ್ಯದ ಕಾರ್ಯ. ಸುತ್ತಮುತ್ತಲಿನ ಸನ್ನಿವೇಶದೊಡನೆ ಮಗು ತನ್ನ ಎಲ್ಲ ಇಂದ್ರಿಯಗಳಿಂದ ಅನೇಕ ಬಗೆಯ ಸಂಬಂಧಗಳನ್ನು ಕಂಡುಕೊಳ್ಳುವದು. ಈ ಸಂಬಂಧಗಳಿಂದಲೆ ಮಗುವಿನ ಅನುಭವವು ಹೆಚ್ಚುತ್ತ ಹೋಗುವದು. ಈ ಬಗೆಯ ಅನುಭವವೆ ಮಗುವಿನ ಜ್ಞಾನದ ಮೂಲಧನವು. ಜೀವನದ ಹೋರಾಟದಲ್ಲಿ ದೊರೆಯುವ ಈ ಅನುಭವಗಳೆ ಮಗುವಿನ ಸ್ವಾಭಾವಿಕ ಒಲವು ಶಕ್ತಿಗಳನ್ನು ತೀಡುವ, ತಿದ್ದುವ ಸಂಸ್ಕಾರ ಗಳಾಗುವವು. ಅಂತೆಯೆ ವ್ಯಾಪಕಾರ್ಥದಲ್ಲಿ ಶಿಕ್ಷಣವು ಆತ್ಮ ಸಂಸ್ಕಾರದ ಒಂದು ಸಾಧನ

ವೆಂದು ಹೇಳುವರು. ಈ ಆತ್ಮಸಂಸ್ಕಾರದಿಂದಲೆ ಮಗು ಬೆಳೆದು ದೊಡ್ಡವನಾದಂತೆ ತನ್ನ ಪರಿಸರಣಕ್ಕೆ ಹೊಂದಿಕೊಳ್ಳುವನು; ಜೀವನದಲ್ಲಿ ಒದಗುವ ಪರಿಸ್ಥಿತಿಗಳನ್ನು ಎದುರಿಸಲು ಸಮರ್ಥನಾಗುವನು. ಶಿಕ್ಷಣದಲ್ಲಿ ಶಾಸ್ತ್ರಕಾರನೆನಿಸಿದ ರೂಸೊ 'ನಿಸರ್ಗದ ಮುಖಾಂತರ ಶಿಕ್ಷಣವೆಂಬ ತನ್ನ ಸಿದ್ಧಾಂತದಲ್ಲಿ ಇದೇ ತತ್ವವನ್ನೇ ಎತ್ತಿಕೊಂಡಿರುವನು. 'ಒಂದು ಹುಲ್ಲುಕಡ್ಡಿಯಲ್ಲಿ ನಾವು ತಿಳಿಯ ಬೇಕಾದ ವಿಷಯಗಳೆಲ್ಲವನ್ನು ಕಲಿಯಬಹುದು; ನಿಸರ್ಗೋಪಾಸಕನಾದ ವರ್ಡ್ಸ್‌ವರ್ಥ ಕವಿಯು ಹೇಳುವ ಈ ಮಾತೂ ಇದೇ ಅರ್ಥ ದಲ್ಲಿಯೆ. 'ಪಠ್ಯಪುಸ್ತಕವನ್ನು ಮುಚ್ಚಿಬಿಡು; ನಿಸರ್ಗದ ಪುಸ್ತಕವನ್ನು ತೆರೆ, ಎಂದು ಹೇಳುವಲ್ಲಿ ಗುರುದೇವ ಟಾಗೋರರು ಇದೇ ತತ್ವವನ್ನೇ ಪುರಸ್ಕರಿಸಿರುವರು. ಸಮಾಜ ದಲ್ಲಿ ಬೆರೆತು ಬಾಳುವದೇ–ಮಗುವಿಗೆ ಒಂದು ಹಿರಿದಾದ ಶಿಕ್ಷಣವೆಂದು ಡ್ಯೂಯಿಯವರು ಹೇಳುವರು. ಈ ಜೀವನದಿಂದ ಅವನ ಅನುಭವ ಸಂಪತ್ತು ಹೆಚ್ಚಾಗುವದು. ಶಿಕ್ಷಣದ ವ್ಯಾಪಕಾರ್ಥದಲ್ಲಿ ಕಣ್ಣು ಕಿವಿ ಮುಂತಾದ ಜ್ಞಾನೇಂದ್ರಿಯಗಳಿಂದ ಪಡೆಯುವ ಅನುಭವ ವೆಲ್ಲವೂ ಶಿಕ್ಷಣವೆನಿಸುವದು. ನಿಸರ್ಗದ ದೃಶ್ಯಗಳನ್ನು ನಿರೀಕ್ಷಿಸುವದು, ಪುಸ್ತಕಗಳನ್ನು ಓದುವದು, ವಿವಿಧ ವ್ಯಕ್ತಿಗಳೊಡನೆ ಸ್ನೇಹ ಬೆಳೆಸುವದು, ಪ್ರವಾಸಗಳನ್ನು ಕೈಕೊಳ್ಳುವದು, ಸಾಮಾಜಿಕ ಸಾಂಪ್ರದಾಯಗಳನ್ನು ಪಾಲಿಸುವದು—ಇವೇ ಮುಂತಾದ ವಿವಿಧ ಸಂಗತಿಗಳು ಜೀವನದೊಡನೆ ಸಮವ್ಯಾಪ್ತಿಯುಳ್ಳ ವಿಶಾಲ ಶಿಕ್ಷಣದ ಅಂಗಗಳೆನಿಸುವವು.

ಸಾಮಯಿಕ–ಸಂಕುಚಿತ ಶಿಕ್ಷಣವು ಜೀವನದ ಒಂದು ವಿಶಿಷ್ಟ ಅವಧಿಗೆ ಮರ್ಯಾ ದಿತವಾಗಿರುವದು. ಬಳಕೆಯ ಮಾತಿನಲ್ಲಿ ಈ ಸಮಯಕ್ಕೆ 'ಕಲಿಯುವ ಅವಧಿ' ಯೆಂದು ಹೇಳುವರು. ವಿಶಾಲ ಶಿಕ್ಷಣದಲ್ಲಿ ಮಗು ಅನಿಶ್ಚಿತವಾದ, ಅನಿಯಂತ್ರಿತವಾದ ಸಂಸ್ಕಾರಗಳಿಗೆ ಒಳಗಾಗಿರುವನು. ಆತನ ಅನುಭವಗಳು ಅವಶ್ಯಕತೆಗಿಂತಲೂ ಬಹಳೇ ಕಡಿಮೆಯಾಗಬಹುದು; ಅವ್ಯವಸ್ಥಿತವಾಗಿರಬಹುದು; ವಯೋಮಾನದ ಒಲವು ಶಕ್ತಿಗಳಿಗೆ ಅನುಚಿತವಾಗಿರಬಹುದು. 'ಎಲ್ಲ ಸಂಗತಿಗಳನ್ನೂ ಮಗು ತಾನಾಗಿ ಶೋಧಿಸಿ ತಿಳಿದು ಕೊಳ್ಳಬೇಕು,' ಎಂಬ ಶಿಕ್ಷಣ ತತ್ವವು ಇದೇ ಕಾರಣಕ್ಕಾಗಿ ದೂಷಿತವಾಗಿರುತ್ತದೆ, ತ್ಯಾಜ್ಯ ವಾಗಿರುತ್ತದೆ. ಬೆಂಕಿಯು ಸುಡುವದೆಂಬುದನ್ನು ಕೈಬೆರಳು ಸುಟ್ಟುಕೊಂಡೇ ತಿಳಿದು ಕೊಳ್ಳಬೇಕೆಂದು ಹೇಳುವ ಶಿಕ್ಷಣವಿಧಾನವು ಅನರ್ಥಕಾರಿಯಾಗುವದು. ಎಲ್ಲಕ್ಕೂ ಹೆಚ್ಚಿನ ಹಾನಿಯೆಂದರೆ, ಅನಾದಿಕಾಲದಿಂದ ಕಲೆಹಾಕಿರುವ ಲೋಕಾನುಭವಕ್ಕೆ ಮಗು ಎರ ವಾಗುವದು. 'ಕೆಲವಂ ಬಲ್ಲವರಿಂದ ಕಲಿತು, ಕೆಲವಂ ಶಾಸ್ತ್ರಂಗಳಿಂ ಕೇಳುತಾ....' ಈ ಬಗೆಯ ಜ್ಞಾನದ ಕೇಂದ್ರಗಳನ್ನು ಮಗು ಕಳೆದುಕೊಳ್ಳಬೇಕಾಗುವದು.

ಅನಿರ್ದಿಷ್ಟ ಶಿಕ್ಷಣದ ನ್ಯೂನತೆಗಳನ್ನು ನಿವಾರಿಸುವದಕ್ಕಾಗಿಯೆ 'ಕ್ರಮಬದ್ಧ ಶಿಕ್ಷಣ'ವು ಅಗತ್ಯವೆನಿಸುವದು. ಕ್ರಮಬದ್ಧ ಶಿಕ್ಷಣವು ನಿಸರ್ಗ ಶಿಕ್ಷಣಕ್ಕೆ ಪ್ರತಿಸ್ಪರ್ಧಿ ಯಾಗಿಲ್ಲ, ಒಂದು ರೀತಿಯಲ್ಲಿ ಅದಕ್ಕೆ ಪೂರಕವಾಗಿರುವದು. ಕ್ರಮಬದ್ಧ ಶಿಕ್ಷಣದಲ್ಲಿ ಒಂದು ನಿರ್ದಿಷ್ಟವಾದ ಯೋಜನೆಯ ಮೇರೆಗೆ ಮಗುವಿಗೆ ಉಚಿತವಾದ ಸಂಸ್ಕಾರಗಳನ್ನು ಒದಗಿಸುವ ಏರ್ಪಾಡು ಮಾಡುವರು. ಆತನ ಒಲವು ಶಕ್ತಿಗಳನ್ನು ಅಪೇಕ್ಷಿತವಾದ ರೀತಿ ಯಲ್ಲಿ ಬೆಳೆಯಿಸಿಕೊಂಡು ಬರುವದುಂಟು. ಜೀವನೋಪಯೋಗಿಯಾಗಿರುವ ಹಾಗೂ ಆತನ

ವಯೋಮಾನಕ್ಕೆ ಅನುಗುಣವಾಗಿರುವ ವಿವಿಧ ವಿಷಯಗಳ ಪರಿಚಯವನ್ನು ಆತನಿಗೆ ಮಾಡಿಕೊಡುವದುಂಟು. ಕ್ರಮಬದ್ಧ ಶಿಕ್ಷಣವು ಸಾಂಘಿಕ ಶಿಕ್ಷಣವಾದರೆ, ಮಗುವಿನ ವೈಯಕ್ತಿಕ ಒಲವು ಶಕ್ತಿಗಳಿಗೆ ಸಂಪೂರ್ಣ ಮನ್ನಣೆ ದೊರೆಯಲಾರದು. ಇದರಿಂದ ಇಂಥ ಶಿಕ್ಷಣದಲ್ಲಿ ತುಸು ಬಲಾತ್ಕಾರ-ಕೃತ್ರಿಮತೆಗಳು ನುಸುಳಿಕೊಳ್ಳುವದುಂಟು. ಆದರೆ ಹೀಗಾಗುವುದು ಅನಿವಾರ್ಯವಿದ್ದಲ್ಲಿ ಮಾತ್ರ. ಮೊಗ್ಗು ಅರಳಿ, ಹೂವಾಗಿ, ಕಾಯಾಗಿ, ಹಣ್ಣಾಗಲು ನಿಸರ್ಗವು ಅವಶ್ಯಕವಾದ ಅನುಕೂಲತೆಗಳನ್ನು ಒದಗಿಸಿಕೊಡುವದಿಲ್ಲವೆ ? ಇದೇ ಮೇರೆಗೆ ವ್ಯಕ್ತಿಯ ಆತ್ಮವು ಅರಳಿ ಅದರ ಶಕ್ತಿಗಳೆಲ್ಲವೂ ವಿಕಾಸಪಡೆಯುವಂತೆ ಕ್ರಮಬದ್ಧ ಶಿಕ್ಷಣವಾದರೂ ಸಕಲ ಸೌಕರ್ಯಗಳನ್ನು ಸಿದ್ಧಗೊಳಿಸಬೇಕು. ಎಳೆಯ ಮಗುವಿನಲ್ಲಿರುವ ಚೈತನ್ಯವು ಬೀಜರೂಪವಾದುದು. ಅದು ಅಂಕುರಿಸಿ, ಬೆಳೆದು, ಮರವಾಗಿ ಮುಂದೆ ಫಲಿಸುವಂತೆ ಮಾಡುವದು ಕ್ರಮಬದ್ಧ ಶಿಕ್ಷಣ. 'ಶಿಕ್ಷಣವೆಂದರೇನು', ಎಂಬುದಕ್ಕೆ ಇದುವೆ ಸಮರ್ಪಕವಾದ ಉತ್ತರ.

### ಅಭ್ಯಸನಗಳು

೧. ಶಿಕ್ಷಣವು ಸಚೇತನ ಪ್ರಾಣಿಗಳಿಗೆ ಮಾತ್ರ—ಏಕೆ ?
೨. ಡ್ಯೂಯಿ, ಟಾಗೋರರವರ ದೃಷ್ಟಿಯಲ್ಲಿ ಶಿಕ್ಷಣವೆಂದರೇನು ?
೩. ವ್ಯಾಪಕ ಹಾಗೂ ಸಾಮಯಿಕ (ಕ್ರಮಬದ್ಧ) ಶಿಕ್ಷಣಗಳ ಗುಣದೋಷಗಳೇನು ?
೪. ಶಿಕ್ಷಣವೆಂದರೇನು ? — ಈ ಪ್ರಶ್ನೆಗೆ ಸಮರ್ಪಕವಾದ ಉತ್ತರವೇನು ?

## ೨. ಶಿಕ್ಷಣದ ಗೊತ್ತುಗುರಿಗಳು

ಧ್ಯೇಯರಹಿತವಾದ ವ್ಯಕ್ತಿಯ ಜೀವನವನ್ನು 'ನಿರ್ಗಂಧ ಕುಸುಮ'ಕ್ಕೆ ಹೋಲಿಸುವರು. ಹೂವಿನ ಬಣ್ಣದ ಬೆಡಗುಗಳು ಎಷ್ಟೇ ಮೋಹಕವಾಗಿರಲಿ. ಸುವಾಸನೆಯಿರದಿದ್ದರೆ ಆ ಹೂವಿಗೆ ಬೆಲೆಯಿಲ್ಲ. ದೇವನ ಪೂಜೆಗೂ ಅದು ಸಲ್ಲದು. ಶಿಕ್ಷಣಕ್ಕೂ ಗೊತ್ತುಗುರಿಗಳ ಅಗತ್ಯವಿರುವದು. ಕ್ರಮಬದ್ಧವಾದ ಶಿಕ್ಷಣವು ಸುಯೋಜಿತವಾದುದು; ಉದ್ದೇಶಪೂರ್ವಕವಾದುದು. ಈ ಉದ್ದೇಶ, ಈ ಗೊತ್ತುಗುರಿಗಳು ಶಿಕ್ಷಣದ ಸಮಗ್ರ ಕ್ಷೇತ್ರದಲ್ಲಿ ಹಾಸು ಹೊಕ್ಕಾಗಿ ಕಾಣಿಸಿಕೊಳ್ಳುವವು. ಶಿಕ್ಷಣದ ಅಂಗೋಪಾಂಗಗಳೆಲ್ಲ ಶಿಕ್ಷಣದ ಮೂಲೋದ್ದೇಶಗಳಿಗೆ ಅಧೀನವಾಗಿರುವವು. ಮಗುವಿನ ಸ್ವಾಭಾವಿಕ ಒಲವು ಶಕ್ತಿಗಳಿಗೆ ಉಚಿತವಾದ ಸಂಸ್ಕಾರ ದೊರೆಯಬೇಕು; ಯಾವ ಉದ್ದೇಶದ ಸಿದ್ಧಿಗಾಗಿ ? ಮಗುವಿನ ಆತ್ಮಶಕ್ತಿಗಳು ಅರಳಬೇಕು; ಹೀಗೆ ವಿಕಾಸವನ್ನು ಪಡೆದ ಮಗು ತನ್ನ ಜೀವನದ ಸಾರ್ಥಕತೆಗಾಗಿ ಯಾವ ಶಕ್ತಿಗಳನ್ನು, ಯಾವ ಸದ್ಗುಣಗಳನ್ನು ಸಂಪಾದಿಸಬೇಕು ? ಒಟ್ಟಾರೆ, ಶಿಕ್ಷಣದಿಂದ ನಾವು ಯಾವ ಅಂತಿಮ ಫಲವನ್ನು ಬಯಸುವೆವು ? ಕ್ರಮಬದ್ಧವಾದ

ಶಿಕ್ಷಣವು ತನ್ನ ಕಣ್ಮುಂದೆ ಇಟ್ಟುಕೊಂಡಿರುವ ಗೊತ್ತುಗುರಿಯೆ ಈ ಸಿದ್ಧಿಯನ್ನು ರೂಪಿಸುವದು. ಈ ಸದ್ಗುಣಗಳನ್ನು ನಿರ್ದಿಷ್ಟಗೊಳಿಸುವದು; ಈ ಅಂತಿಮ ಫಲವನ್ನು ಗೊತ್ತುಪಡಿಸುವದು. ಗುರಿಯಿಲ್ಲದ ಶಿಕ್ಷಣ 'ಕಣ್ಣಿದ್ದರೂ ಕುರುಡ'ನಂತೆ; ತೇಲಿಸುವ ನಾವೆಯಿದ್ದರೂ ನಿಯಂತ್ರಿಸುವ ಚುಕ್ಕಾಣಿಯಿಲ್ಲದಂತೆ.

ಒಂದು ರಾಷ್ಟ್ರದ ಜನತೆ ಆಯಾಕಾಲದಲ್ಲಿ ತನ್ನ ಜೀವನದ ಸಫಲತೆಗಾಗಿ ನಿರೂಪಿಸಿಕೊಂಡಿರುವ ಗೊತ್ತುಗುರಿಯೆ ಅಲ್ಲಿಯ ಶಿಕ್ಷಣದ ಗೊತ್ತುಗುರಿಯನ್ನು ನಿರ್ಧರಿಸುವದು. ಜೀವನದ ಗೊತ್ತುಗುರಿಯಿಂದ ಶಿಕ್ಷಣದ ಗೊತ್ತುಗುರಿಯು ಪ್ರಭಾವಿತವಾಗುವದು, ಎಂತಲೂ ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ ಶಿಕ್ಷಣದ ಗೊತ್ತುಗುರಿಯು ದೇಶ–ಕಾಲ–ಪರಿಸ್ಥಿತಿಗಳ ಪ್ರಭಾವದಿಂದ ವ್ಯತ್ಯಾಸಹೊಂದುವದೆಂದು ತೋರಬಹುದು. ಆದರೆ ಶಿಕ್ಷಣದ ಮೂಲೋದ್ದೇಶವು 'ಸನಾತನ'ವಾಗಿದೆ. ಅದು ದೇಶ ಕಾಲಗಳನ್ನು ಅನುಸರಿಸಿ ತನ್ನ ಮುಖ ತಿರುಗಿಸಬೇಕಾಗಿಲ್ಲ; ಭಿನ್ನಾಭಿಪ್ರಾಯಗಳ ಬಾಧೆಯೂ ಅದಕ್ಕೆ ತಟ್ಟುವಂತಿಲ್ಲ. 'ಮಗುವಿನ ಸ್ವಾಭಾವಿಕ ಶಕ್ತಿ-ಪ್ರವೃತ್ತಿಗಳಿಗೆ ಸಮಯೋಚಿತವಾದ, ಸಮ್ಯಕವಾದ, ಸಮರ್ಪಕವಾದ ಸಂಸ್ಕಾರವು ದೊರೆಯಬೇಕು. ಆತನಲ್ಲಿ ಹುದುಗಿಕೊಂಡಿರುವ ಶಾರೀರಿಕ, ಮಾನಸಿಕ, ಆತ್ಮಿಕಶಕ್ತಿಗಳನ್ನು ಕಂಡುಹಿಡಿಯಬೇಕು. ಅವುಗಳನ್ನು ಪ್ರಕಟಗೊಳಿಸಬೇಕು; ವಿಕಾಸಗೊಳಿಸಬೇಕು. ಸ್ವಂತದ ಜೀವನವನ್ನು ಸಾಮಾಜಿಕ ಜೀವನಕ್ಕೆ ಹೊಂದಿಸಿಕೊಂಡು ಎರಡನ್ನು ಸರಿಯಾಗಿ ಸಾಗಿಸುವ ಶಕ್ತಿ ಪಾತ್ರತೆಗಳನ್ನು ಶಿಕ್ಷಣವು ಮಗುವಿಗೆ ತಂದುಕೊಡಬೇಕು....'; ಶಿಕ್ಷಣದ ಈ ಸದುದ್ದೇಶವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈ ಮೂಲೋದ್ದೇಶವು ಸರ್ವಕಾಲೀನವಾದುದು; ಸರ್ವಸಾಮಾನ್ಯವಾದುದು.

ಅತಿ ಪ್ರಾಚೀನಕಾಲದಲ್ಲಿ 'ಶಿಕ್ಷಣ'ವೆಂಬುದೊಂದು ಪ್ರತ್ಯೇಕ ವಿಧಾನವಿರಲಿಲ್ಲವೆಂದು ತೋರುವದು. ಅಂತೆಯೆ ಅದು ಕ್ರಮಬದ್ಧವೂ ಆಗಿರಲಿಲ್ಲ. ಸಹೇತುಕವೂ ಆಗಿರಲಿಲ್ಲ. ಜೀವನದ ಪರಂಪರೆಯನ್ನು ಮುಂದೆ ಸಾಗಿಸುವದೆ ಅಂದಿನ ಶಿಕ್ಷಣ, ಅನುಕರಣವೆ ಈ ಶಿಕ್ಷಣಕ್ಕೆ ಮುಖ್ಯವಾದ ಸಾಧನ. ತಂದೆ ತಾಯಿಗಳ ಕಸಬು–ಕಲೆಗಳನ್ನು ಮಕ್ಕಳು ಕೇವಲ ಅನುಕರಣದಿಂದ ಮಾಡಿ ಕಲಿಯುತ್ತಿದ್ದರು. 'ಏಕೆ ?–ಹೇಗೆ ?' ಯೆಂಬ ಪರಿಜ್ಞಾನ ಅವರಿಗೆ ಇರುತ್ತಿರಲಿಲ್ಲ. ಇದೇ ಮೇರೆಗೆ ಕುಲಾಚಾರಗಳನ್ನೂ, ಧಾರ್ಮಿಕ ರೂಢಿ–ನೀತಿಗಳನ್ನೂ ಅವರು ಮುಂದರಿಸಿಕೊಂಡು ಬಂದರು. ಇತ್ತಕಡೆಗೆ ಮಾನವನ ಪ್ರಗತಿಯೂ ಮುಂದರಿಯಿತು; ಆತನ ಜಿಜ್ಞಾಸೆಯೂ ಹೆಚ್ಚಿತು. ಶಿಕ್ಷಣವು ಮನೆಬಿಟ್ಟು 'ಮಠ' ಸೇರಿತು; 'ಪಾಠಶಾಲೆ'ಗೆ ಪ್ರವೇಶಿಸಿತು. ಪಾಠಶಾಲೆಯ ಶಿಕ್ಷಣಕ್ಕೆ ಒಂದು ಸಾಮಾನ್ಯ ಗುರಿಯು ಅಗತ್ಯವೆನಿಸಿತು. ಒಂದೊಂದು ರಾಷ್ಟ್ರವು ಒಂದೊಂದು ಗುರಿಯನ್ನು ಗೊತ್ತುಪಡಿಸಿಕೊಂಡಿತೆಂದು ಕಾಣುತ್ತದೆ. ಸ್ಪಾರ್ಟನ್‌ರು ದೇಹಶಕ್ತಿ–ದೇಹದಾರ್ಢ್ಯಗಳ ಗುರಿಯತ್ತ ಧಾವಿಸಿದರು. ಪ್ರಾಚೀನ ಸ್ಪಾರ್ಟನ್ ವೀರರ ಶಕ್ತಿ ಸಹಿಷ್ಣುತೆಗಳ ಸಾಹಸಗಳು ಬೆರಳು ಕಚ್ಚುವಂತಿವೆ. ಗ್ರೀಕರು ಜ್ಞಾನಾರ್ಜನೆಯ ಬೆನ್ನು ಹತ್ತಿದರು. ಸಾಕ್ರೆಟೀಸ, ಪ್ಲೇಟೊ, ಅರಿಸ್ಟೋಟಲ್-ಮುಂತಾದ ಅಂದಿನ ಗ್ರೀಕ ಮೇಧಾವಿಗಳು ಹಚ್ಚಿದ ಜ್ಞಾನದೀಪವು ಇಂದಿಗೂ ನಂದದೆ ಉಳಿದಿದೆ. ಪ್ರಾಚೀನ ಭಾರತವು ಶಿಕ್ಷಣಕ್ಕಾಗಿ ಬೇರೊಂದು ಉನ್ನತವಾದ ಆದರ್ಶ

ವನ್ನಿಟ್ಟುಕೊಂಡಿತು. ಅಂದಿನ ಭಾರತೀಯರ ದೃಷ್ಟಿ 'ಐಹಿಕ'ವಾಗಿರಲಿಲ್ಲ. ಅಂತೆಯೆ ಅವರ ಶಿಕ್ಷಣದ ಗುರಿಯು 'ಪಾರಲೌಕಿಕ'ವಾಗಿತ್ತು. 'ಸಾ ವಿದ್ಯಾ ಯಾ ವಿಮುಕ್ತಯೆ' ಎಂಬುದು ಅವರ ಶಿಕ್ಷಣದ ಬೀಜಮಂತ್ರವಾಗಿತ್ತು. ಈ ಗುರಿಗೆ ಅನುಗುಣವಾಗಿ ಅಂದಿನ ಶಿಕ್ಷಣದ ಸ್ವರೂಪವೂ ರೀತಿವಿಧಾನಗಳೂ ಭಿನ್ನವಾಗಿದ್ದವು. ಅಂದಿನ ಛಾತ್ರರಿಗೆ ದೊರೆಯುವ ವಿದ್ಯೆ ಆಗಮಿಕವಾದುದು, ಪಾರಲೌಕಿಕವಾದುದು. ಅವರ ಗುರಿಯಾದ 'ವಿಮುಕ್ತಿ'ಗೆ ಸಾಧನವಾದುದು. ವಿಮುಕ್ತಿಯ ಈ ಗುರಿಯು ಐಹಿಕ ಜೀವನವನ್ನು ಕಡೆಗಣಿಸಿತು, ಓಡುವ ಜಗತ್ತಿನೊಡನೆ ಸಮವಾಗಿ ಹೆಜ್ಜೆ ಹಾಕದಂತೆ ಭಾರತೀಯರ ಪ್ರಗತಿಗೆ ಕಾಲ್ತೊಡಕಾಯಿತು, ಎಂಬ ಅವರ ನ್ಯೂನತೆಗಳನ್ನೂ ಎತ್ತಿತೋರಿಸುವದುಂಟು.

ಮಾನವ ಜೀವನವು ವಿಜ್ಞಾನದ ಪ್ರಭಾವಕ್ಕೆ ಒಳಗಾಗಿದೆ. ಜೀವನದ ರೀತಿ-ಕ್ರಮಗಳಲ್ಲಿ ಸಂಭವಿಸಿದ ಕ್ರಾಂತಿಯು ಶಿಕ್ಷಣಕ್ಷೇತ್ರವನ್ನೂ ಆವರಿಸಿದೆ. ಶಿಕ್ಷಣದ ಸ್ವರೂಪ ಸಾಧನಗಳೂ ನೂತನ ಜೀವನದ ಆಶೆ-ಆಕಾಂಕ್ಷೆಗಳಿಗೆ ಅನುಗುಣವಾಗಿ ಹೊಸರೂಪವನ್ನು ತಾಳಿವೆ. ಭಾರತವು ಈ ಜೀವನ ಪ್ರವಾಹದಿಂದ ಸಿಡಿದು ದೂರ ನಿಂತುಕೊಳ್ಳಲಾರದು. ಬದಲಿಸುವ ಜೀವನದೊಡನೆ ಶಿಕ್ಷಣವು ಸಮವಾಗಿ ಹೆಜ್ಜೆ ಇಡಬೇಕಾಗುವದು. ಓಡುವ ಜೀವನದೊಡನೆ ಕೂಡಿಕೊಳ್ಳದ ಶಿಕ್ಷಣವು ಹಿಂದೆ ಬೀಳುವದು. ಜಗತ್ತಿನ ದೇಶಗಳೆಲ್ಲ ಹೋರಾಡಿ ತಮ್ಮ ಸ್ವಾತಂತ್ರ್ಯವನ್ನು ಗಳಿಸಿಕೊಂಡಂತೆ, ಮಗು ಕೂಡ ತನ್ನ 'ಸ್ವಾತಂತ್ರ್ಯ'ವನ್ನು ಗಳಿಸಿಕೊಂಡಿದೆ; ಶಾಶ್ವತವಾದ 'ಸ್ವಾತಂತ್ರ್ಯದ ಸನದನ್ನು' ಪಡೆದು ಕೊಂಡಿದೆ. ಮಗುವಿನ ಈ ಸ್ವಾತಂತ್ರ್ಯವೇ ಇಂದಿನ ಶಿಕ್ಷಣಕ್ಕೆ ತಳಹದಿಯಾಗಿದೆ. ಆತನ ಸ್ವಾಭಾವಿಕವಾದ ಒಲವು ಶಕ್ತಿಗಳೆ ಇಂದಿನ ಶಿಕ್ಷಣ ಮಂದಿರದ ಆಧಾರಸ್ತಂಭಗಳಾಗಿವೆ. ಪಾತ್ರೆಯಿಂದ ಪಾತ್ರೆಯಲ್ಲಿ ನೀರನ್ನು ತುಂಬುವಂತೆ, ತಲೆ ಭಾರವಾದ ವಿಷಯಗಳ ಜ್ಞಾನ ಮಾಡಿಕೊಡುವದು ಹಾಗೂ ಮಗುವಿನ ಮಾನಸಿಕಶಕ್ತಿಗಳನ್ನು ಬಿಡಿಬಿಡಿಯಾಗಿ ತಿದ್ದಬಹುದೆಂಬ ತಪ್ಪು ವಿಧಾನವು ಇಂದಿನ ಶಿಕ್ಷಣ ಕಾರ್ಯವಾಗಿಲ್ಲ. ಮಗುವಿನ ಚೈತನ್ಯವನ್ನೂ ಆತನ ವಿವಿಧ ಶಕ್ತಿಗಳನ್ನು ಕಂಡುಹಿಡಿದು, ಅವುಗಳನ್ನು ಬೆಳೆಯಿಸುವುದೆ ಇಂದಿನ ಶಿಕ್ಷಣದ ಮೂಲೋದ್ದೇಶವಾಗಿದೆ

ಸಾಮಾನ್ಯ ಜನರು ಶಿಕ್ಷಣದ ಮೂಲೋದ್ದೇಶದ ಬಗ್ಗೆ ವಿಚಾರಿಸುವದು ತೀರ ಕಡಿಮೆ. ಕೇವಲ ಜ್ಞಾನ ಹಾಗೂ ಸಂಸ್ಕೃತಿಗಳಿಗಾಗಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಬಯಸುವ ಪಾಲಕರೂ ವಿರಳ. ಒಂದು ಲೌಕಿಕ ಉದ್ದೇಶಕ್ಕಾಗಿ, ಸಂಪಾದನೆಯಿಂದ ಒದಗುವ ಪ್ರಾಪಂಚಿಕ ಸುಸ್ಥಿತಿಗಾಗಿ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಲಪೇಕ್ಷಿಸುವರೇ ಅನೇಕರು. ಶಿಕ್ಷಣದ ಈ ಉದ್ದೇಶವು 'ಹೊಟ್ಟೆಯ ಪಾಡಿಗಾಗಿ'. ಸಾಮಾನ್ಯ ದೃಷ್ಟಿಯಿಂದ ಅವರ ಈ ಬಯಕೆ ಯಥಾರ್ಥವೆ. ಆದರೆ ಶಿಕ್ಷಣದ ಮೂಲೋದ್ದೇಶವು ಇಷ್ಟೊಂದು ಸಂಕುಚಿತವಾಗಲಾರದು. ಶಿಕ್ಷಣವು ಲೌಕಿಕವನ್ನು ಕಡೆಗಾಣಿಸಬಾರದೆಂಬುದು ನಿಜ, ಆದರೆ ಕೇವಲ ಅದಕ್ಕೇನೆ ಅಂಟಿಕೊಳ್ಳಬಾರದು. ಮನುಷ್ಯನಿಗೆ ದೇಹವಿರುವಂತೆ ಆತ್ಮವೂ ಕೂಡ ಇರುವದಲ್ಲವೆ? ವ್ಯಕ್ತಿಯ ಸರ್ವತೋಮುಖವಾದ ವಿಕಾಸದಲ್ಲಿ ದೇಹ ಹಾಗೂ ಆತ್ಮಗಳ ಸಂಬಂಧ ಸಹಕಾರಗಳು ಅತೀವ ಅನ್ಯೋನ್ಯವಾಗಿವೆ, ನಿಕಟವಾಗಿವೆ. ದೇಹದ ಪೋಷಣೆಗೆ ಪಥ್ಯಕರ

ವಾದ ಅನ್ನವನ್ನು ಒದಗಿಸುವಂತೆ, ಆತ್ಮದ ವಿಕಾಸಕ್ಕೂ ಉಚಿತವಾದ ಸಾಮಗ್ರಿಯನ್ನು ಒದಗಿಸಬೇಕಾಗುವದು. ಇದಲ್ಲದೆ ಮನುಷ್ಯನು ಸಮಾಜದಲ್ಲಿ ಕೂಡಿಕೊಂಡು ಬಾಳುವನು, ಕೂಡಿ ಕೆಲಸಮಾಡುವನು. ಆತನ ನಿತ್ಯ ಜೀವನದಲ್ಲಿ ಸಮಾಜದೊಡನೆ ವಿವಿಧವಾದ ಸಂಬಂಧಗಳು ಬರುವವು. ಕೂಡಿ ಕೆಲಸ ಮಾಡುವಾಗ್ಗೆ ಅನೇಕ ಬಗೆಯ ಅನುಭವಗಳು ಉಂಟಾಗುವವು. ಇವೆಲ್ಲವನ್ನೂ ವಿಚಾರಿಸಿದರೆ ಶಿಕ್ಷಣವು ತನ್ನ ಉದ್ದೇಶವನ್ನು ಹೆಚ್ಚು ವ್ಯಾಪಕವಾಗಿ ಮಾಡಿಕೊಳ್ಳಬೇಕಾಗುವುದು. ಈ ಉದ್ದೇಶಕ್ಕೆ ಅನುಗುಣವಾಗಿ ತನ್ನ ಸಾಧನಗಳನ್ನೂ ಸರಿಪಡಿಸಿಕೊಳ್ಳಬೇಕಾಗುವದು. ಒಂದೆಡೆಗೆ ವ್ಯಕ್ತಿಯು ಉನ್ನತಿಯನ್ನು ಸಾಧಿಸಬೇಕು. ಈ ಉನ್ನತಿಯು ದ್ವಿಮುಖವಾದುದು. ವ್ಯಕ್ತಿಯ ನಿತ್ಯ ಜೀವನಕ್ಕೆ ಅಗತ್ಯವಿರುವ ಶಾರೀರಿಕ ಬಲ ಹಾಗೂ ಚರಿತಾರ್ಥಕ್ಕೆ ಅನಿವಾರ್ಯವಾದ ದ್ರವ್ಯಾರ್ಜನೆಯ ಶಕ್ತಿ. ಇವೆರಡೂ ಜತೆಯಾಗಿ ಉನ್ನತಿಯ ಒಂದು ಮುಖ. ಇವುಗಳಿಗೆ ಅವಿರೋಧವಾಗಿ ಹೊಂದಿಕೊಂಡು ವ್ಯಕ್ತಿಯು ಆತ್ಮವಿಕಾಸವನ್ನೂ ಸಾಧಿಸುವದು ಉನ್ನತಿಯ ಇನ್ನೊಂದು ಮುಖ. ಈ ದ್ವಿಮುಖವಾದ ವ್ಯಕ್ತಿವಿಕಾಸದಿಂದ ಆತನಲ್ಲಿ ಅನೇಕ ನೈತಿಕ ಹಾಗೂ ಸಾಮಾಜಿಕ ಸದ್ಗುಣಗಳ ಸಂವರ್ಧನೆಯಾಗುವದು. ವ್ಯಕ್ತಿಯು ತನ್ನಷ್ಟಕ್ಕೆ ತಾನು ಸುಖಿಯಾಗಿ ಬಾಳುವದಲ್ಲದೆ, ಎಲ್ಲರೊಡನೆ ಕೂಡಿ ಬಾಳುವ ಕಲೆಯನ್ನು ಶಿಕ್ಷಣವು ಆತನಿಗೆ ತಂದು ಕೊಡಬೇಕಾಗುವದು. ಸಹಾನುಭೂತಿ, ಸಹಕಾರ, ಸಹಿಷ್ಣುತೆ, ಈ ಮೂರು ಗುಣಗಳ ಜೋಡಣೆಯಿಂದ ವ್ಯಕ್ತಿಯು ಸಮಾಜದೊಡನೆ ಬಹುಮುಖವಾಗಿ ಬರುವ ತನ್ನ ಸಂಬಂಧವನ್ನು ಬೆಳೆಯಿಸಿಕೊಳ್ಳಬೇಕು. ವ್ಯಕ್ತಿ ಸಮಾಜಗಳಲ್ಲಿ ಈ ಬಗೆಯ ಸಂಬಂಧವು ನೆಲೆಗೊಂಡರೆ, ಒಟ್ಟು ಸಮಾಜದ ಸ್ವಾಸ್ಥ್ಯ-ಸುಸ್ಥಿತಿಗಳು ತಾವಾಗಿಯೆ ಉಂಟಾಗುವವು.

ಮೇಲಿನ ಮಾತನ್ನೇ ಮತ್ತೊಂದು ರೀತಿಯಾಗಿ ಹೇಳುವದುಂಟು— ಒಳ್ಳೇ ನಾಗರಿಕರನ್ನು ನಿರ್ಮಾಣಗೊಳಿಸುವದು ಶಿಕ್ಷಣದ ಕಾರ್ಯವೆಂದು. ಈ ಉದ್ದೇಶದಲ್ಲಿಯೂ ವ್ಯಕ್ತಿಯ ಆತ್ಮಸಂಸ್ಕಾರಕ್ಕೇನೆ ಪ್ರಾಧಾನ್ಯತೆ. ಉತ್ತಮ ನಾಗರಿಕನಿಗೆ ಹಕ್ಕು ಬಾಧ್ಯತೆಗಳು ಇರುವಂತೆ ವಿವಿಧವಾದ ಹೊಣೆಗಾರಿಕೆಗಳೂ ಇರುವವು. ಅವುಗಳನ್ನೆಲ್ಲ ನಿರ್ವಹಿಸಲು ಶಿಕ್ಷಣವು ವ್ಯಕ್ತಿಗಳನ್ನು ಅಣಿಗೊಳಿಸಬೇಕಾಗುವದು. ಶಾರೀರಿಕ ಶಿಕ್ಷಣದಿಂದ ನಿರೋಗಿಯೂ, ಸುದೃಢವೂ ಆದ ಶರೀರ; ಅನುಭವ-ಅಧ್ಯಯನಗಳಿಂದ ಅಗತ್ಯವಿರುವ ವಿಷಯ ಜ್ಞಾನ-ತಿಳುವಳಿಕೆ- ಇವು ನಾಗರಿಕನಿಗೆ ಅವಶ್ಯವಾದವುಗಳು. ಇವುಗಳ ಜೊತೆಗೆ ಸಾಂಘೀಕ ಜೀವನಕ್ಕೆ ಸಹಾಯಕವೆನಿಸಿದ ಸದ್ಗುಣಗಳನ್ನು ಆತನಲ್ಲಿ ಬೆಳೆಸಿಕೊಂಡು ಬರಬೇಕು. ಪ್ರೀತಿ, ತಾಳ್ಮೆ, ವಿವೇಕ, ಔದಾರ್ಯ, ಪ್ರಾಮಾಣಿಕತೆ- ಮುಂತಾದ ಸಾಮಾಜಿಕ ಸದ್ಗುಣಗಳ ಬೀಜಗಳನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ, ಸಂದರ್ಭಸನ್ನಿವೇಶಗಳ ಪ್ರಯೋಜನವನ್ನು ಪಡೆದು, ನಾಳಿನ ನಾಗರಿಕರಾಗುವ ಇಂದಿನ ಚಿಕ್ಕ ಮಕ್ಕಳ ಹಸನವಾದ ಹೃದಯದಲ್ಲಿ ಶಿಕ್ಷಣವು ಬಿತ್ತಬೇಕಾಗುವುದು. ಇದನ್ನೇ ಶೀಲ ಸಂವರ್ಧನವೆಂದು ಹೇಳುವರು, ಬಹುಜನ ಶಿಕ್ಷಣ ಶಾಸ್ತ್ರಜ್ಞರು ಶೀಲಸಂವರ್ಧನವೆ ಶಿಕ್ಷಣದ ಏಕಮೇವ ಗುರಿಯೆಂದು ಹೇಳುವರು. ಸಾಮಾಜಿಕ ಜೀವನಕ್ಕೆ ಪ್ರತಿಕೂಲವಾಗಿರುವ ಕೀಳು ಭಾವನೆಗಳಿಗೆ ಬೆಳೆಯಲು ಅವಕಾಶಕೊಡದೆ, ಅವುಗಳಿಗೆ ಬೇರೊಂದು ಸರಿಯಾದ ದಾರಿಯನ್ನು ಹಾಕಿಕೊಟ್ಟು

ಉಜ್ವಲಗೊಳಿಸುವದೆ ಶೀಲ ಸಂವರ್ಧನೆ. ಈ ಶೀಲ ಸಂವರ್ಧನೆಯು ಒಳ್ಳೇ ಸೂಕ್ಷ್ಮ ವಾಗಿ ನಡೆಯಬೇಕಾದಕಾರ್ಯ.

ಇವೆಲ್ಲ ಸಂಗತಿಗಳನ್ನು ಒಂದುಗೂಡಿಸುವಂತೆ ಶಿಕ್ಷಣದ ಮೂಲೋದ್ದೇಶವನ್ನು ಬೇರೊಂದು ರೀತಿಯಲ್ಲಿಯೂ ಹೇಳುವದುಂಟು. 'ಪೂರ್ಣ ಜೀವನ' ಅಥವಾ ಜೀವನದ ಪರಿಪೂರ್ಣತೆಯು, ಶಿಕ್ಷಣದ ಗುರಿಯಾಗಿರಬೇಕೆಂದು ಕೆಲವರ ಮತ. ಈ ಉದ್ದೇಶವು ಹೆಚ್ಚು ವ್ಯಾಪಕವೆಂಬುದು ನಿಜ. ಆದರೆ ಜೀವನದ ಪರಿಪೂರ್ಣತೆಯನ್ನು ನಿರ್ಧರಿಸುವ ಬಗೆ ಯಾವುದು ? ಈ ಪರಿಪೂರ್ಣತೆಯು 'ಎಂದು'—'ಯಾವುದರಲ್ಲಿ' ಕೊನೆಗೊಳ್ಳುವ ದೆಂಬುದನ್ನು ಕಂಡುಹಿಡಿಯುವದು ತುಂಬಾ ಕಠಿಣವಾದುದು. ಸರ್ವಸಾಧಾರಣ ಬುದ್ಧಿಯ ಸಾಮಾನ್ಯಜನರಿಗೆ ಈ ಪರಿಪೂರ್ಣತೆಯ ಸ್ವರೂಪವು ತಿಳಿಯಲಾರದ ಮಾತು. ಈ ಮೊದಲು ಹೇಳಿದ ಶಿಕ್ಷಣದ ವಿವಿಧವಾದ ಉದ್ದೇಶಗಳೆಲ್ಲವೂ ಈ ಪರಿಪೂರ್ಣತೆಯಲ್ಲಿ ಸಮಾ ವೇಶವಾಗುವವು. ಇಷ್ಟೊಂದು ತೊಡಕಿನ, ತಾತ್ವಿಕವಾದ ಉದ್ದೇಶವನ್ನಿಟ್ಟುಕೊಳ್ಳುವದ ಕ್ಕಿಂತಲೂ, ಹೆಚ್ಚು ವ್ಯಾವಹಾರಿಕವಾದ, ತಿಳಿದುಕೊಳ್ಳಲು ಸುಲಭವಾದ, ಆಚರಿಸಲು ಅನು ಕೂಲವಾದ ಗೊತ್ತುಗುರಿಯನ್ನು ಶಿಕ್ಷಣಕ್ಕಾಗಿ ಕಲ್ಪಿಸುವದು ಹೆಚ್ಚು ಸಯುಕ್ತಿಕವಾದುದು.

'ವ್ಯಕ್ತಿಜೀವನವು ಸಾಮಾಜಿಕ ಜೀವನದೊಡನೆ ಸರಾಗವಾಗಿ ಹೊಂದಿಕೊಳ್ಳಬೇಕು. ಎರಡರ ಹಿತಗಳೂ ಅವಿರೋಧವಾಗಿರಬೇಕು; ಪರಸ್ಪರಪೂರಕವಾಗಿರಬೇಕು.' 'ಶಿಕ್ಷಣ ದಿಂದ ಮನಸ್ಸಿಗೆ ಒಳ್ಳೇ ಸಂಸ್ಕಾರ ದೊರೆಯಬೇಕು, ವಿವೇಚನಾಶಕ್ತಿಯು ಜಾಗೃತವಾಗ ಬೇಕು.' 'ವ್ಯಕ್ತಿಯು ತಾನು ಸಂಪಾದಿಸಿದ ಜ್ಞಾನವನ್ನು ಸಮಾಜದ ಕಲ್ಯಾಣಕ್ಕಾಗಿ ವಿನಿ ಯೋಗಿಸಬೇಕು.' 'ಮಾನವನ ಸಹಜಶಕ್ತಿಗಳೆಲ್ಲವೂ ಸಮರಸವಾಗಿ ಬೆಳೆಯಬೇಕು.' 'ತೇಜಸ್ವಿನಾವಧೀತಮಸ್ತು'—ಎಂದು ವೈದಿಕ ಋಷಿಗಳು ಸಾರಿದಂತೆ, ಶಿಕ್ಷಣವು ತೇಜಸ್ವಿ ಗಳಾದ, ಮೇಧಾವಿಗಳಾದ, ಸಮರ್ಥರಾದ ವ್ಯಕ್ತಿಗಳನ್ನು ನಿರ್ಮಿಸುವ ಸಾಧನವಾಗಬೇಕು. 'ಹಿಂದಿನ ಅನುಭವಗಳನ್ನು ಇಂದಿನ ಅನುಭವಗಳೊಡನೆ ಸರಿಯಾಗಿ ಹೊಂದಿಸಿಕೊಂಡು, ಬದುಕನ್ನು ಹೆಚ್ಚು ಉನ್ನತವಾಗಿ ಮಾಡಬೇಕು'— ಶಿಕ್ಷಣದ ಗೊತ್ತುಗುರಿಗಳನ್ನು ಈ ರೀತಿಯಾಗಿ, ಇನ್ನೂ ಅನೇಕಬಗೆಯಾಗಿ ಶಿಕ್ಷಣ ತಜ್ಞರು ತಮ್ಮ ತಮ್ಮ ದೃಷ್ಟಿಯಿಂದ ಕಂಡು ವಿವರಿಸಿರುವರು. ಜೀವನದೊಡನೆ ಸಮವ್ಯಾಪ್ತಿಯುಳ್ಳ ಶಿಕ್ಷಣದ ಸಮಗ್ರ ಸ್ವರೂಪದಿಂದ ತಮಗೆ ತಮಗೆ ಆಕರ್ಷಕವೆನಿಸಿದ ಒಂದೊಂದು ಅಂಶವನ್ನು ಅವರೆಲ್ಲರೂ ಎತ್ತಿ ತೋರಿಸು ವರು; ಅದಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟಿರುವರು.

ಶಿಕ್ಷಣದ ಮೂಲೋದ್ದೇಶಗಳನ್ನು ವಿವೇಚಿಸಿ ಅವುಗಳಬಗ್ಗೆ ಸರಿಯಾದ ತಿಳುವಳಿಕೆ ಯನ್ನು ಮಾಡಿಕೊಳ್ಳುವದು ಅತ್ಯವಶ್ಯವಾದುದು. ಈ ವಿವಿಧ ಗೊತ್ತುಗುರಿಗಳನ್ನು ತೂಗಿ ನೋಡಿ, ವ್ಯಾವಹಾರಿಕವಾಗಿ ಅವುಗಳಿಂದ ಪ್ರಯೋಜನವನ್ನು ಪಡೆಯುವದು ಶಿಕ್ಷಣಕಾರ್ಯ ದಲ್ಲಿ ತೊಡಗಿದವರು ಮಾಡಬೇಕಾದ ಕೆಲಸ. ಶಿಕ್ಷಣದ ಮಹೋನ್ನತವಾದ ಉದ್ದೇ ಶವು ಅವರ ಮನಸ್ಸಿನ ಹಿನ್ನೆಲೆಯಲ್ಲಿ ಸದಾ ಜಾಗೃತವಾಗಿರಬೇಕು. ಶಿಕ್ಷಣದ ಅಂಗೋ ಪಾಂಗಗಳೆಲ್ಲಿಯೂ ಅದರ ಪ್ರಭಾವವು ಒಡೆದು ಕಾಣಬೇಕು. ಶಿಕ್ಷಣದ ವಿಷಯಗಳನ್ನು ಆರಿಸುವಾಗ್ಗೆ, ಪಾಠದ ವಿಧಾನವನ್ನು ಗೊತ್ತುಪಡಿಸುವಾಗ್ಗೆ, ಮಕ್ಕಳ ಆಟಪಾಟಗಳನ್ನು

ಏರ್ಪಾಡುಮಾಡುವಾಗ್ಗೆ, — ಒಟ್ಟಿನಲ್ಲಿ ಶಿಕ್ಷಣಕಾರ್ಯದಲ್ಲಿ ಮಾಡುವದೆಲ್ಲವೂ ಈ ಮೂಲೋದ್ದೇಶಕ್ಕೆ ಅಧೀನವಾಗಿರಬೇಕು.

ಶಿಕ್ಷಣದ ಈ ಸದುದ್ದೇಶಗಳನ್ನು ತಿಳಿದುಕೊಂಡು ಅವುಗಳಿಂದ ಪ್ರೇರಿತರಾಗಿ ಮಾಡುವ ಶಿಕ್ಷಣಕಾರ್ಯವು ಅತ್ಯಂತ ಪವಿತ್ರವಾದುದು ; ರಾಷ್ಟ್ರನಿರ್ಮಾಣದ ಸಾಧನಗಳಲ್ಲಿ ಅತೀವ ಮಹತ್ವವಾದುದು. ನಾಳಿನ ನಾಗರಿಕರಾಗುವ ಇಂದಿನ ಮಕ್ಕಳಲ್ಲಿ ಶಿಕ್ಷಣದ ಈ ಸದುದ್ದೇಶಗಳೆಲ್ಲವೂ ಸಫಲವಾಗುವಂತೆ ಕರ್ತವ್ಯನಿಷ್ಠರಾದ ಶಿಕ್ಷಕರೆಲ್ಲರು ಎಲ್ಲ ರೀತಿಯಿಂದಲೂ ಸಾಹಸಪಡಬೇಕು. ಶಿಕ್ಷಕವೃತ್ತಿಯ ಬಗ್ಗೆ ಎಂದಿನಿಂದಲೂ ಇರುವ ಆದರವು ಇದೇ ಸಂಗತಿಯಲ್ಲಿಯೆ ನೆಲೆಸಿರುವದು. ಶರೀರ ಸಂವರ್ಧನೆ, ಬುದ್ಧಿವಿಕಾಸ, ಆತ್ಮೋನ್ನತಿ,—ಈ ಪವಿತ್ರವಾದ ತ್ರಿವೇಣಿಯ ಸಂಗಮದಲ್ಲಿ ಮೈದೊಳೆಯುವ ಮಗು ಸಮಾಜದ ಸ್ವಾಸ್ಥ್ಯ ಸುಸ್ಥಿತಿಗಳನ್ನು ಸಂರಕ್ಷಿಸಲು ಸಮರ್ಥನಾಗುವನು.

ಬೇರೆ ಬೇರೆ ಶಿಕ್ಷಣ ಶಾಸ್ತ್ರಜ್ಞರು ಶಿಕ್ಷಣಕ್ಕಾಗಿ ಕಲ್ಪಿಸಿಕೊಂಡಿರುವ ಗೊತ್ತುಗುರಿಗಳನ್ನು ಇದುವರೆಗೆ ವಿವೇಚಿಸಿದುದಾಯಿತು. ಈ ವಿವಿಧ ಗುರಿಗಳಲ್ಲಿ ಕಾಣಬರುವ ಸಾರವತ್ತಾದ ಅಂಶಗಳನ್ನು ಆಯ್ದುಕೊಳ್ಳಬೇಕು; ತಿಳಿದುಕೊಳ್ಳಬೇಕು. ಮೊದಲನೆಯದಾಗಿ ಶಿಕ್ಷಣವು ಜೀವನದೊಡನೆ ಹೊಂದಿಕೊಳ್ಳಬೇಕು ಹಿಂದಿನ ಶಿಕ್ಷಣದಲ್ಲಿ ಶಾಲೇಯ ಜೀವನಕ್ಕೂ ಹೊರಗಿನ ಜೀವನಕ್ಕೂ ಹೊಂದಿಕೆಯಿರಲಿಲ್ಲ. ಹೊಸ ಶಿಕ್ಷಣವು ಇವೆರಡನ್ನೂ ಸಮವಾಗಿ ಹೊಂದಿಸಿಕೊಳ್ಳಬೇಕು. ಸಾಮಾಜಿಕ ಜೀವನಕ್ಕೆ ಅಗತ್ಯವಾಗಿರುವ ಪ್ರಜ್ಞೆ ಹಾಗೂ ಸದ್ಗುಣಗಳನ್ನು ಪೋಷಿಸಿಕೊಂಡು ಬರಬೇಕು. 'ಜೀವನಮುಖಾಂತರವಾಗಿ ಜೀವಿಗೆ ಜೀವನಶಿಕ್ಷಣವನ್ನು ಕೊಡುವದು,' ಎಂದು ಮಾರ್ಮಿಕವಾಗಿ ಹೇಳುವದುಂಟು. ವಿಮುಖವಾಗಿ ದೂರ ಸಿಡಿದು ನಿಂತ ಜೀವನ ಹಾಗೂ ಶಿಕ್ಷಣಗಳ ಸಹಜ-ಸುಂದರವಾದ ಸಮನ್ವಯವನ್ನು ಸಾಧಿಸುವದೆ ಗುರಿಯಾಗಿರಬೇಕು. ಈ ಬಗೆಯ ಶಿಕ್ಷಣದಲ್ಲಿ (ಅ) ವ್ಯಕ್ತಿ ವಿಕಾಸಕ್ಕೆ ಪ್ರಾಧಾನ್ಯತೆ. ಮಗು ಚೈತನ್ಯ ಸ್ವರೂಪನು. ಆತನ ವಿಕಾಸವು ಸರ್ವತೋಮುಖವಾಗಬೇಕು. ಹಿಂದಿನ ಶಿಕ್ಷಣವು ಏಕಾಂಗಿಯಾಗಿತ್ತು. ಬುದ್ಧಿವಿಕಾಸಕ್ಕೆ ಮಾತ್ರ ಅದರಲ್ಲಿ ಆಸ್ಪದವಿತ್ತು. ಈ ಬುದ್ಧಿವಿಕಾಸವೂ ಜೀವನೋಪಯೋಗಿರಲಿಲ್ಲ. ಶ್ರೀ ವಿನೋಬಾಜಿಯವರು ಹೇಳುವಂತೆ ಅದು 'ಬುದ್ಧಿವಿಲಾಸ'ದಂತಿತ್ತು.

ಶಾರೀರಿಕ :— ಸರ್ವತೋಮುಖವಾದ ವಿಕಾಸವು ದೇಹ, ಬುದ್ಧಿ, ಹೃದಯ ಹಾಗೂ ಆತ್ಮ,— ಇವುಗಳಲ್ಲಿ ಯಾವುದನ್ನೂ ಕಡೆಗಣಿಸುವದಿಲ್ಲ. ಇವೆಲ್ಲವುಗಳ ಸಮರಸವಾದ, ಸಮನ್ವಿತವಾದ ವಿಕಾಸವನ್ನು ಸಾಧಿಸುವದೆ ಶಿಕ್ಷಣದ ಕಾರ್ಯ. ಇದುವೆ ಪೂರ್ಣ ಜೀವನ. ಶರೀರವು ನಿರೋಗಿಯಾಗಿರಬೇಕು. 'ನಿರೋಗಿಯಾದ ಶರೀರದಲ್ಲಿ ನಿರ್ದೋಷವಾದ ಮನಸ್ಸು' —ಇರುವದೆಂದು ಹೇಳುವರು. ಶಾಸ್ತ್ರೀಯವಾದ, 'ಸರ್ವಾಂಗ ಸುಂದರ'ವಾದ ವ್ಯಾಯಾಮಕ್ಕೆ ಉಳಿದ ವಿಷಯಗಳಷ್ಟೇ ಶಿಕ್ಷಣದಲ್ಲಿ ಪ್ರಾಧಾನ್ಯತೆಯಿರಬೇಕು.

ಬೌದ್ಧಿಕ :— ಮಗುವಿನಲ್ಲಿರುವ 'ಏಕೆ? ಹೇಗೆ?', ಯೆಂಬ ಕುತೂಹಲ ಪ್ರವೃತ್ತಿಯ ಪ್ರಯೋಜನವನ್ನು ಪೂರ್ಣವಾಗಿ ಪಡೆಯಬೇಕು. ಜಿಜ್ಞಾಸೆಯಿಂದ ಪಡೆ

ಯುವ ಜ್ಞಾನವನ್ನು 'ಹಸಿಯ ಗೋಡೆಯ ಮೇಲೆ ಹರಳಿಟ್ಟಂತೆ',—ಮಗು ಆತ್ಮಸಾತ್ ಮಾಡಿಕೊಳ್ಳುವದು. ಮೇಲಾಗಿ ಈ ವಿಷಯಜ್ಞಾನವು ಆತನಿಗೆ ಜೀವನಸ್ಪರ್ಶಿಯಾಗುವದು; ಪ್ರಯೋಜನಕಾರಿಯಾಗುವದು. ಬುದ್ಧಿಯು ಜಾಗೃತವಾಗಿ ವಿವೇಕ–ವಿವೇಚನ ಶಕ್ತಿಗಳ ವಿಕಾಸವಾಗುವದು.

**ಭಾವನಾತ್ಮಿಕ :—** ಹೃದಯ ಸಂಸ್ಕಾರ–ಭಾವಗಳ ಸಂಸ್ಕರಣವೂ ಸರ್ವತೋಮುಖ ವಿಕಾಸದ ಮತ್ತೊಂದು ಅಂಗವಾಗಿದೆ. ಹಿಂದಿನ ಶಿಕ್ಷಣದಲ್ಲಿ ಭಾವಗಳ ಸಂಸ್ಕರಣಕ್ಕೆ ಸ್ಥಾನವಿರಲಿಲ್ಲ. ಈ ಶಿಕ್ಷಣವನ್ನು ಪಡೆದ ಇಂದಿನ ವ್ಯಕ್ತಿಗಳಲ್ಲಿ ಸ್ವಾರ್ಥಸ್ಪರ್ಧೆಗಳು ತುಂಬಿಕೊಂಡಿರುವದಕ್ಕೆ ಇದೇ ದೋಷವೆ ಕಾರಣವೆಂದು ಹೇಳುವರು. ಕೇವಲ ಬೌದ್ಧಿಕ ಶಿಕ್ಷಣದಿಂದ—'ತಾನಾಯಿತು–ತನ್ನವರಾಯಿತು'; 'ಎಲ್ಲವೂ ತನಗಾಗಿ',–ಎಂಬುವ ಸಂಕುಚಿತ ಭಾವನೆಯು ಬೆಳೆದು ಬರುವದು. ಉದ್ಯೋಗ ಮೂಲವಾದ ಶಿಕ್ಷಣದಲ್ಲಿ ಮಗುವಿಗೆ ಸಹಾಯ–ಸಹಕಾರಗಳ ಅಗತ್ಯವು ಹೆಜ್ಜೆ ಹೆಜ್ಜೆಗೆ ಅನಿಸುವದು. ನೆರವು ಸಹಕಾರ ಆತನಿಗೆ ರೂಢವಾಗುವವು. ಪ್ರೀತಿ ಬಂಧು ಭಾವಗಳು ಬೆಳೆಯುವವು. ಎಲ್ಲರ ಹಿತದಲ್ಲಿ ತನ್ನ ಹಿತವನ್ನು ಕಾಣುವ ಮನೋವಿಶಾಲತೆ ಸಹಜವಾಗಿ ಉಂಟಾಗುವದು. ವ್ಯಕ್ತಿವಿಕಾಸದಲ್ಲಿ ಭಾವಗಳ ಶಕ್ತಿಯು ಪ್ರಬಲವಾಗಿರುವದು. 'ಗಡಿಯಾಳದ ಸ್ಪ್ರಿಂಗ'ದಂತೆ ಆಂತರಿಕ ಭಾವಗಳೆ ನಮ್ಮ ಬಾಹ್ಯಕ್ರಿಯೆಗಳಿಗೆಲ್ಲ ಪ್ರೇರಕ–ಪ್ರಚೋದಕ ಶಕ್ತಿಗಳಾಗಿರುವವು. ಭಾವಗಳ ಸಂಸ್ಕರಣದಲ್ಲಿ 'ದಬ್ಬಾಳಿಕೆ' ಸಲ್ಲದು. ಅದರಿಂದ ಅನೇಕ 'ಮಾನಸಿಕ ತೊಡಕು'ಗಳು ಉಂಟಾಗಿ ಆ ವ್ಯಕ್ತಿಯ ಜೀವನವನ್ನೇ ವಿಕೃತಗೊಳಿಸುವವು. ಭಾವಶಕ್ತಿಗಳನ್ನು ಹಿತವಾದ ಕಾರ್ಯಗಳಲ್ಲಿ ತೊಡಗಿಸಬೇಕು. ಅವುಗಳನ್ನು 'ಉಜ್ವಲ'ಗೊಳಿಸಬೇಕು.

**ಆಧ್ಯಾತ್ಮಿಕ :—** ಸೃಷ್ಟಿಯ ಚೆಲುವು ನಲಿವುಗಳನ್ನು ಮಗು ನೋಡುತ್ತಿದೆ. ನಿಸರ್ಗದ ಕಾರ್ಯಗಳನ್ನು ನಿತ್ಯವೂ ನಿರೀಕ್ಷಿಸುತ್ತದೆ. ಸೂರ್ಯಚಂದ್ರರ ಉದಯಾಸ್ತಗಳು, ಋತುಗಳ ಬರುವಿಕೆ, ಗಿಡಗಂಟೆಗಳು ಚಿಗುರಿ–ಹೂತು–ಫಲಿಸುವದು,— ಎಲ್ಲವೂ ಸರಾಗವಾಗಿ, ಸಕಾಲಿಕವಾಗಿ ನಡೆಯುತ್ತಿದೆ. ನಿಸರ್ಗದ ಎಲ್ಲ ಕೃತಿಗಳಲ್ಲಿಯೂ ತಾಳ–ಲಯ–ಕ್ರಮಗಳು ಕಂಡುಬರುವವು. ಯಾವುದೂ ಅನಿಯಮಿತವಾಗಿ ಯಾಂತ್ರಿಕನಾಗಿ ನಡೆಯುವದಿಲ್ಲ. ಕಲ್ಯಾಣಕಾರಿಯಾದ ಒಂದು ಅದೃಶ್ಯ ಶಕ್ತಿಯು ಇವುಗಳನ್ನು ನಡೆಸುವದೆಂಬ ಮನವರಿಕೆಯು ಮಗುವಿಗಾಗುವದು. ಮಂಗಳಕರವಾದ ಆ ಶಕ್ತಿಗೆ ತಲೆಬಾಗಬೇಕು; ಅದಕ್ಕೆ ಒಪ್ಪಿತವಾಗುವ ರೀತಿಯಲ್ಲಿ ತನ್ನ ಜೀವನವನ್ನು ಸಾಗಿಸಬೇಕು–ಎಂಬ ಆಧ್ಯಾತ್ಮ ಭಾವನೆಯು ಆತನಲ್ಲಿ ಅಂಕುರಿಸುವದು. ಇಂದಿನ ಸಮಾಜದಲ್ಲಿ ಸಾರ್ವತ್ರಿಕವಾಗಿ ಕಾಣುವ ದುಷ್ಟ ಪ್ರವೃತ್ತಿಗಳಿಗೆ ಆಧ್ಯಾತ್ಮಿಕ ಭಾವನೆಯ ಅಭಾವವೆ ಮೂಲ ಕಾರಣವೆಂದು ತಿಳಿದವರು ಹೇಳುವರು. ಆಧ್ಯಾತ್ಮ ದೃಷ್ಟಿಯಿದ್ದರೆ, ವ್ಯಕ್ತಿಯು ಪಾಪ ಭೀರು ಆಗುವನು; ಸಮಾಜ ವಿಘಾತುಕ ಕೃತಿಗಳಿಗೆ ಹೇಸುವನು. ಇಂಥ ವ್ಯಕ್ತಿಗಳಿಂದ ಕೂಡಿದ ಸಮಾಜದಲ್ಲಿ ಸುಖ–ಸ್ವಾಸ್ಥ್ಯಗಳು ನೆಲಿಸುವವು.

**(ಬ) ಮಾನವ ಸಮಾಜ ಜೀವಿ. :—** ಆತನು ಒಂಟಿಗನಾಗಿ ಬಾಳಲಾರನು. ಶಿಕ್ಷಣವು ಸಾಮಾಜಿಕ ಜೀವನಕ್ಕೆ ಮಗುವನ್ನು ಅಣಿಗೊಳಿಸಬೇಕಲ್ಲವೆ? ವ್ಯಕ್ತಿಗಳ

ಗೊಂಡೇ- ಸಮಷ್ಟಿ, ಸಮಾಜ. ಸಮಾಜವೆಂಬುದು ಪ್ರತ್ಯೇಕವಾಗಿಲ್ಲ. ವ್ಯಕ್ತಿ, ಸಮಾಜದ ಘಟಕ; ಸಮಾಜ, ವ್ಯಕ್ತಿಯ ಪೋಷಕ. ಒಳ್ಳೇ ಸಮಾಜ ಒಳ್ಳೇ ವ್ಯಕ್ತಿಗಳನ್ನು ರೂಪಿಸುವದು. ವ್ಯಕ್ತಿ ಸಮಾಜಗಳ ಅನುಬಂಧವು ಪರಸ್ಪರ ಪೋಷಕ-ಸಹಾಯಕವಾಗಿದೆ. ಸೂರ್ಯ-ಜಲಾಶಯಗಳಂತೆ ಇವೆರಡರಲ್ಲಿ ಕೊಡ ತೆಗೆದು ಕೊಳ್ಳುವ ವ್ಯವಹಾರವಿರಬೇಕು. ಸೂರ್ಯನು ಜಲಾಶಯಗಳಿಂದ ನೀರನ್ನು ಹೀರಿಕೊಳ್ಳುತ್ತಾನೆ. ಅದನ್ನೇ ಮಳೆಯ ರೂಪದಿಂದ ಮರಳಿ ಕೊಟ್ಟು ಜಲಾಶಯಗಳನ್ನು ಮತ್ತೆ ತುಂಬುತ್ತಾನೆ. ಸಮಾಜದ ನೆರವಿನಿಂದಲೆ ಮಗು ತನ್ನಲ್ಲಿರುವ ಸ್ವಾಭಾವಿಕ ಶಕ್ತಿಗಳನ್ನು ಪ್ರಕಟಗೊಳಿಸುವದು. ಹೊಸ ಶಿಕ್ಷಣದಲ್ಲಿ ಇದಕ್ಕೆ 'ಆತ್ಮ ಪ್ರಕಾಶನ' ವೆಂದು ಹೇಳುವರು. ಸಾಮಾಜಿಕ ಜೀವನವೆ ಮಗುವಿನ ಪ್ರಗತಿಗೆ ಪ್ರೇರಕವಾಗುವದು; ಆತನ ಶಕ್ತಿಗಳ ವಿಕಾಸಕ್ಕೂ ಅದುವೇ ಸಾಧನ. ಸಮಾಜದಿಂದ ತಾನು ಬಹು ಮುಖ್ಯವಾಗಿ ಪ್ರಯೋಜನವನ್ನು ಪಡೆಯುತ್ತಿರುವನೆಂಬ ತಿಳುವಳಿಕೆ ಮಗುವಿಗೆ ಉಂಟಾಗಬೇಕು. ಅದಕ್ಕೆ ಪ್ರತಿಯಾಗಿ ತಾನೂ ಸಮಾಜಕ್ಕೆ ಸೇವೆ ಸಲ್ಲಿಸಬೇಕೆಂಬ ಭಾವನೆಯನ್ನು ಜಾಗೃತಗೊಳಿಸಬೇಕು. ಈ ಭಾವನೆಯೆ ಸಾಮಾಜಿಕ ಪ್ರಜ್ಞೆ.

ಸಾಮಾಜಿಕ ಪ್ರಜ್ಞೆ ವ್ಯಕ್ತಿಯಲ್ಲಿ ಜಾಗೃತವಾದರೆ, ಸಾಮಾಜಿಕ ಜೀವನಕ್ಕೆ ಆತನು ತನ್ನನ್ನು ಚನ್ನಾಗಿ ಅಣಿಗೊಳಿಸುವನು. ತನ್ನ ಪಾತ್ರತೆ-ಸಮರ್ಥನೆಗಳನ್ನು ಹೆಚ್ಚಿಸಿಕೊಳ್ಳುವನು. ( i ) ಮೊದಲನೆಯದಾಗಿ ತಾನು ಸುದೃಢನಾಗಬೇಕು, ನಿರೋಗಿಯಾಗಬೇಕು. ರೋಗ ಬಂದ ಬಳಲುವವನು ತನಗೂ, ಉಳಿದವರಿಗೂ ತಲೆಭಾರನಾಗುವನು; ದುರ್ಬಲನು ಹೇಡಿಯಾಗಬಹುದು; ದೃಢಕಾಯವುಳ್ಳವನು ಸ್ವಹಿತವನ್ನೂ ಸಾಧಿಸಬಹುದು; ಪರೋಪಕಾರವನ್ನೂ ಮಾಡಬಹುದು. ಶಿಕ್ಷಣದ ಗುರಿಯನ್ನು ಗೊತ್ತುಪಡಿಸುವಾಗ್ಗೆ, ಶರೀರ ಸಂವರ್ಧನೆಗೆ ಸರಿಯಾದ ಸ್ಥಾನವನ್ನು ಕೊಡಬೇಕಾಗುವುದು. ( ii ) ಕುಟುಂಬದ ಹಿತದಲ್ಲಿ ಅವರಿಗಾಗಿ ತಾನು ಮಾಡಲೇಬೇಕಾದ ಕರ್ತವ್ಯದಲ್ಲಿ ಹವಣುಮೀರದ ಆಸ್ಥೆ-ದಕ್ಷತೆಗಳು ಉಂಟಾಗುವಂತೆ ಶಿಕ್ಷಣವು ನೋಡಿಕೊಳ್ಳಬೇಕು. ತ್ಯಾಗ-ತಾಪತ್ರಯಗಳಿಂದ ಕುಟುಂಬವು ತನ್ನನ್ನು ಬೆಳೆಯಿಸಿ ದೊಡ್ಡವನನ್ನಾಗಿ ಮಾಡಿರುವದು. ಒಟ್ಟು ಕುಟುಂಬದ ಹಿತಕ್ಕಾಗಿ ಅವಶ್ಯವೆನಿಸಿದರೆ, ಸ್ವಪ್ರಯೋಜನವನ್ನು ಬಿಟ್ಟುಕೊಡುವ ಪ್ರವೃತ್ತಿಯು ಅವನಲ್ಲಿ ಹುಟ್ಟಿದುಬರಬೇಕು. ಸ್ವಾರ್ಥ ತ್ಯಾಗದ ಪ್ರಥಮಪಾಠವು ಕೌಟುಂಬಿಕ ಜೀವನದಲ್ಲಿಯೆ ದೊರೆಯುವದೆಂದು ಹೇಳುವರು. ( iii ) ಶಿಕ್ಷಣವು ವ್ಯಕ್ತಿಗೆ ಆರ್ಥಿಕ ಸ್ವಾವಲಂಬನವನ್ನು ತಂದುಕೊಡಬೇಕು. ತನ್ನ ದುಡಿತದಿಂದ ಜೀವನಾರ್ಥ ನಿರ್ವಹಣೆಯ ( Bread and Butter Education ) ಶಿಕ್ಷಣದ ಮೂಲೋದ್ದೇಶವೆಂದು ಹೇಳುವವರುಂಟು. ಮೂಲ ಶಿಕ್ಷಣದ ಉದ್ದೇಶಗಳಲ್ಲಿ ಇದೂ ಒಂದಾಗಿದೆ. ಶಿಕ್ಷಣವನ್ನು ಪಡೆದ ಎಲ್ಲ ವ್ಯಕ್ತಿಗಳು ಜೀವನೋಪಯೋಗಿಯಾದ ವೃತ್ತಿಗಳಲ್ಲಿ ತೊಡಗಿಕೊಂಡರೆ, ನಿರುದ್ಯೋಗದ ಸಮಸ್ಯೆಯೂ ತಪ್ಪುವದು. ( iv ) ಹಬ್ಬಗಳು, ತೇರು, ಜಾತ್ರೆ, ಜಯಂತಿ, ಮುಂತಾದ ಉತ್ಸವಗಳು ಜನಸಾಂಗ ನಮ್ಮಿಂದಿಗಾಗಿ ನಿರ್ಮಿತವಾಗಿವೆ. 'ಗಾಣದ ಎತ್ತಿ'ನಂತಿರುವ ಜೀವನದ ನೀರಸತೆಯನ್ನು ಅವು ನಿವಾರಿಸುವವು. ಈ ಲೋಕದ ಸುಖಕ್ಕೂ ಪರಲೋಕದ ಸುಖಕ್ಕೂ ಇವು ಸೋಪಾನಗಳಾಗಿವೆ. ಈ ಸಂದರ್ಭಗಳಲ್ಲಿ ಬಂಧುಗಳೆಲ್ಲರೂ ಕೂಡಿಕೊಳ್ಳುವರು.

ಜಾತಿ-ಮತ-ಪಂಥಗಳ ಭೇದವಿಲ್ಲದೆ ವಿದ್ಯಾರ್ಥಿಗಳೆಲ್ಲರೂ ಶಾಲೆಯ ಉತ್ಸವಗಳಲ್ಲಿ ಭಾಗ ವಹಿಸುವರು. ಭಾರತೀಯರ ಪ್ರತಿಯೊಂದು ಹಬ್ಬವೂ ಒಂದು ದೇವತೆ ಇಲ್ಲವೆ ಒಬ್ಬ ಮಹಾ ಪುರುಷನ ಗೌರವಕ್ಕಾಗಿ. ಮಕ್ಕಳ ಹೃದಯ ಸಂಸ್ಕಾರಕ್ಕೂ ಇದರಿಂದ ಒಳ್ಳೇ ಸಹಾಯ ವಾಗುತ್ತದೆ. ರಾಷ್ಟ್ರದ ಐಕ್ಯ ಸಂವರ್ಧನೆಗೆ, ಹಾಗೂ ಜಾಗೃತಿಗೆ ಇವು ಸಮರ್ಥಸಾಧನ ಗಳಾಗಿ ಬೆಳೆದು ಬಂದಿವೆ. ಅಂತೆಯೆ ಶಿಕ್ಷಣದಲ್ಲಿ ಈ ಬಗೆಯ ಸಾಂಸ್ಕೃತಿಕ ಚಟುವಟಿಕೆ ಗಳಿಗೆ ಇಂದು ಮಹತ್ವದ ಸ್ಥಾನ ದೊರೆತಿದೆ. ಹಬ್ಬ ಹುಣ್ಣಿಮೆಗಳು ಇಂದು ಕೇವಲ 'ಹೋಳಿಗೆಯ ಊಟದ ದಿನ'ಗಳಾಗಿ ಉಳಿದಿಲ್ಲ. ಸಮಾಜದ ಸಂಘಟನೆ, ಸುಸ್ಥಿತಿ ಹಾಗೂ ಪರಿವರ್ತನೆಗಳಿಗಾಗಿ ಅವುಗಳಿಂದ ವಿಶೇಷ ಪ್ರಯೋಜನವನ್ನು ಪಡೆಯಲಾಗುತ್ತಿದೆ.

(ಕ) ಒಳ್ಳೇ ನಾಗರಿಕರನ್ನು ನಿರ್ಮಾಣಗೊಳಿಸುವದೆ ಶಿಕ್ಷಣದ ಗುರಿಯೆಂದು ಕೆಲವರ ಹೇಳಿಕೆ. ಒಳ್ಳೇ ನಾಗರಿಕನಲ್ಲಿ ಯಾವ ಪಾತ್ರತೆ ಯಾವ ಸದ್ಗುಣಗಳನ್ನು ಶಿಕ್ಷಣವು ತಂದುಕೊಡಬೇಕೆಂಬುವದನ್ನು ಹಿಂದೆ ವಿವರವಾಗಿ ಹೇಳಿದೆ. ಮೂಲ ಶಿಕ್ಷಣವನ್ನು ಪಡೆ ಯುವ ಮಗು ನಾಗರಿಕತ್ವದ ತರಬೇತಿನಲ್ಲಿ ಮೊದಲು ಹೆಜ್ಜೆಯನ್ನಿಡುವದು. ಶಾಲೆಯ ಪಂಚಾಯತಿ, ನ್ಯಾಯ ಸಭೆ,-ಇವುಗಳಲ್ಲದೆ ಮೂಲೋದ್ಯೋಗದ ಕೃತಿಗಳಲ್ಲಿ ಶ್ರಮ ವಿಭಾಗ, ಕಾರ್ಯದರ್ಶಿಗಳನ್ನು 'ಮತದಾನ'ದಿಂದ ಆಯ್ಕೆ ಮಾಡುವದು, ಇವೇ ಮುಂತಾದ ವಿಧಾನ ಗಳು ಇಂದಿನ ಮಗುವಿಗೆ 'ನಾಳಿನ ನಾಗರಿಕನಾಗುವ ಪಾತ್ರತೆಯನ್ನು ತಂದುಕೊಡುವವು.

ತಾತ್ವಿಕವಾಗಿ ಒಂದು ರಾಷ್ಟ್ರದ ಶಿಕ್ಷಣ ಯೋಜನೆಯು ಅಲ್ಲಿಯ ಜನತೆಯ ಜೀವ ನಕ್ಕೆ ಸಮರಸವಾಗಿ ಹೊಂದಿಕೊಳ್ಳಬೇಕು. ಜನತೆಯ ಆಶೆ-ಆಕಾಂಕ್ಷೆಗಳ ಪ್ರತೀಕವಾಗಿರ ಬೇಕು. ಆ ರಾಷ್ಟ್ರದ ಸಂಸ್ಕೃತಿ ಸಂಪ್ರದಾಯಗಳ ಸತ್ವವನ್ನು ಒಳಗೊಂಡಿರಬೇಕು. ಶಿಕ್ಷಣ ದಲ್ಲಿ ಈ ರಾಷ್ಟ್ರೀಯತೆಯು ಅನಿವಾರ್ಯವಾದುದು. ಇವೆಲ್ಲ ಸಂಗತಿಗಳು ಜೀವನವನ್ನು ರೂಪಿಸುವ ಶಕ್ತಿಗಳು. ಭೌಗೋಲಿಕ ಪರಿಸ್ಥಿತಿಯೂ ಐತಿಹಾಸಿಕ ಘಟನೆಗಳೂ ಶಿಕ್ಷಣದ ಸಂಘಟನೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುವವು. ಜನತೆಯ ಆರ್ಥಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಬೇಡಿಕೆಗಳನ್ನು ಒದಗಿಸುವಂತೆ ಶಿಕ್ಷಣದ ಗೊತ್ತುಗುರಿಗಳನ್ನೂ, ರೀತಿ ವಿಧಾನಗಳನ್ನೂ ಕಲ್ಪಿಸಬೇಕಾಗುವದು.

ರಾಷ್ಟ್ರೀಯ ಮಹಾಕಾವ್ಯಗಳೆನಿಸಿದ ರಾಮಾಯಣ-ಮಹಾಭಾರತಗಳು, ಐತಿ ಹಾಸಿಕ ವೀರ ಪುರುಷರು, ಸಮಕಾಲೀನರಾದ ಮಹಾಪುರುಷರು-ಇವರೆಲ್ಲರ ಯಥಾರ್ಥ ವಾದ ಪರಿಚಯವನ್ನು ಉಚಿತವಾದ ಸಂದರ್ಭ-ಸನ್ನಿವೇಶಗಳಲ್ಲಿ ಮಕ್ಕಳಿಗೆ ಮಾಡಿಕೊಡ ಬೇಕು. ಇಂಥ ಮಹಾಪುರುಷರಿಗೆ ಜನ್ಮಕೊಟ್ಟ ತಮ್ಮ ನಾಡಿನ ಬಗ್ಗೆ ಅವರಲ್ಲಿ ಪ್ರೀತಿ-ಆದರ ಗಳು ಜನಿಸುವವು; ಇದೇ ರಾಷ್ಟ್ರಾಭಿಮಾನ. ತಮ್ಮ ನಾಡಿನ ಬಗ್ಗೆ ತಾವಾದರೂ ಯಥಾ ಶಕ್ತಿ ಸೇವೆಸಲ್ಲಿಸಬೇಕೆಂಬ ಭಾವನೆಯೆ ರಾಷ್ಟ್ರಪ್ರೇಮ. ಆದರೆ ಈ ವಿಷಯದಲ್ಲಿ ಒಂದು ದಕ್ಷತೆಯನ್ನು ವಹಿಸಬೇಕು. ರಾಷ್ಟ್ರಾಭಿಮಾನವು ಸತ್ಯ ಅಹಿಂಸೆಗಳ ಭದ್ರವಾದ ತಳಹದಿಯ ಮೇಲೆ ನಿಲ್ಲಬೇಕು. ಅತಿರೇಕವಾದ ರಾಷ್ಟ್ರಾಭಿಮಾನವು ವ್ಯಕ್ತಿಗಳ ಹೃದಯವನ್ನೇ ವಿಕೃತಿ ಗೊಳಿಸುವದು. ತನ್ನ ರಾಷ್ಟ್ರಕ್ಕಾಗಿ ನೀತಿ-ನ್ಯಾಯಗಳನ್ನು ಬದಿಗೊತ್ತಿ ಯಾವ ಅಕೃತ್ಯವನ್ನು ಮಾಡಲು ಇಂಥವರು ಹಿಂದುಮುಂದೆ ನೋಡುವದಿಲ್ಲ. ಕಳೆದ ಎರಡು ಮಹಾಯುದ್ಧ

ಗಳಿಗೆ ಈ ಬಗೆಯ ಮನೋವೃತ್ತಿಯೆ ಕಾರಣವೆಂದು ಬಲ್ಲವರು ಹೇಳುವರು. ಸ್ವಾರ್ಥಮಯವಾದ ಈ ಸಂಕುಚಿತ ಭಾವನೆಯಿಂದ ಜಗತ್ತು ಈಗಾಗಲೆ ಸಾಕಷ್ಟು ದುಃಖಿಯಾಗಿದೆ. ಸಾಧುವಾದ ಶಿಕ್ಷಣ ಯೋಜನೆಯು ಮಕ್ಕಳನ್ನು ಈ ಮನೋವೃತ್ತಿಯಿಂದ ದೂರವಾಗಿರಿಸಬೇಕು. ಸಮಗ್ರ ಮಾನವ ಕುಲದ ಪರಸ್ಪರಾವಲಂಬಿತ್ವ ಹಾಗೂ ಬಾಂಧವ್ಯದ ದೃಷ್ಟಿ ಅವರಲ್ಲಿ ಮೂಡವಂತಾಗಬೇಕು. ಇದೇ ಅಂತರ್ ರಾಷ್ಟ್ರೀಯತೆ. 'ವಸುಧೈವ ಕುಟುಂಬಕಂ' ಎಂಬ ಮಾತುಗಳಲ್ಲಿ ಇದೇ ತತ್ವವನ್ನೇ ಭಾರತದ ಋಷಿಗಳು ವಿವರಿಸಿರುವರು. 'ಸಹಜೀವನದ' ಬೆಳಕನ್ನು ಭಾರತವು ಇಂದು ಜಗತ್ತಿಗೆ ಕೊಟ್ಟು ತನ್ನ ಸಂಸ್ಕೃತಿಯ ಹಿರಿಮೆಯನ್ನು ಎತ್ತಿ ತೋರಿಸಿದೆ. ನೀರಿನ ಅಲೆಗಳಂತೆ ಮಕ್ಕಳ ಸಹಾನುಭೂತಿ-ಸದ್ಭಾವನೆಗಳು ವಿಶಾಲವಾಗುತ್ತ ಹೋಗಬೇಕು. ಸಮರ್ಪಕವಾದ ಶಿಕ್ಷಣವು ಇದನ್ನೇ ತನ್ನ ಗುರಿಯಾಗಿ ಇಟ್ಟುಕೊಳ್ಳಬೇಕು.

## ಅಭ್ಯಸನಗಳು

೧. ಶಿಕ್ಷಣಕ್ಕೆ ಗೊತ್ತುಗುರಿ ಇರಬೇಕೆ ?

೨. ಶಿಕ್ಷಣದ ಸರ್ವಮಾನ್ಯವಾದ ಗುರಿ ಯಾವುದು ?

೩. ಪ್ರಾಚೀನ ಭಾರತದಲ್ಲಿ ಶಿಕ್ಷಣದ ಗುರಿ ಯಾವುದಿತ್ತು ? ಅದರ ನ್ಯೂನತೆ ಯಾವುದು ?

೪. ಆಧುನಿಕ ಶಿಕ್ಷಣದ ಸ್ವರೂಪವೇನು ?

೫. ಶಿಕ್ಷಣವು ಸಾಧಿಸಬೇಕೆನ್ನುವ ದ್ವಿಮುಖವಾದ ವ್ಯಕ್ತಿವಿಕಾಸವು ಯಾವುದು ?

೬. 'ಹೊಟ್ಟೆಯ ಪಾಡಿಗಾಗಿ'; 'ಪೂರ್ಣ ಜೀವನ'— ಶಿಕ್ಷಣದ ಈ ಗೊತ್ತುಗುರಿಗಳ ಗುಣದೋಷಗಳನ್ನು ವಿವೇಚಿಸಿರಿ.

೭. ಆತ್ಮಪ್ರಕಾಶನವೆಂದರೇನು? ಸರ್ವಾಂಗೀಣವಾದ ವಿಕಾಸದಲ್ಲಿ ಯಾವ ಅಂಗಗಳಿರುವವು?

೮. ಹಬ್ಬಗಳ ಶೈಕ್ಷಣಿಕ ಮಹತಿಯಾವುದು ?

೯. ರಾಷ್ಟ್ರಪ್ರೇಮವು ಹೇಗೆ ಅಂಕುರಿಸುವದು ? ಆ ಬಗ್ಗೆ ವಹಿಸಬೇಕಾದ ದಕ್ಷತೆ ಯಾವುದು ?

# ೩. ಶಿಕ್ಷಣದಲ್ಲಿ ಸಹಕರಿಸುವ ಸಂಸ್ಥೆಗಳು

ಹಿಂದೆ ವಿವರಿಸಿದಂತೆ ಶಿಕ್ಷಣದ ಸ್ವರೂಪವು ದ್ವಿವಿಧವಾಗಿದೆ— ವ್ಯಾಪಕ ಹಾಗೂ ಮರ್ಯಾದಿತವೆಂಬುದಾಗಿ. ತಾಯಿಯ ಗರ್ಭದಲ್ಲಿ ಮೂಡಿದಂದಿನಿಂದ ಭೂಗರ್ಭದಲ್ಲಿ ಬೆರೆಯುವವರೆಗೆ ವ್ಯಕ್ತಿಗೆ ಈ ವ್ಯಾಪಕ ಶಿಕ್ಷಣವು ದೊರೆಯುತ್ತಿದೆ. ಪ್ರತ್ಯಕ್ಷ ಜೀವನಕ್ಕಿಂತಲೂ ಈ ಶಿಕ್ಷಣದ ಅವಧಿಯು ಹೆಚ್ಚು ವಿಶಾಲವಾದುದೆನ್ನಬಹುದು. ನೋಡುವದು, ಕೇಳುವದು, ಇಂದ್ರಿಯಗಳಿಂದ ನಡೆಯುವ ಎಲ್ಲ ಕಾರ್ಯಗಳೂ ಈ ಶಿಕ್ಷಣದ ವಿಧಾನಗಳು. ಜೀವನದಲ್ಲಿ ಒದಗುವ ಅನುಭವಗಳೆ ಅಭ್ಯಾಸ ಪತ್ರಿಕೆ. ಜೀವನ ಕ್ಷೇತ್ರವೆ ಬಾಲಾಗೃಹ. ಈ ಶಾಲೆಯಲ್ಲಿ ವೇಳಾಪತ್ರಿಕೆಯ ಗುಲಾಮಗಿರಿಯಿಲ್ಲ. ಗಂಟೆಗಳ ಗಲಾಟೆಯಿಲ್ಲ. ವೇತನದ ಉಪಾಧ್ಯಾಯರಿಲ್ಲ. ಪುಸ್ತಕಗಳಿಗಾಗಿ ವೆಚ್ಚಮಾಡಬೇಕಿಲ್ಲ. ಸಾಮಾನ್ಯ ಜನರ ತಿಳುವಳಿಕೆ

ವುಲ್ಲಿ ಇದಕ್ಕೆ ಶಿಕ್ಷಣವೆಂಬ ಅಭಿಧಾನವೂ ಸಲ್ಲುವದಿಲ್ಲ. ಬೆಳೆಯುವ ಮಗುವಿನ ಗೃಹ ಜೀವನ, ಗೆಳೆತನ, ಆಟಪಾಟಗಳು, ಸಾಮಾಜಿಕ ಸಂಬಂಧಗಳು— ಇವೇ ಮೊದಲಾದ ಸಂಪರ್ಕಗಳು, ಚಟುವಟಿಕೆಗಳು ಈ ಶಿಕ್ಷಣದ ಅಂಗಗಳೆನಿಸುವವು. ಜೀವನದ ಮುಕ್ಕಾಲು ಅವಧಿಯಲ್ಲಿ ಈ ಶಿಕ್ಷಣದ ಕಾರ್ಯಕ್ಕೆ ನಾವು ಅಧೀನರಾಗಿರುವೆವು. ಅದರ ಪ್ರಭಾವವು ಅಜ್ಞಾತವಾಗಿ ನಮ್ಮ ಮನಸ್ಸು ಬುದ್ಧಿ ಹಾಗೂ ಹೃದಯಗಳನ್ನು ರೂಪಿಸುತ್ತಿರುವದು; ನಮ್ಮ ಶೀಲದ ಅಸ್ತಿಭಾರವನ್ನು ರಚಿಸುತ್ತಿರುವದು.

ಈ ವಿಶಾಲ ಶಿಕ್ಷಣದಲ್ಲಿ ಸಹಕರಿಸುವ ಸಂಸ್ಥೆಗಳೂ ವಿವಿಧವಾಗಿವೆ :-(೧) ಕುಟುಂಬ; (೨) ಧಾರ್ಮಿಕ ಸಂಸ್ಥೆಗಳು; (೩) ಪತ್ರಿಕೆಗಳು; (೪) ಬಾನುಲಿ; (೫) ಚಲಚಿತ್ರಗಳು; (೬) ಜಾತ್ರೆಗಳು; (೭) ಉತ್ಸವಗಳು; (೮) ವಾಚನಾಲಯಗಳು; (೯) ಸರಕಾರ.... ಮುಂತಾದವುಗಳು ಇವುಗಳಲ್ಲಿ ಪ್ರಧಾನವಾದವುಗಳೆನ್ನಬಹುದು.

(೧) **ಕುಟುಂಬದ ಪ್ರಭಾವ** :- ಮಗುವಿನ ಮುಂದಿನ ಜೀವನಕ್ಕೆ ಆತನು ಯಾವ ಕುಟುಂಬದಲ್ಲಿ ಬೆಳೆದು ದೊಡ್ಡವನಾಗುವನೊ, ಆ ಜೀವನವೇ ತಳಹದಿಯಾಗುವದು ಮಗುವಿನ ಶೀಲವರ್ಧನೆಯಲ್ಲಿ, ಬುದ್ಧಿವಿಕಾಸದಲ್ಲಿ ಈ ಕುಟುಂಬ ಜೀವನದ ಪ್ರಭಾವವು ಅತಿ ಮುಖ್ಯವಾದುದು ; ಅದ್ವಿತೀಯವಾದುದು—ಎಂತಲೂ ಹೇಳಬಹುದು. ಒಂದೇ ತಾಯಿಯ ಎರಡು ಗಿಳಿಮರಿಗಳು, ಒಂದು ಮಠದಲ್ಲಿ ಬೆಳೆಯಿತು; ಮತ್ತೊಂದು ಕಟುಕನ ಮನೆಯಲ್ಲಿ. ವಿಭಿನ್ನವಾದ ಸನ್ನಿವೇಶಗಳಲ್ಲಿ ಬೆಳೆಯುವದರಿಂದ ಅವುಗಳ ಸ್ವಭಾವವು ಎಷ್ಟೊಂದು ವಿರುದ್ಧವಾಯಿತೆಂಬ ಕಥೆ ಎಲ್ಲರಗೂ ಸುಪರಿಚಿತವಾದುದು. ಪರಿಸ್ಥಿತಿ, ಪರಿಸರಣಗಳ ಪ್ರಭಾವವು ಮನೋವಿಕಾಸದಲ್ಲಿ ಅತ್ಯಂತ ಪರಿಣಾಮಕಾರಿಯಾದುದು. ಜೀವನ ರಂಗದಲ್ಲಿ ಕಾಲಿಟ್ಟ ಮಗು ಮೊದಲು ಎದುರಿಸಬೇಕಾದ ಸಮಾಜ—ಆತನ ಮನೆತನ; ಮನೆತನದಲ್ಲಿಯ ವ್ಯಕ್ತಿಗಳು. ಮಗುವಿಗೆ ಎಲ್ಲವೂ ಹೊಸದು; ಎಲ್ಲವೂ ಕುತೂಹಲ ಜನಕವಾದುದು. ಆತನು ಪಡೆದು ಕೊಂಡು ಬಂದಿರುವ ಪ್ರವೃತ್ತಿಗಳು ಹಾಗೂ ಶಕ್ತಿಗಳು ಅಂದು ಅಪ್ರಬುದ್ಧವಾದವುಗಳು. ಮೇಣದಂತೆ ಮಿದುವಾಗಿರುವವು. ಬಲಿತು ಬಿರುಸಾದ ಮರವಲ್ಲ—ಎಳೆಯ ಸಸಿಯಂತೆ. ಅವುಗಳನ್ನು ಇಷ್ಟವಾದ ರೀತಿಯಲ್ಲಿ ಬಾಗಿಸಬಹುದು, ಬೆಳೆಸಬಹುದು. ಅನುಕರಣ ಪ್ರವೃತ್ತಿಯೂ ಅಂದು ತುಂಬಾ ಜಾಗೃತವಾಗಿರುವದು. ಅನುಕರಣಕ್ಕೆ ಒಂದು ಆದರ್ಶ—ಮಾದರಿ—ಬೇಕಾಗುವದು. ಮನೆತನದ ಪರಿಸ್ಥಿತಿಯ ಧೋರಣೆಗೆ ಈ ಆದರ್ಶವು ಸಾಧು ಇಲ್ಲವೆ ಅಸಾಧು ಆಗಿರುವದು. ಪೂರ್ವಬಾಲ್ಯದಲ್ಲಿ ತಾಯಿ ತಂದೆಗಳೆ ಮಗುವಿಗೆ ಅನುಕರಣಕ್ಕಾಗಿ ಆದರ್ಶವಾಗಿರುವರು. 'ತಂದೆಯಂತೆ ಮಗ' ಎಂದು ಹೇಳುವದು ರೂಢಿಯಾಗಿದೆ. ಮಗು ತಂದೆಯ ಗುಣಗಳನ್ನೂ, ದೋಷ-ದುರ್ಬಲತೆಗಳನ್ನೂ ಅನುಕರಣದಿಂದ ಆತ್ಮಸಾತ್ ಮಾಡಿಕೊಳ್ಳುವದು. ತಂದೆಯಾದವನು ಮಗುವಿಗೆ ಒಳ್ಳೇ ಆದರ್ಶವನ್ನೊದಗಿಸಿದರೆ, —'ಅಪ್ಪ ಕಟ್ಟಿಸಿದ ಗುಡಿಗೆ ಮಗ ಕಳಸವನ್ನೇರಿಸಬಹುದು' ತಂದೆಯಂತೆ, ಇಲ್ಲವೆ ಅವನಿಗೂ ಮಿಗಿಲೆನಿಸುವನು. ತನ್ನ ಜೀವನವನ್ನು ಸಂಪನ್ನವಾಗಿ ನಿರ್ಮಿಸಬಹುದು. ಇದಕ್ಕೆ ಪ್ರತಿಯಾಗಿ ದೂಷಿತವಾದ ತಂದೆಯ ಜೀವನವನ್ನೇ ಇಮ್ಮಡಿ ಮುಮ್ಮಡಿಯಾಗಿ ಮುಂದುವರಿಸಬಹುದು. ತಾಯಿಯ ಪ್ರಭಾವವು

ತಂದೆಗಿಂತಲೂ ಹೆಚ್ಚು ಶಕ್ತಿಯುತವಾದುದು. ತಾಯಿಯ ಜೊತೆಯಲ್ಲಿಯೇ ಮಗು ದಿನದ ಹೆಚ್ಚುಸಮಯ ಕಳೆಯುವದು. ಆತನ ಆಹಾರ, ಆರೈಕೆ, ಆಟಪಾಟಗಳೆಲ್ಲ ತಾಯಿಯಿಂದ, ತಾಯಿಯ ಸನ್ನಿಧಿಯಲ್ಲಿ. ತಾಯಿಯ ಮಾತುಗಳೇ ಆತನ ಮೊದಲಿನ ಶಬ್ದಭಂಡಾರ. ತಾಯಿಯ ಪ್ರತಿಯೊಂದು ಕೃತಿಯನ್ನು ಮಗು ನಿರೀಕ್ಷಿಸುವದು. ಆಕೆಯ ಬೇಕು-ಬೇಡ ಗಳನ್ನು ತಿಳಿದುಕೊಳ್ಳುವದು. ಸುಸಂಸ್ಕೃತಳಾದ ತಾಯಿ ತನ್ನ ನಡೆನುಡಿಗಳೆಲ್ಲ ಮಗುವಿಗೆ ಒಳ್ಳೇ ಮಾದರಿಯಾಗುವಂತೆ ನೋಡಿಕೊಳ್ಳುವಳು. ಒಳ್ಳೇ ರೂಢಿಗಳನ್ನು ಬೆಳಸಿ ಶೀಲ ಸಂವರ್ಧನೆಗೆ ಸಹಾಯಕಳಾಗುವಳು. ಇದಕ್ಕೆ ಪ್ರತಿಯಾಗಿ, ಮಕ್ಕಳ ಮನೋಧರ್ಮ-ವನ್ನರಿಯದ ಮಾತೆ ಮಗುವಿನ ಮುಂದಿನ ಜೀವನವನ್ನು ವಿಕೃತಗೊಳಿಸಬಹುದು. ತಾಯಿಯ ಅತಿ-ಮಮತೆಯಿಂದ (spoilt child) ಅಡ್ಡದಾರಿಯನ್ನು ಹಿಡಿಯುವ ಅನೇಕ ಮಕ್ಕಳನ್ನು ನಾವು ಸುತ್ತಲೂ ಕಾಣುವೆವು. 'ಮೂರು ವರುಷದ ಬುದ್ಧಿ ನೂರು ವರುಷದ ವರೆಗೆ', ಎಂಬ ಹಿರಿಯರ ಉಕ್ತಿಯಾದರೂ ಇದೇ ಸಂಗತಿಯನ್ನೇ ಸಮರ್ಥಿಸುವದು. ತಾಯಿಯಂತೆ ಕುಟುಂಬದಲ್ಲಿರುವ ಅಣ್ಣ, ಅಕ್ಕ ಮುಂತಾದ ಉಳಿದ ಹಿರಿಯರು ಮಗುವಿನ ಮನೋಭೂಮಿಕೆಯ ಮೇಲೆ ತಿಳಿದು ತಿಳಿಯದೆಯೆ ತಮ್ಮ ಪ್ರಭಾವವನ್ನು ಬೀರುವರು. ಅಂತೆಯೆ 'ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ', ಎಂದು ಹೇಳುವದುಂಟು.

ಎಳೆಯ ವಯಸ್ಸಿನಲ್ಲಿ ತಾಯಿಯಿಂದ ಪಡೆದ ಸಂಸ್ಕಾರದಿಂದ ತಮ್ಮ ಜೀವನವನ್ನು ಉಜ್ವಲಗೊಳಿಸಿದ ಉದಾಹರಣೆಗಳನ್ನು ಎಲ್ಲ ಮಹಾಪುರುಷರ ಜೀವನ ಚರಿತ್ರೆಯಲ್ಲಿ ನಾವು ಕಾಣುವೆವು. ಶಿವಛತ್ರಪತಿಯಲ್ಲಿ ಸ್ವರಾಜ್ಯದ ಕನಸು ಕಟ್ಟಿದವಳು ಆತನ ತಾಯಿ. ಅಹಿಂಸೆ ಆಸ್ತಿಕ್ಯಗಳು ಗಾಂಧೀಜಿಯವರ ಜೀವನದಲ್ಲಿ ಅಚಲವಾಗಿ ನೆಲಿಸಿದುದು ತಾಯಿಯ ಪ್ರಭಾವ ದಿಂದಲೇ. ತನ್ನ ಮಹಾ ಸಾಧನೆಗಳಿಗೆಲ್ಲ ತನ್ನ ತಾಯಿಯ ಬೋಧನೆ ಪ್ರೇರಣೆಗಳೆ ಮೂಲ ವೆಂದು ಲಿಂಕನ್‌ನು ಹೇಳಿರುವನು. ತಾಯಿಯ ಮಮತೆ-ತರಬೇತಿಗಳೆ ತಮ್ಮನ್ನು ಉನ್ನತ-ಸ್ಥಾನಕ್ಕೇರಿಸಿದ ಮೊದಲು ಮೆಟ್ಟಿಲುಗಳೆಂದ ಅನೇಕ ಮಹಾಪುರುಷರು ಪ್ರಾಂಜಲ ವಾಗಿ ಒಪ್ಪಿಕೊಂಡಿರುವರು. ತಾಯಿಗೆ ತಮ್ಮ ಕೃತಜ್ಞತೆ-ಗೌರವಗಳನ್ನು ಅರ್ಪಿಸಿರುವರು. ಅಂತೆಯೆ, 'ತೊಟ್ಟಿಲು ತೂಗುವ ತಾಯಿ ಜಗವನ್ನಾಳುವಳು'ಯೆಂಬ ನಾಣ್ಣುಡಿ ಉದಯಿ ಸಿದೆ. ಕುಟುಂಬ ಸಂಸ್ಥೆ ಅತಿ ಪ್ರಾಚೀನವಾದುದು. ಪ್ರತಿಯೊಂದು ಕುಟುಂಬವೂ ತನ್ನದೇ ಆದ ಸ್ಥಾನಮಾನಗಳನ್ನೂ, ಸಂಪ್ರದಾಯಗಳನ್ನು ಬೆಳಿಸಿಕೊಂಡು ಬಂದಿರುವದು. 'ನಾನು ಇಂಥ ಕುಟುಂಬಕ್ಕೆ ಸೇರಿದವನು', -ಎಂಬ ಸ್ವಾತ್ಮ-ಭಾವನೆ ಮಗುವಿನ ಸ್ವಾಭಿಮಾನಕ್ಕೆ ಪೋಷಕವಾಗಿರುವದು. 'ನನ್ನ ಕುಟುಂಬದ ಕೀರ್ತಿ ಪ್ರತಿಷ್ಠೆಗಳನ್ನು ನಾನು ಕಾಯ್ದು ಕೊಳ್ಳಬೇಕು. ಅವುಗಳಿಗೆ ಕುಂದು ಕಲಂಕಗಳು ಉಂಟಾಗದಂತೆ ನಡತೆಯನ್ನು ತಿದ್ದಿ ಕೊಳ್ಳಬೇಕು',— ಮಗುವಿನ ಮನೋಭೂಮಿಕೆಯನ್ನು ರೂಪಿಸುವಲ್ಲಿ ಈ ಬಗೆಯ ಸದ್ಭಾವನೆ ಒಳ್ಳೇ ಸಹಾಯಕವಾಗುವದು. ಸತ್ಯನಿಷ್ಠೆ, ಸಹಾನುಭೂತಿ, ಮನಸ್ಸಿನ ಔದಾರ್ಯ— ಮುಂತಾದ ಸದ್ಗುಣಗಳ ಬೇರುಗಳು ಕುಟುಂಬದ ಸಂಪ್ರದಾಯ-ಸಂಸ್ಕೃತಿ ಗಳಲ್ಲಿ ಆಳವಾಗಿ ಒಳಸೇರಿರುವವು. ಕೌಟುಂಬಿಕ ಜೀವನದಲ್ಲಿಯೇ ಮಗು ಸಾಮಾಜಿಕ ಸದ್ಗುಣಗಳನ್ನು ಕ್ರಮಶಃ ಅಳವಡಿಸಿಕೊಳ್ಳುವದು.

ಕುಟುಂಬದ ಸ್ವರೂಪವು ದ್ವಿಮುಖವಾಗಿದೆ— ಸಾಮಾಜಿಕ ಹಾಗೂ ಆರ್ಥಿಕ. ಇವೆರಡೂ ಬೆರೆತುಕೊಂಡು ಮಗುವಿನ ಮನೋಭೂಮಿಕೆಯನ್ನು ನೀತಿ ನಡತೆಗಳನ್ನು ನಿಯಂತ್ರಿಸುವವು. ಸಾಮಾಜಿಕವಾದ ಮೇಲುಕೀಳುಗಳನ್ನು ತೊಡೆದು ಹಾಕಲು ಇಂದಿನ ರಾಜಕೀಯವು ಬಹುಮುಖವಾದ ಯೋಜನೆಗಳನ್ನು ಕೈಕೊಂಡಿದೆ. ಆದರೂ, ಸದ್ಯಕಂತೂ ಸಮಾಜದ ರಚನೆಯಲ್ಲಿ ಕೆಲವೊಂದು ಥರಗಳು — 'ಮಟ್ಟ' ಗಳು ಕಾಣಬರುವವು. ಪ್ರತಿಯೊಂದು ಮಟ್ಟದಲ್ಲಿಯ ಜೀವನಕ್ರಮವು ಕಾಣಬರುವಷ್ಟು ಭಿನ್ನವಾಗಿವೆ; ಬಳಸುವ ಭಾಷೆಕೂಡ ಮಿದುವು, ಬಿರುಸು, ಹಾಗೂ ಗ್ರಾಮ್ಯವೆಂಬ ರೀತಿಗಳಲ್ಲಿ ಹೆಚ್ಚುಕಡಿಮೆ ಯಾಗಿದೆ. ಈ ಭಿನ್ನತೆ ಅನೇಕ ಶತಮಾನಗಳಿಂದ ಬೆಳೆದು ಬಂದಿರುವದರಿಂದ ಅದರ ನಿವಾರಣೆಗೆ ಸಾಕಷ್ಟು ಸಮಯ ಹಿಡಿಯುವದು ಜೀವನದ ಈ ವಿವಿಧತೆಗೆ ಆರ್ಥಿಕ ವಿಷಮತೆಯೂ ಬಹ್ವಂಶದಿಂದ ಕಾರಣವಾಗಿದೆಯೆಂದು ಹೇಳುವರು. ಮಕ್ಕಳಿಗೆ ಸತ್ವಯುಕ್ತವಾದ ಆಹಾರ ವಿಲ್ಲ. ಮೈತುಂಬ ಬಟ್ಟೆಯಿಲ್ಲ. ಮನೆಯೆಂಬ ಹೆಸರಿಗೂ ಪಾತ್ರವೆನಿಸಿದ ಆಸರ–ಧೂಳಿ ಹೊಗೆ, ತೇವು–ಕತ್ತಲೆಗಳಿಗೆ ಆಗರವಾದುದು. ಮಗು ನಿತ್ಯವೂ ಅನುಭವಿಸುವದು ಕೊರತೆ, ಕೇಳುವದು ಅಸಭ್ಯ ನುಡಿಗಳು, ನಿರೀಕ್ಷಿಸುವದು ನಿತ್ಯವಾದ ಅಶಾಂತಿ. ಈ ಬಗೆಯ ಆರ್ಥಿಕ-ಸಾಮಾಜಿಕ ಪರಿಸರಣಗಳಲ್ಲಿ ಮಗು ಹೇಗೆ ಸಮರ್ಪಕವಾಗಿ ಬೆಳೆಯಬೇಕು? ಇಂಥ ಮಗುವಿನ ಆಸ್ಥೆ–ಅಭಿರುಚಿಗಳೂ ಕೀಳಾದರೆ, ಭಾಷೆ ಕೆಳತರಗತಿಯದಾದರೆ ಅದು ಸೋಜಿಗವೆನಿಸದು. ಕ್ರಮಬದ್ಧ ಶಿಕ್ಷಣದಲ್ಲಿ ಇಂಥ ಮಕ್ಕಳನ್ನು ಪ್ರಯಾಸ ಕುಶಲತೆಗಳಿಂದ ತಿದ್ದ ಬೇಕಾಗುವದು. ಸುಸಂಸ್ಕೃತವಾದ ಕುಟುಂಬಗಳಿಂದ ಬರುವ ಮಕ್ಕಳು ಕ್ರಮಬದ್ಧ ಶಿಕ್ಷಣಕ್ಕೆ ಕೂಡಲೆ ಹೊಂದಿಕೊಳ್ಳುವರು.

(೨) ಧಾರ್ಮಿಕ ಸಂಸ್ಥೆಗಳು :— ಜಗತ್ತಿನ ಎಲ್ಲ ಧಾರ್ಮಿಕ ಸಂಸ್ಥೆಗಳು ಸದುದ್ದೇಶದಿಂದ ಪ್ರೇರಿತವಾದವುಗಳು. ಆಯಾ ಕಾಲದ ಜನತೆಯ ಧಾರ್ಮಿಕ ಆಕಾಂಕ್ಷೆಗಳನ್ನು ಈಡೇರಿಸುವದಕ್ಕಾಗಿ ಅವುಗಳೆಲ್ಲ ಉದಯ ಹೊಂದಿದವು. ಜೀವನ ಪ್ರವಾಹವು ಮುಂದರಿಯಿತು. ಧಾರ್ಮಿಕ ಸಂಸ್ಥೆಗಳು ಮುಂದರಿವ ಜೀವನದೊಡನೆ ಸಮನಾಗಿ ಹೆಜ್ಜೆ ಹಾಕಲಿಲ್ಲ. ನಿಂತ ನೀರಿನಂತೆ, ಜೀವನದೊಡನೆ ಅವುಗಳ ನಿಕಟ ಸಂಪರ್ಕವು ತಪ್ಪಿತು. ಸಮಾಜವೂ ಹಾನಿಗೊಳಗಾಯಿತು. ಸಮಾಜದ ಸ್ವಾಸ್ಥ್ಯವನ್ನು ಎತ್ತಿ ಹಿಡಿಯುವದೆ ನಿಜವಾದ ಧರ್ಮದ ಉದ್ದೇಶ. ಇದನ್ನು ಬಿಟ್ಟುಕೊಟ್ಟು ಮೇಲು ಕೀಳೆಂಬ ರಣರಂಗವನ್ನು ಧರ್ಮಪಂಥಗಳು ಪ್ರವೇಶಿಸಿದವು. ಧರ್ಮದ ಹೆಸರಿನಲ್ಲಿ ಅಪಾರವಾದ ಹಿಂಸೆ ನಡೆಯಿತು. ಇದುವರೆಗೆ ನಡೆದ ಎಲ್ಲ ಯುದ್ಧಗಳಿಗಿಂತಲೂ ಧರ್ಮದ ಹೆಸರಿನಲ್ಲಿ ಸಂಭವಿಸಿದ ಹಿಂಸೆ ಅಧಿಕವಾದುದೆಂದು ಹೇಳುವರು. ದುರಭಿಮಾನದ ಈ ಉಕ್ಕು ಇಳಿಯಲು ದೀರ್ಘಕಾಲ ಗತಿಸಿತು. ಆಗಾಗ್ಗೆ ಕೆಲವು ಮಹಾಪುರುಷರು ಸರ್ವಧರ್ಮಗಳ ಸಮನ್ವಯವನ್ನು ತಮ್ಮ ಜೀವನದಲ್ಲಿ ಸಾಧಿಸಿದರು, ಜನತೆಗೆ ಉಪದೇಶಿಸಿರುವರು.

ಪೂರ್ವ ಹಾಗೂ ಪಶ್ಚಿಮದೇಶಗಳಲ್ಲಿ ಪ್ರಾಚೀನಕಾಲದಿಂದಲೂ ಧರ್ಮ ಹಾಗೂ ಶಿಕ್ಷಣ ಜತೆಜತೆಯಾಗಿ ಸಾಗಿರುವದು ಕಂಡುಬರುವದು. ಎರಡೂ ದೇಶಗಳಲ್ಲಿ ಧಾರ್ಮಿಕ ಸಂಸ್ಥೆಗಳೆ ಶಿಕ್ಷಣ ಸಂಸ್ಥೆಗಳಾಗಿದ್ದವು, ಆದರೆ ಪ್ರತಿಯೊಂದು ಧಾರ್ಮಿಕ ಸಂಸ್ಥೆಯಲ್ಲಿ

ಕೊಡುವ ಶಿಕ್ಷಣ ಪಾಂಥಿಕವಾಗಿತ್ತು. ಇದರಿಂದ ಒಡಕು ಹಾಗೂ ಪ್ರತ್ಯೇಕತೆಯ ಭಾವನೆಗಳು ಬಲಿಷ್ಠವಾಗಿ ಬೆಳೆದು ಬಂದವು. ಧಾರ್ಮಿಕ ಶಿಕ್ಷಣದ ಜೊತೆಗೆ ಸಾಮಾನ್ಯ ಶಿಕ್ಷಣವೂ ಈ ಸಂಸ್ಥೆಗಳಲ್ಲಿ ದೊರೆಯುತ್ತಿತ್ತು. ಇದರಿಂದ ಸಾಮಾನ್ಯ ಜನತೆಯಲ್ಲಿ ಸಾಕ್ಷರತೆ ಮಾತ್ರ ತಕ್ಕಮಟ್ಟಿಗೆ ಸ್ಥಿರವಾಗಿ ಉಳಿಯುತ್ತಿತ್ತು. ಭಾರತದಲ್ಲಿ ಬ್ರಿಟಿಶರ ಆಳಿಕೆಯು ಬೇರೂರುವವರೆಗೆ ಇದೇ ಪರಿಸ್ಥಿತಿಯು ನೆಲೆಸಿತ್ತು. ಮಠಗಳೇ ಶಾಲೆಗಳು, ಅಯ್ಯನವರೆ ಗುರುಗಳು. ಸರಕಾರವು ಸಾರ್ವಜನಿಕ ಶಿಕ್ಷಣದ ಹೊಣೆಯನ್ನು ವಹಿಸಿದನಂತರ ಈಗಿನ ಶಾಲೆಗಳು ಅಸ್ತಿತ್ವದಲ್ಲಿ ಬಂದವು. ಅತಿ ಪ್ರಾಚೀನ ಕಾಲದಿಂದ ಬೆಳೆದು ಬಂದ ಧರ್ಮ ಹಾಗೂ ಶಿಕ್ಷಣಗಳಲ್ಲಿಯ ಮೈತ್ರಿಯು ಕೊನೆಗೊಂಡಿತು. ಧರ್ಮದ ಅಗಲುವಿಕೆ ತುಂಬಾ ಹಾನಿಕರವಾಗಿದೆಯೆಂದು ಅನುಭವಿಕರಾದ ಹಿರಿಯರೆಲ್ಲರೂ ಹೇಳುವರು. ನೋಡಿದಲ್ಲೆಲ್ಲ ಸ್ಪರ್ಧೆ–ಸ್ವಾರ್ಥಗಳಿಂದ ಸಮಾಜವು ಸೀದು ಹೋಗುವದಕ್ಕೆ ಶಿಕ್ಷಣದಲ್ಲಿ ಧರ್ಮಕ್ಕೆ ಸ್ಥಾನವಿಲ್ಲದಿರುವದೆ ಕಾರಣವೆಂದು ಅನೇಕ ವಿಚಾರವಂತರ ಅಭಿಪ್ರಾಯವಾಗಿದೆ. ಧರ್ಮರಹಿತವಾದ ಶಿಕ್ಷಣದಿಂದ, ಆ ಶಿಕ್ಷಣವನ್ನು ಪಡೆದವರಲ್ಲಿ ಅಧಾರ್ಮಿಕತೆಯೂ, ಒಂದು ಬಗೆಯ ಸ್ವೇಚ್ಛಾಪ್ರವೃತ್ತಿಯೂ ಉಂಟಾಗುವದೆಂದೂ ಅವರು ಭಾವಿಸುವರು.

ಇಂದು ಶಿಕ್ಷಣದ ಪುನರುದ್ಧಾರ– ಪುನರ್ರಚನೆ– ನಡೆದಿದೆ. ಜೊತೆಗೆ ಜೀವನದ ಜೀರ್ಣೋದ್ಧಾರವೂ ನೆರವೇರಬೇಕಾಗಿದೆ. ಸಾಮಾಜಿಕ ಜೀವನವನ್ನೇ ಹೊಸ ಹಾದಿಗೆ ಹಚ್ಚುವ ಶಿಕ್ಷಣ–ಯೋಜನೆಯಲ್ಲಿ ಧಾರ್ಮಿಕ ಶಿಕ್ಷಣವನ್ನು ಕಡೆಗಣಿಸುವದು ಅನುಚಿತವಾಗುವದು. ಆದರೆ ಈ ವಿಷಯದಲ್ಲಿ ಒಂದು ಸಮಸ್ಯೆ ತಲೆಯೆತ್ತುವದು. ಭಾರತವು ಅನೇಕ ಧರ್ಮಗಳ, ಪಂಥಗಳ ಅನುಯಾಯಿಗಳಿಗೆ ಆಸರವನ್ನಿತ್ತಿದೆ. ಶಿಕ್ಷಣ ಸಂಸ್ಥೆಗಳು ಇವುಗಳಲ್ಲಿ ಯಾವ ಧರ್ಮದ ತತ್ವಗಳನ್ನು ಪುರಸ್ಕರಿಸಬೇಕು ? ಯಾವ ಪಂಥವನ್ನು ಎತ್ತಿ ಹಿಡಿಯಬೇಕು ? ಯಾವ ಧರ್ಮದ ಬೋಧೆಯನ್ನು ಶಿಕ್ಷಣದ ಅಂಗವನ್ನಾಗಿ ಮಾಡಬೇಕು ? ಯಾವ ಧಾರ್ಮಿಕ ಪರಂಪರೆ–ಸಂಪ್ರದಾಯಗಳನ್ನು ಸಮರ್ಥಿಸಬೇಕು ? ಎಲ್ಲ ಧರ್ಮಗಳಿಗೆ ಶಿಕ್ಷಣದಲ್ಲಿ ಸ್ಥಾನವನ್ನು ಕೊಡುವದು ಸಾಧ್ಯವಾಗಬಹುದೆ ? ಹೀಗೆ ಮಾಡದಿದ್ದರೆ, ವಿವಿಧ ಧರ್ಮಗಳ ಅನುಯಾಯಿಗಳನ್ನು ಹೇಗೆ ಸಾಂತ್ವನ ಗೊಳಿಸಬೇಕು ? ಒಂದನ್ನೇ ಎತ್ತಿಕೊಂಡರೆ, ಉಳಿದವರಿಗೆಲ್ಲ ಅಸಹನೆ, ಅಸಮಾಧಾನ. ಈ ಕಾರಣಕ್ಕಾಗಿಯೆ, ಜನತೆಯ ಸಾರ್ವತ್ರಿಕ ಶಿಕ್ಷಣಕ್ರಮದಲ್ಲಿ ಧಾರ್ಮಿಕ ಶಿಕ್ಷಣವನ್ನು ಬೆರೆಸುವದು ಬಹು ತೊಡಕಿನ ಪ್ರಶ್ನೆಯಾಗಿರುವದು.

ಭಾರತವು ಇಂದು 'ಧರ್ಮಾತೀತ'ವಾದ ಜನತಾರಾಜ್ಯವು. 'ಧರ್ಮಾತೀತ'ವೆಂದರೆ ಧರ್ಮರಹಿತವಾದುದು, ಧರ್ಮವನ್ನು ಪೂರ್ಣವಾಗಿ ಬಿಟ್ಟುಕೊಡುವದು ಎಂಬ ಅರ್ಥವಲ್ಲ. ಭಾರತದ ಧರ್ಮಾತೀತತೆಯು 'ಧರ್ಮಸಹಿಷ್ಣುತೆ'ಯೆಂಬುದಕ್ಕೆ ಪರ್ಯಾಯ ಶಬ್ದವಾಗಿದೆ. ಸದುದ್ದೇಶದಿಂದ ಪ್ರೇರಿತವಾದ ಸರ್ವಧರ್ಮಗಳನ್ನೆಲ್ಲ ಸಮತೆ ಗೌರವಗಳಿಂದ ಕಾಣುವದಾಗಿದೆ. ಧಾರ್ಮಿಕ ಶಿಕ್ಷಣದ ಬಗ್ಗೆ, ಶಿಕ್ಷಣ ಯೋಜನೆಯು ಇದೇ ದೃಷ್ಟಿಯನ್ನಿಟ್ಟು ಕೊಳ್ಳಬೇಕು. ಪ್ರತಿಯೊಂದು ಧರ್ಮಪಂಥದ ಮಕ್ಕಳಿಗೆ ಅವರವರ ಧರ್ಮಗಳಲ್ಲಿ ಶಿಕ್ಷಣವನ್ನು ಕೊಡುವದು ಸಾಧ್ಯವೂ ಅಲ್ಲ, ಅನರ್ಥಕಾರಿಯೂ ಆಗುವದು.

ಈ ಬಗೆಯ ಶಿಕ್ಷಣದಿಂದ ಅಂಥ ಶ್ರದ್ಧೆ ಹುಟ್ಟುವದು. 'ತನ್ನ ಧರ್ಮವೇ ಮೇಲು-ಉಳಿದವುಗಳೆಲ್ಲ ಕೀಳು,' ಎಂಬ ದುರಭಿಮಾನವು ಈಗಾಗಲೆ ಸಾಕಷ್ಟು ದುರಂತಕ್ಕೆ ಕಾರಣವಾಗಿದೆ. ಇಂಥ ದುರ್ಭಾವನೆಯನ್ನು ಹುಟ್ಟಿಸುವ ಧಾರ್ಮಿಕ ಶಿಕ್ಷಣವು ಸರ್ವಥಾ ತ್ಯಾಜ್ಯವೆನಿಸುವದು.

ಆದರೆ, ನಿಜವಾದ, ಕಲ್ಯಾಣಕಾರಿಯಾದ ಧಾರ್ಮಿಕ ಶಿಕ್ಷಣದ ಅವಶ್ಯಕತೆಯನ್ನು ಎಲ್ಲರೂ ಒಪ್ಪುವರು. ನಮ್ಮ ನಾಡು ಧರ್ಮಗಳ ನೆಲೆವೀಡು, ಉದಾತ್ತ ತತ್ವಗಳ ತವರು ಮನೆಯೆಂದು ಹೆಸರಾಗಿದೆ. ಧರ್ಮವು ದೇವನ ಉಸಿರು. ನಾಡಿನ ಮಕ್ಕಳು ಧರ್ಮದ ಉಸಿರಿನಿಂದ ಬೆಳೆಯಬೇಕು. ನೀತಿಯು ಧರ್ಮದ ಬೆನ್ನೆಲುಬೆಂದು ಹೇಳುವದುಂಟು. ಉದಾತ್ತವಾದ ನೀತಿ ತತ್ವಗಳು ಸಕಲ ಧರ್ಮಗಳಿಗೂ ಸಮಾನವಾಗಿರುವವು. ವಿಶ್ವದ ಎಲ್ಲ ಧರ್ಮಗಳೂ :— 'ದೇವನೊಬ್ಬ, ನಾಮ ಹಲವು'; ಆತನು 'ದಯಾಮಯನು'; ಆತನ ಕರುಣೆ— 'ಅಪಾರವಾದುದು ; ಆತನನ್ನು 'ನಂಬಿಕೆಟ್ಟವರಿಲ್ಲ'; 'ರಸದ ಹೊರ ಲೇಪದಲ್ಲಿ ಹುದುಗಿದ ಮಿಸುನಿಯಂದದಿ, ಜೀವಭಾವ ಪ್ರಸರ'ದೊಳು— 'ಅಣುರೇಣು—ತೃಣಕಾಷ್ಠದೊಳು' ಆತನು ನೆಲೆಸಿರುವ ;— ಸದ್ವರ್ತನೆಯಿಂದ ಆತನನ್ನು ಸಂತುಷ್ಟಗೊಳಿಸಬೇಕು ; 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ;— 'ಕಳಬೇಡ, ಕೊಲಬೇಡ', ಹುಸಿಯ ನುಡಿಯಲುಬೇಡ; . 'ಅಯ್ಯಾ', ಎಂದರೆ ಸ್ವರ್ಗ-'ಎಲವೋ' ಎಂದರೆ ನರಕ ; 'ವಿಹಿತ ಕರ್ಮವಮಾಡು........ ವಿಷವೆಂದು ಕಾಮ ಕ್ರೋಧಗಳ ನೀಡಾಡು'—ಎಂದು ಮುಂತಾಗಿ ಸರ್ವಮಾನ್ಯವಾದ ನೀತಿ ತತ್ವಗಳನ್ನೇ ಬೋಧಿಸುವವು. ಇಂಥ ನೀತಿ ತತ್ವಗಳನ್ನೇ ತಳಹದಿಯಾಗಿಟ್ಟುಕೊಂಡು, ಪರಿಶುದ್ಧ ಜೀವನವನ್ನು ಮಕ್ಕಳಲ್ಲಿ ಕಟ್ಟುವದೆ ಧಾರ್ಮಿಕ ಶಿಕ್ಷಣದ ಉದ್ದೇಶವಾಗಿರಬೇಕು. 'ಆಚಾರಪ್ರಭವೋ ಧರ್ಮಃ' ; 'ಯಃ ಕ್ರಿಯಾವಾನ್ ಸ ಪಂಡಿತಃ' ಮುಂತಾದ ಮಹಾವಾಕ್ಯಗಳು, ಸತ್ಕೃತಿಯು ಧರ್ಮದ ಮೂಲವೆಂಬುದನ್ನು ಸಾರಿಹೇಳುವವು. ಧಾರ್ಮಿಕ ಗ್ರಂಥಗಳ ಕೇವಲ ಗಿಳಿಯೋದು ಧಾರ್ಮಿಕ ಶಿಕ್ಷಣವೆನಿಸಲಾರದು. ಧರ್ಮವು ನಿತ್ಯ ಜೀವನದ ಸಣ್ಣ ದೊಡ್ಡ ಎಲ್ಲ ಕೃತಿಗಳಲ್ಲಿ ಒಡಮೂಡಬೇಕು. ಸಮಾಜದ ಸ್ವಾಸ್ಥ್ಯ-ಸುಸ್ಥಿತಿಗಳಿಗೆ ಸಹಾಯಕವಾಗುವದು ಧರ್ಮದಕಾರ್ಯ. ಭಾರತೀಯರ ಧರ್ಮವು ಬರಿಯ ವಿಚಾರವಾಗಿರದೆ, ಅದೊಂದು ಜೀವನದ ರೀತಿಯಾಗಿದೆ. ಸತ್ಯ, ನ್ಯಾಯ, ಅಹಿಂಸೆ ಇವು ಸಮಾಜದ ಸುಸ್ಥಿತಿಗೆ ಅಗತ್ಯವಿರುವ 'ಧರ್ಮ'ವಾಗಿರುವವು. ಇವುಗಳ ಆಚರಣೆಯೆ ಧಾರ್ಮಿಕ ಶಿಕ್ಷಣ. ಶಿಕ್ಷಕನು ಧರ್ಮದ, ನೀತಿಯ ತತ್ವಗಳನ್ನು ಜೀವನದಲ್ಲಿ ಅರಗಿಸಿಕೊಂಡು ಮಕ್ಕಳಿಗೆ ಈ ವಿಷಯದಲ್ಲಿ ಮಾದರಿಯಾಗಬೇಕು, ಮಾರ್ಗದರ್ಶಕನಾಗಬೇಕು.

(೩) ಪತ್ರಿಕೆಗಳು :— ಇಂಗ್ಲಂಡದ ಮೇಧಾವಿಯಾದ ಬರ್ಕನೆಂಬ ಮುತ್ಸದ್ದಿಯು ಪತ್ರಿಕೆಗಳು 'ರಾಜ್ಯದ ಚತುರ್ಥಾಂಗ'ವೆಂದು ಹೇಳಿರುವನು. ರಾಜನಿಗೆ, ಪಾರ್ಲಿಮೆಂಟದ ಎರಡು ಸದನಗಳಿಗೆ ಇರುವ ಪ್ರಾಧಾನ್ಯತೆ ಪತ್ರಿಕೆಗಳಿಗೂ ಇರುವದೆಂಬುದು ಆತನ ಆಶಯವಾಗಿದೆ. ಜನ-ಜೀವನವನ್ನು ರೂಪಿಸುವಲ್ಲಿ ಪತ್ರಿಕೆಗಳ ಕಾರ್ಯವು ಒಳ್ಳೇ ಪ್ರಭಾವಯುಕ್ತವಾದುದು. ಪತ್ರಿಕೆ ಲೋಕಶಿಕ್ಷಣದ ಅಮೋಘವಾದ ಸಾಧನವೆನಿಸಿದೆ.

ಅಂತೆಯೇ ಜೀವನದ ಪ್ರತೀಕವಾಗಿರುವ ವ್ಯಾಪಕ ಶಿಕ್ಷಣದಲ್ಲಿ ಪತ್ರಿಕೆಗಳೂ ಮಹತ್ವದ ಅಂಗ ವೆನಿಸಿವೆ. ಸಾರ್ವತ್ರಿಕ ಶಿಕ್ಷಣ ಪ್ರಸಾರದೊಡನೆ ಪತ್ರಿಕೆಗಳ ಪ್ರಸಾರವೂ ಹೆಚ್ಚಿದೆ. ಇಂದು ಪತ್ರಿಕೆ ಚಿರಪರಿಚಿತವಾದ ವಸ್ತು.. ಆಹಾರದಷ್ಟೇ ಅದು ಅಗತ್ಯವೆನಿಸಿದೆ. ಮೂಲೆ-ಮೂಲೆಗೆ, ಮನೆಮನೆಗೆ ಅದನ್ನು ಮುಟ್ಟಿಸಲಾಗುತ್ತಿದೆ. ಬಹು ಜನರ ಬಳಕೆಯ ಭಾಷೆಯಲ್ಲಿಯೆ ಪ್ರಕಟವಾಗುತ್ತಿದೆ. ಮಾಸಿಕ, ಸಾಪ್ತಾಹಿಕ, ದೈನಿಕ ಸ್ವರೂಪಗಳಲ್ಲಿ ಜನತೆಗೆ ಬಹುಮುಖ ವಾಗಿ ತನ್ನ ಸೇವೆಸಲ್ಲಿಸುತ್ತಿದೆ. ನಿಜವಾಗಿ ನೋಡಿದರೆ, ಪತ್ರಿಕೆಗಳು—ಮುಖ್ಯವಾಗಿ ದೈನಿಕ ಪತ್ರಿಕೆಗಳು— 'ಸುದ್ದೀ ಸೂರಕ್ಕಗಳು.' ಸುದ್ದಿಗಳನ್ನು ಸಂಗ್ರಹಿಸಿ, ಆರಿಸಿ, ಜನರಿಗೆ ಒದಗಿಸುವದು ಪತ್ರಿಕೆಗಳ ಮುಖ್ಯ ಕಾರ್ಯವಾಗಿದೆ. ನಮ್ಮ ದೇಶದಲ್ಲಿ, ಉಳಿದ ದೇಶಗಳಲ್ಲಿ ಏನು ನಡೆದಿದೆ ? ಎಂಬುದನ್ನು ಜನತೆಗೆ ತಿಳಿಸಿಕೊಡುವದು ಲೋಕಶಿಕ್ಷಣದ ಭಾಗವಾಗಿದೆ. 'ನಮ್ಮಷ್ಟಕ್ಕೆ ನಾವು,' ಎಂದು ಕೈಕಟ್ಟಿಕೊಂಡು ಕೂಡುವ ಕಾಲವು ಕೊನೆಯದಾಗಿದೆ. ಜಗತ್ತಿನ ದೂರದ ಯಾವುದೋ ಭಾಗದಲ್ಲಿ ಸಂಭವಿಸಿದ ಸಂಗತಿಯ ಪರಿಣಾಮವು ನಮ್ಮ ಜೀವನದ ಮೇಲಾಗುವದು. ಅಂತೆಯೆ ಜಗತ್ತು ಸಂಕುಚಿತವಾಗಿರು ವದೆಂದು ಹೇಳುವರು. ರಾಜಕೀಯ, ಸಾಮಾಜಿಕ, ಮುಂತಾದ ಜೀವನದ ವಿವಿಧ ಕ್ಷೇತ್ರ ಗಳಲ್ಲಿ ಜಗತ್ತಿನ ಆಗುಹೋಗುಗಳ ಸಾಮಾನ್ಯ ಪರಿಚಯ, ನಮ್ಮ ದೇಶದ ಸಮಸ್ಯೆಗಳ ಹಾಗೂ ಅವುಗಳ ಪರಿಹಾರಕ್ಕಾಗಿ ಸರಕಾರವು ಆಗಾಗ್ಗೆ ಕೈಕೊಳ್ಳುವ ಯೋಜನೆಗಳ ಪರಿಚಯವನ್ನು ಪತ್ರಿಕೆಗಳು ಜನತೆಗೆ ಮಾಡಿಕೊಡುವವು. ವಿಜ್ಞಾನದ ವಿವಿಧ ಶೋಧ ಗಳು, ಅವುಗಳ ಒಳಿತು ಕೇಡುಗಳ ಬಗ್ಗೆಯೂ ಪತ್ರಿಕೆಗಳು ಸಾಮಾನ್ಯ ಜನತೆಗೆ ತಿಳು ವಳಿಕೆಯನ್ನುಂಟುಮಾಡುವವು. ಸುದ್ದಿಗಳಿಗಾಗಿ ಜನರ ಕಾತರತೆ ಹೆಚ್ಚಿದೆ. ಪತ್ರಿಕೆಗಳಿ ಗಾಗಿ ಅವರ ಆಸ್ಥೆ ಅನೇಕಪಟ್ಟು ಹೆಚ್ಚಿದೆ. ಕೆಲವೊಂದು ದೇಶಗಳಲ್ಲಿ ಮುಂಜಾನೆ, ಮಧ್ಯಾಹ್ನ ಹಾಗೂ ಸಾಯಂಕಾಲ- ಹೀಗೆ ಮೂರು ಸಂಚಿಕೆಗಳನ್ನು ಪತ್ರಿಕೆಗಳು ಪ್ರಕಟಿಸುವದುಂಟು. 'ತಾಜಾ' ಸುದ್ದಿಗಳ ಬಗ್ಗೆ ಜನರಲ್ಲಿರುವ ಬೇಡಿಕೆಯನ್ನು ಇವು ಪೂರೈಸುವವು.

ಕೇವಲ ವಾರ್ತಾಪ್ರಸಾರವೊಂದೇ ಪತ್ರಿಕೆಗಳ ಕಾರ್ಯವಾಗಿಲ್ಲ. ಸ್ಫುಟ-ಸಂಪಾ ದಕೀಯಗಳಲ್ಲಿ, ತಜ್ಞರಿಂದ ಬರೆಯಿಸಿದ ವಿಶೇಷ ಲೇಖಗಳಲ್ಲಿ ಪತ್ರಿಕೆಗಳು ಪ್ರಚಲಿತ ವಿಷಯ ಗಳನ್ನು ವಿವೇಚಿಸುವದುಂಟು. ಓದುಗರ ವಿಚಾರ ಶಕ್ತಿಗೆ ಇವುಗಳಿಂದ ಪ್ರಚೋದನೆ ದೊರೆಯುವದು. ಓದುಗರ, ಮನೋಭೂಮಿಕೆಯನ್ನು 'ಅಭಿಪ್ರಾಯ'ವನ್ನು ರೂಪಿ ಸುವ ಕಾರ್ಯವನ್ನು ಪತ್ರಿಕೆಗಳು ಮಾಡುವವು. ಲೋಕ ಶಿಕ್ಷಣದಲ್ಲಿ, ಪತ್ರಿಕೆಗಳ ಈ ಕಾರ್ಯವೂ ಹೊಣೆಗಾರಿಕೆಯದು. ಒಂದು ರಾಜಕೀಯ ಪಕ್ಷಕ್ಕೆ; ಒಂದೇ ವಿಚಾರ- ಪ್ರಣಾಲಿನಿಗೆ ಬದ್ಧವಾಗಿರುವ ಪತ್ರಿಕೆ, ಓದುಗರನ್ನು 'ಅಡ್ಡ ಹಾದಿಗೆ' ಒಯ್ಯಬಹುದು. ಆದರೆ ಆಪಕ್ಷಕ್ಕೆ ಪ್ರತಿಯೋಗಿಯಾಗಿ ಬೇರೆ ಪತ್ರಿಕೆಯಿರುವದರಿಂದ, ಓದುಗರ ವಿಚಾರ ಸಮಾಶೀಲ ವಾಗುವದುಂಟು. ಇದಲ್ಲದೆ ಬರಗಾಲ, ಸಿಡುಗು, ನೆರೆಹಾವಳಿ ಮುಂತಾದ ನಿಸರ್ಗದ ಕೋಪಕ್ಕೆ ಬಲಿಯಾಗಿ ಒಂದು ಪ್ರದೇಶದ ಜನತೆ ಅನುಭವಿಸುವ ಹಾನಿ-ತೊಂದರೆಗಳನ್ನು ಹೃದಯಸ್ಪರ್ಶಿಯಾಗುವಂತೆ ಪತ್ರಿಕೆಗಳು ಪ್ರಕಟಿಸುವವು. ಓದುಗರಲ್ಲಿ ಸಹಾನುಭೂತಿ- ಸೇವಾಬುದ್ಧಿಗಳನ್ನು ಪ್ರೇರೇಪಿಸುವವು. ಜ್ಞಾನಪ್ರಸಾರದ ಜೊತೆಗೆ, ಹೃದಯ ಸಂಸ್ಕ

ರಣದ ಈ ಕಾರ್ಯವು ಅಷ್ಟೇ ಉದಾತ್ತವಾಗಿದೆ. ಸಚಿತ್ರವಾದ ಪತ್ರಿಕೆಗಳಂತೂ ಹೆಚ್ಚು ಆಕರ್ಷಕವೆನಿಸುವವು. ಮಕ್ಕಳ ಮನಸ್ಸನ್ನು ತುಂಬಾ ಸೆರೆಹಿಡಿಯುವವು. ಕೇವಲ ಚಿತ್ರ ನಿರೀಕ್ಷಣದಿಂದ ಅನೇಕ ಉಪಯುಕ್ತ ವಿಷಯಗಳನ್ನು, ನೂತನ ವಸ್ತುಗಳ ವಿವರಗಳನ್ನು, ನಿಸರ್ಗದ ದೃಶ್ಯಗಳನ್ನು ಅವರು ಕಂಡುಕೊಳ್ಳುವರು. ಇವೆಲ್ಲ ಸಂಗತಿಗಳಿಂದ, ಹಾಗೂ ಇನ್ನು ಬೇರೆ ಉಪಯುಕ್ತ ಅಂಶಗಳಿಂದ ವಿಶಾಲ ಶಿಕ್ಷಣದಲ್ಲಿ ಪತ್ರಿಕೆಗಳ ಪಾತ್ರವು ಹಿರಿದಾದುದೆಂದು ಹೇಳಬಹುದು. ಅಂತೆಯೆ, ಶಾಲೆಯ ಪಠ್ಯೇತರ ಚಟುವಟಿಕೆಗಳಲ್ಲಿ ಮಕ್ಕಳ ಕೈಬರೆಹದ ಪತ್ರಿಕೆಗಳಿಗೆ ಇಂದು ಮಹತ್ವದ ಸ್ಥಾನವಿದೆ. ಮಕ್ಕಳಲ್ಲಿ ಹುದುಗಿದ ನೈಸರ್ಗಿಕವಾದ ವಿವಿಧ ಶಕ್ತಿಗಳನ್ನು ಈ ಪತ್ರಿಕೆಗಳು ಬೆಳಕಿಗೆ ತರುವವು ಕತೆಗಾರಿಕೆ, ಕವಿತ್ವ, ಚಿತ್ರಕಲೆ, ಲೇಖನಕಲೆ, ಮುಂತಾದ ಮಕ್ಕಳಲ್ಲಿರುವ ವಿವಿಧ ಒಲವು–ಶಕ್ತಿಗಳಿಗೆ ಈ ಪತ್ರಿಕೆಗಳಿಂದ ಸಕಾಲದಲ್ಲಿ ಪುರಸ್ಕಾರ ದೊರೆಯುವದು, ಅವುಗಳ ವಿಕಾಸವಾಗುವದು.

(ಳ) ಬಾನುಲಿ (ರೇಡಿಯೋ) :— ಆಧುನಿಕ ವಿಜ್ಞಾನವು ಲೋಕ–ಶಿಕ್ಷಣಕ್ಕಾಗಿ ಒದಗಿಸಿದ ಉಪಯುಕ್ತ ಸಾಧನೆಗಳಲ್ಲಿ ಬಾನುಲಿ ಒಂದಾಗಿದೆ. ಒಬ್ಬನ ಧ್ವನಿಯನ್ನು ಒಂದೇ ಕಾಲಕ್ಕೆ ದೂರದೂರದಲ್ಲಿರುವ ಅನೇಕರಿಗೆ ಅವರವರ ಮನೆಯಲ್ಲಿಯೆ ಕೇಳಬರುವಂತೆ ಮಾಡುವ ಬಾನುಲಿಯ ಉಪಯುಕ್ತತೆಯು ಬಹುಮುಖವಾಗಿದೆ. 'ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್'— ಎಂದು ನಾಟಕದ ಬಗ್ಗೆ ಪ್ರಾಚೀನ ಕವಿಯೋರ್ವನು ಹೇಳಿದ ಮಾತು ಬಾನುಲಿಗೆ ಬಹುಮಟ್ಟಿಗೆ ಅನ್ವಯಿಸುವದು. ಜನತೆಯ ಭಿನ್ನ ಭಿನ್ನ ರೂಪವಾದ ಆಸ್ಥೆಗಳಿಗೆ, ಅಭಿರುಚಿಗಳಿಗೆ, ಅಗತ್ಯಗಳಿಗೆ ಅನುರೂಪವಾದ ಕಾರ್ಯಕ್ರಮವನ್ನು ಬಾನುಲಿಯು ಒದಗಿಸುವದು. ಭಿನ್ನರುಚಿಗಳಿರುವ ವ್ಯಕ್ತಿಗಳಿಗೆ ಸಮಾರಾಧನೆ–ಸಂತೃಪ್ತಿಯನ್ನುಂಟುಮಾಡುವದು. ಸಂಗೀತಪ್ರಿಯರಿಗೆ ಎಲ್ಲ ಪ್ರಕಾರದ ಸಂಗೀತ. ವಾರ್ತಾಪ್ರಿಯರಿಗೆ ಇಂಗ್ಲೀಷ, ಹಿಂದೀ ಹಾಗೂ ಪ್ರಾದೇಶಿಕ ಭಾಷೆಯಲ್ಲಿ ವಾರ್ತಾಪ್ರಸಾರ. ಕ್ರೀಡಾಪ್ರಿಯರಿಗೆ ಸ್ಪರ್ಧೆಗಳ ವಿಮರ್ಶಾತ್ಮಕ ವಿವರಗಳು. ವಾಣಿಜ್ಯ ವ್ಯವಹಾರಗಳಲ್ಲಿ ತೊಡಗಿದವರಿಗೆ ಅಂದಿನ ಬೆಲೆಗಳ ಏರಿಳಿತಗಳು. ಜಿಜ್ಞಾಸುಗಳಿಗೆ ವಿವಿಧ ವಿಷಯಗಳ ಬಗ್ಗೆ ತಜ್ಞರ ಅಧಿಕೃತಭಾಷಣಗಳು. ಮನರಂಜನೆಗಾಗಿ ನಾಟಕ-ನಾಟಿಕೆಗಳು.

ಇವುಗಳಲ್ಲದೆ, ವಿದ್ಯಾರ್ಥಿಗಳಿಗಾಗಿ ಹಾಗೂ ಹಳ್ಳಿಗರಿಗಾಗಿ ಬಾನುಲಿಯು ಪ್ರತ್ಯೇಕವಾಗಿ ವಿಶಿಷ್ಟ ಕಾರ್ಯಕ್ರಮಗಳನ್ನು ಬಿತ್ತರಿಸುವದು. ಸುಸ್ಥಿತಿಯಲ್ಲಿರುವ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿ ರೇಡಿಯೋಕ್ಕೆ ಇಂದು ಸ್ಥಾನ ದೊರೆತಿದೆ. ಬಾನುಲಿ ವಿದ್ಯಾರ್ಥಿಗಳಿಗೆ ಸಾಂಸ್ಕೃತಿಕ ಚಟುವಟಿಕೆಗಳ ಒಂದು ಅಂಗವಾಗಿದೆ; ವಿಷಯಜ್ಞಾನವನ್ನು ಹೆಚ್ಚಿಸುವ ಒಂದು ಸಾಧನವೂ ಆಗಿದೆ. 'ಗಿಳಿವಿಂಡಿ'ನ ಕಾರ್ಯಕ್ರಮದಿಂದ ಎಳೆಯ ಮಕ್ಕಳಲ್ಲಿರುವ ಅಭಿಜಾತ ಅಭಿನಯ, ಮಾತುಗಾರಿಕೆ, ಹಾಡುಗಾರಿಕೆಗಳಿಗೆ ಬಾನುಲಿಯು ಪ್ರೋತ್ಸಾಹವನ್ನೀಯುತ್ತಿದೆ. ಗ್ರಾಮನಿವಾಸಿಗಳಿಗೆ ಪ್ರಚಲಿತ ವಿಷಯಗಳ ಬಗ್ಗೆ, ಸರಕಾರವು ಕೈಕೊಳ್ಳುವ ವಿವಿಧಯೋಜನೆಗಳ ಬಗ್ಗೆ ಸುಲಭವಾದ ರೀತಿಯಲ್ಲಿ ತಿಳುವಳಿಕೆ ಮಾಡಿಕೊಡಲಾಗುತ್ತಿದೆ. ಸರಕಾರದ ಯೋಜನೆಗಳಲ್ಲಿ ಬಹು ಜನ ಸಮಾಜದ ಸಹಕಾರವನ್ನು ಪಡೆಯಲು ರೇಡಿಯೋ ತಂದುಕೊಡುವ ಈ ತಿಳುವಳಿಕೆ ಒಳ್ಳೇ ಪ್ರಯೋಜನಕಾರಿಯೆನಿಸಿದೆ.

ಅಂತೆಯೇ, ಕೇಂದ್ರಗ್ರಾಮಗಳಿಗೆ ರೇಡಿಯೋದ ಪೂರೈಕೆಗಾಗಿ, ಅವುಗಳ ದುರಸ್ತಿಗಾಗಿ ಸರಕಾರವು ಒಂದು ಪ್ರತ್ಯೇಕವಾದ ವಿಭಾಗವನ್ನೇ ನಿರ್ಮಿಸಿದೆ.

ರೇಡಿಯೊ, ಇಂದು ವಿಲಾಸದ ವಸ್ತುವೆನಿಸುವದಿಲ್ಲ. ಒಂದು ದೇಶದ ಜೀವನದ ಮಟ್ಟವನ್ನು ಅಳೆಯುವಾಗ್ಗೆ ರೇಡಿಯೋದ ಬಳಿಕೆಯ ಪ್ರಮಾಣವನ್ನು ಪರಿಗಣಿಸುವದುಂಟು. ಅಮೇರಿಕೆಯಂಥ ಸಂಪನ್ನ ದೇಶಗಳಲ್ಲಿ ಮನೆಮನೆಗೊಂದು ರೇಡಿಯೋ ಇರುವದಂತೆ. ರೇಡಿಯೋದ ಪ್ರಯೋಜನೆಯನ್ನು ಪಡೆಯುವ ವ್ಯಕ್ತಿಗಳ ವಿಷಯದ ಜ್ಞಾನವು ವಿಸ್ತೃತವಾಗುವದು; ಬಿಡುವಿನ ವೇಳೆಯ ಸದುಪಯೋಗವೂ ಆಗುವದು. ರೇಡಿಯೋದ ಸಹವಾಸದಲ್ಲಿ ಮಕ್ಕಳು ಬಹುಶ್ರುತರಾಗುವರು; ಅವರ ಅಭಿರುಚಿಗಳೂ ಸುಸಂಸ್ಕೃತವಾಗುವವು. ಜ್ಞಾನ-ಮನರಂಜನಗಳೆರಡನ್ನೂ ಸಾಧಿಸುವ ಬಾನುಲಿಯ ಸಹಕಾರವು ಶಿಕ್ಷಣದಲ್ಲಿ ಒಳ್ಳೇ ಗಣನೀಯವಾಗಿದೆ. ಶಿಕ್ಷಣದಲ್ಲಿ ಬಾನುಲಿಯಿಂದಲೆ ನಾವು ತೃಪ್ತಿಪಡಬೇಕಿಲ್ಲ, ವಿಜ್ಞಾನವು ಇನ್ನೂ ಒಂದು ಹೆಜ್ಜೆ ಮುಂದಿಟ್ಟಿದೆ. ವಿದೂರ-ವಸ್ತು-ವೀಕ್ಷಣ (ಟೆಲಿವ್ಹಿಜನ್)ವೆಂಬ ಸೋಜಿಗವಾದ ಸಾಧನವನ್ನು ಒದಗಿಸಿದೆ. ರೇಡಿಯೊ ನಾವಿರುವಲ್ಲಿಗೆ ಧ್ವನಿಯನ್ನು ಮಾತ್ರ ಬರಮಾಡಿಕೊಳ್ಳುತ್ತಿದೆ. ನೂತನ ವಿಧಾನವಾದ ಟೆಲಿವ್ಹಿಜನ್ ದೂರದ ವಸ್ತುಗಳ ಛಾಯಾಚಿತ್ರವನ್ನೂ ನಮ್ಮ ಕಣ್ಣೆದುರು ತಂದು ನಿಲ್ಲಿಸುವದು. ಶಿಕ್ಷಣದಲ್ಲಿ ರೇಡಿಯೊ ಶ್ರವಣೇಂದ್ರಿಯದ ಸಹಕಾರವನ್ನು ಮಾತ್ರ ಕೊರುತ್ತಿತ್ತು. ಕಿವಿಗಿಂತಲೂ ಕಣ್ಣು ಜ್ಞಾನದ ಪ್ರಬಲತರವಾದ ಸಾಧನವೆಂದು ಹೇಳುವರು. ಟೆಲಿವ್ಹಿಜನ್ ಕಣ್ಣು-ಕಿವಿಗಳೆರಡರ ಮುಖಾಂತರವಾಗಿಯೂ ವಿಷಯಜ್ಞಾನವನ್ನು ಮಾಡಿಕೊಡುವದು; ಕಲಿಯುವ ಕ್ರಿಯೆಯಲ್ಲಿ ಹೆಚ್ಚು ಜ್ಞಾನೇಂದ್ರಿಯಗಳ ಸಹಕಾರವನ್ನು ಪಡೆಯುವದರಿಂದ ವಿಷಯದ ಜ್ಞಾನವು ಹೆಚ್ಚು ಸುದೃಢವಾಗುವದೆಂದು ಹೇಳುವರು. ವಿಜ್ಞಾನದ ವಿಧಾನಗಳು, ನಿಸರ್ಗದ ದೃಶ್ಯಗಳು ಮನರಂಜನೆಯ ಕಾರ್ಯಕ್ರಮಗಳು—ಪ್ರತ್ಯಕ್ಷವಾಗಿ ಕಾಣುವದರಿಂದ, ಕೇಳಿಸುವದರಿಂದ, ವ್ಯಾಪಕ ಹಾಗೂ ಮರ್ಯಾದಿತ ಶಿಕ್ಷಣಗಳೆರಡರಲ್ಲಿಯೂ ಟೆಲಿವ್ಹಿಜನ್‌ದಿಂದ ಹೆಚ್ಚಿನ ಪ್ರಯೋಜನವನ್ನು ಪಡೆಯಬಹುದಾಗಿದೆ.

(೫) ಚಲಚ್ಚಿತ್ರಗಳು :— ಮಾಯಾದೀಪವನ್ನು ಒದಗಿಸಿ ವಿಜ್ಞಾನವು ಶಿಕ್ಷಣಕಾರ್ಯಕ್ಕೆ ಮೊಟ್ಟಮೊದಲು ನೆರವಾಯಿತು. ಒಂದು ಭಾವಚಿತ್ರವನ್ನು, ರೇಖಾಚಿತ್ರವನ್ನು ಅನೇಕಪಟ್ಟು ದೊಡ್ಡದನ್ನಾಗಿಮಾಡಿ ಮಾಯಾದೀಪದ ಸಹಾಯದಿಂದ ಮಕ್ಕಳೆದರು ಇಡಲು ಬರುತ್ತಿತ್ತು. ವಿಜ್ಞಾನ, ಭೂಗೋಲ, ಇತಿಹಾಸ ಮುಂತಾದ ವಿಷಯಗಳ ಅಧ್ಯಾಪನ ಕಾರ್ಯದಲ್ಲಿ ಮಾಯಾದೀಪದ ಪ್ರಯೋಜನವನ್ನು ಪಡೆಯುವಂತಿದೆ. ಮಾಯಾದೀಪವನ್ನೇ ಹೆಚ್ಚು ಆಧುನಿಕವಾಗಿ, ಹೆಚ್ಚು ಉಪಯುಕ್ತವಾಗಿ ಮಾರ್ಪಡಿಸಿದ 'ಎಪಿಡಾಯಸ್ಕೋಪ'ಯೆಂಬ ನೂತನ ಸಾಧನವಿದೆ. ಮಾಯಾದೀಪದಲ್ಲಿ ವಿಶಿಷ್ಟ ರೀತಿಯಿಂದ ಸಿದ್ಧಗೊಳಿಸಿದ ಚಿತ್ರದ ಪಟ್ಟಿಗಳನ್ನು (Slides) ಮಾತ್ರ ಉಪಯೋಗಿಸಬೇಕಾಗುತ್ತಿತ್ತು. ಆದರೆ ಈ ನೂತನ ಸಾಧನದಲ್ಲಿ ಈ ನಿರ್ಬಂಧವಿಲ್ಲ. ಶಿಕ್ಷಣ ಕಾರ್ಯಕ್ಕೆ ಅಗತ್ಯವೆನಿಸುವ ಬೇಕಾದ ಸಾಮಗ್ರಿಯನ್ನೆಲ್ಲ ಅನೇಕಪಟ್ಟು ಗಾತ್ರದಲ್ಲಿ ದೊಡ್ಡದನ್ನಾಗಿ ಮಾಡಿ ಪ್ರದರ್ಶಿಸಬಹುದಾಗಿದೆ. ಪಠ್ಯಪುಸ್ತಕದ ಒಂದು ಪುಟವನ್ನು, ಅದರಲ್ಲಿ ಬಂದಿರುವ

ಒಂದು ಚಿತ್ರವನ್ನು, ಸಚಿತ್ರ ಪತ್ರಿಕೆಗಳಲ್ಲಿ ಬರುವ ಯಾವುದೇ ಚಿತ್ರವನ್ನು ಇಡೀ ವರ್ಗವು ಏಕಕಾಲಕ್ಕೆ ನಿರೀಕ್ಷಿಸುವಂತೆ ಈ ಯಂತ್ರವು ಪ್ರದರ್ಶಿಸಬಲ್ಲದು. ಈ ಚಿತ್ರಗಳು ಅಚಲವಾಗಿರುವದರಿಂದ, ಶಿಕ್ಷಕನ ವಿವರಣೆ ಪೂರ್ತಿಗೊಳ್ಳುವವರೆಗೆ ಬೇಕಾದಷ್ಟು ಅವಧಿಯವರೆಗೆ ಕಣ್ಣೆದುರು ಅವುಗಳನ್ನು ನಿಲ್ಲಿಸಬಹುದು.

ವಿಜ್ಞಾನದ ಮುಂದಿನ ಹೆಜ್ಜೆ—ಚಲಚ್ಚಿತ್ರಗಳು. ಸ್ವಾಭಾವಿಕ ಚಲನವಲನಗಳನ್ನು ಚಲಚ್ಚಿತ್ರವು ಯಥಾವತ್ತಾಗಿ ತೋರಿಸುವದು. ಇದರಿಂದ ಇವುಗಳಿಗೆ ವಾಸ್ತವಿಕತೆಯ ಸ್ವರೂಪ ಬರುವದು. ಒಂದು ಕ್ರಿಯೆ, ಒಂದು ವಿಧಾನ ಕಣ್ಮುಂದೆ ಪ್ರತ್ಯಕ್ಷವಾಗಿ ನಡೆದಂತೆ ಎನಿಸುವದು. ಮಾತಿನ ವಿವರಣೆಗಿಂತ ಅದನ್ನು ಪ್ರತ್ಯಕ್ಷವಾಗಿ ಕಾಣುವಂತೆ ಮಾಡುವದರಿಂದ ಸ್ಪಷ್ಟವಾಗುವದು, ಹೆಚ್ಚು ಪರಿಣಾಮಕಾರಿಯಾಗುವದು. ಮೊದಲಿನ ಚಲಚ್ಚಿತ್ರಗಳು ' ಮೂಕ 'ವಾಗಿದ್ದವು. ಮೂಕ ಚಿತ್ರಗಳು ಇಂದು ' ವಾಕ್ಚಿತ್ರ 'ಗಳಾಗಿ ವಿಕಾಸ ಹೊಂದಿವೆ. ರೂಪ, ಗತಿ, ಹಾಗೂ ಸ್ವರ, – ಈ ಮೂರರ ರಮ್ಯವಾದ ಸಮ್ಮೇಳನವು ವಾಕ್ಚಿತ್ರಗಳಲ್ಲಿ ಕಂಡು ಬರುವದು. ಶಬ್ದೋಚ್ಚಾರ, ಕವಿತಾ-ವಾಚನ ಮುಂತಾದ ವರ್ಗದ ಅಧ್ಯಾಪನ ಕಾರ್ಯದಲ್ಲಿ, ಚಲಚ್ಚಿತ್ರಗಳಿಂದ ವಿಶೇಷ ಪ್ರಯೋಜನ ಪಡೆಯುವಂತಾಗಿದೆ. ಅಂತೆಯೆ ಮಕ್ಕಳ ಶಿಕ್ಷಣಕಾರ್ಯದಲ್ಲಿ ವಾಕ್ಚಿತ್ರಗಳಿಗೆ ಇನ್ನೂ ಮನ್ನಣೆ ದೊರೆಯುವಂತಿದೆ.

ವ್ಯಾಪಕ ಶಿಕ್ಷಣ ಹಾಗೂ ಲೋಕಶಿಕ್ಷಣಗಳೆರಡರಲ್ಲಿಯೂ ಈ ವಾಕ್ಚಿತ್ರಗಳ ಪ್ರಭಾವವು ಬಹಳೇ ವ್ಯಾಪಕವಾಗಿದೆ, ಗಣನೀಯವಾಗಿದೆ. ಅನೇಕ ಮುಖವಾಗಿಯೂ ಅದು ಸಾಗಿದೆ. ವಾಕ್ಚಿತ್ರಗಳು ಜನಜೀವನವನ್ನು ರೂಪಿಸುವ ಅತ್ಯಂತ ಪ್ರಭಾವ ಶಾಲಿಯಾದ ಶಕ್ತಿಯೆನಿಸಿವೆ. ಜನಜೀವನದ ವಿವಿಧ ಅಂಗಗಳಲ್ಲಿ ಅವುಗಳ ಪ್ರಭಾವವು ಇಂದು ಒಡೆದು ತೋರುತ್ತಿದೆ. ಜನತೆಯ ನಡೆನುಡಿ, ವೇಷಭೂಷಣ–ಮುಂತಾದವುಗಳಲ್ಲಿ ಅನುಕರಣದಿಂದ ಶೀಘ್ರವಾದ ಪರಿವರ್ತನೆಗಳುಂಟಾಗಲು ಈ ಚಲಚ್ಚಿತ್ರಗಳೇ ಬಹುಮಟ್ಟಿಗೆ ಕಾರಣವೆಂದು ಬಲ್ಲವರು ಹೇಳುವದುಂಟು. ನಾಟಕದಲ್ಲಿ ಪ್ರತ್ಯಕ್ಷವಾಗಿ ತೋರಿಸಲು ಶಕ್ಯವಾದ ಭವ್ಯ ದೃಶ್ಯಗಳನ್ನು, ಜೀವನದ ವಿವಿಧ ಸನ್ನಿವೇಶಗಳನ್ನು ಚಲಚ್ಚಿತ್ರಗಳಲ್ಲಿ ಯಥಾವತ್ತಾಗಿ ತೋರಿಸಲು ಸಾಧ್ಯವಿದೆ. 'ವಾಸ್ತವಿಕತೆ'ಯಿಂದಲೆ ಚಲಚ್ಚಿತ್ರಗಳು ಸಜೀವಕಲಾಕೃತಿಗಳಾದ ನಾಟಕಗಳನ್ನು ಹಿಂದೆ ಹಾಕಿವೆ. ನಾಟಕಗಳನ್ನು ನೋಡುವ ಅಭಿಜಾತದೃಷ್ಟಿ, ತಾಳ್ಮೆ–ತಾದಾತ್ಮ್ಯಗಳು ಚಲಚ್ಚಿತ್ರಗಳ ಕೆಳಮಟ್ಟದ ಪ್ರೇಕ್ಷಕರಿಗೆ ಬೇಕಿಲ್ಲ. ಪ್ರಣಯ, ಸಾಹಸ, ಚಮತ್ಕೃತಿಗಳಿಂದ ಕೂಡಿದ ಚಿತ್ರಗಳಿಂದ ಅವರು ಸಂತುಷ್ಟರಾಗುವರು. ಈಗಿನ ಕಾಲದಲ್ಲಿ ಲಭ್ಯವಿರುವ ಅಲ್ಪಾವಧಿಯ ವಿರಾಮಕ್ಕೆ ಅಲ್ಪಬೆಲೆಯಲ್ಲಿ ಚಲಚ್ಚಿತ್ರಗಳು ಆಕರ್ಷಕವಾದ ಮನರಂಜನೆಯನ್ನು ನೀಡುವವು. ಈ ಸಂಗತಿಯೆ ಅವುಗಳ ಲೋಕಪ್ರಿಯತೆಗೆ ಕಾರಣವೆನ್ನ ಬಹುದು. ಕೀಳುತರಗತಿಯ ಚಲಚ್ಚಿತ್ರಗಳು ಜನತೆಯ ಅಭಿರುಚಿಯನ್ನು ಕೆಡಿಸಬಾರದು; ಸಮಾಜದ ಸ್ವಾಸ್ಥ್ಯವನ್ನು ಕದಡಬಾರದು. ಚಲಚ್ಚಿತ್ರಗಳ ಪ್ರಭಾವವನ್ನರಿತ ಸರಕಾರವು ಇದಕ್ಕಾಗಿ ಅವುಗಳನ್ನು ಪೂರ್ವಪರೀಕ್ಷೆಯ ನಿಯಂತ್ರಣಕ್ಕೆ ಒಳಪಡಿಸಿದೆ. ಬಂಧುಪ್ರೀತಿ, ಸಹಕಾರ, ರಾಷ್ಟ್ರಪ್ರೇಮ ಮುಂತಾದ ಸಾಮಾಜಿಕ ಸದ್ಗುಣಗಳನ್ನು ಪ್ರಚುರಗೊಳಿಸುವ ಒಳ್ಳೇ ಚಿತ್ರಗಳಿಗೆ ಸರಕಾರವು ಪ್ರಶಸ್ತಿ–ಪಾರಿತೋಷಕಗಳಿಂದ ಪ್ರೋತ್ಸಾಹಿ

ಸುತ್ತಿವೆ. ಪ್ರಚಲಿತ ವಿಷಯಗಳ ಪರಿಚಯವನ್ನು ಮಾಡಿಕೊಡಲು ಹಾಗೂ ಜನತೆಯ ತಿಳುವಳಿಕೆಯನ್ನು ಹೆಚ್ಚಿಸಲು ನಿತ್ಯವೂ ವಿವಿಧ 'ಸಾಕ್ಷೀ ಚಿತ್ರ'ಗಳನ್ನು ಪ್ರದರ್ಶಿಸ ಲಾಗುತ್ತಿದೆ. ಸ್ವಚ್ಛತೆ, ಆರೋಗ್ಯ, ಉದ್ದಿಮೆಗಳ ಬೆಳವಣಿಗೆ, ಲಲಿತ ಕಲೆಗಳು, ಸೌಂದರ್ಯದ ನೆಲೆವೀಡುಗಳು, ವಿದೇಶಸಂದರ್ಶನ, ವಿವಿಧೋದ್ದೇಶ ಯೋಜನೆಗಳು— ಮುಂತಾದ ವಿವಿಧವಿಷಯುಗಳಿಗೆ ಸಂಬಂಧಿಸಿದ ಲಘುಚಿತ್ರಗಳನ್ನು ಇನ್ನೂ ಹೆಚ್ಚಾಗಿ ನಿರ್ಮಿಸಿ ಜನತೆಯ ತಿಳುವಳಿಕೆ–ಸಹಾನುಭೂತಿಗಳನ್ನು ವಿಸ್ತರಿಸಲು ಸಾಕಷ್ಟು ಅವಕಾಶ ವಿದೆ.

ಶಿಕ್ಷಣಕಾರ್ಯದಲ್ಲಿ ಚಲಚ್ಚಿತ್ರಗಳ ಪ್ರಯೋಜನವನ್ನು ಇನ್ನೂ ಹೆಚ್ಚು ವ್ಯಾಪಕವಾಗಿ ಮಾಡಬಹುದಾಗಿದೆ. ವಿಜ್ಞಾನವು ನಾಗಾಲೋಟದಿಂದ ಮುಂದೋಡುತ್ತಿದೆ. ಜ್ಞಾನದ ಕ್ಷೇತ್ರವು ದಿನದಿನಕ್ಕೂ ವಿಶಾಲವಾಗುತ್ತಿದೆ; ಜನ ಜೀವನದ ಮೇಲೆ ತನ್ನ ಬಹುಮುಖವಾದ ಪ್ರಭಾವವನ್ನು ಬೀರುತ್ತಿದೆ. ಪ್ರಗತಿಪರವಾದ ಜೀವನದಿಂದ ಶಿಕ್ಷಣವು ದೂರ ಸಿಡಿದು ನಿಲ್ಲಲಾರದು. ಜೀವನೋಪಯೋಗಿಯಾದ ಜ್ಞಾನವನ್ನು ಶಿಕ್ಷಣವು ಅಳವಡಿಸಿ ಪಳ್ಳಕೋ ಬೇಕಾಗುವದು. ಆದರೆ ಕಲಿಯುವವರಿಗೆ ಕಲಿಸುವವರಿಗೆ ಉಪಲಭ್ಯವಿರುವ ಸಮಯ ಅಲ್ಪವಾದುದು. ಜೀವನೋಪಯೋಗಿಯಾದ ಎಲ್ಲ ವಿಷಯಜ್ಞಾನವನ್ನು ನಿಯಮಿತವಾದ ಪಠ್ಯ ಪುಸ್ತಕಗಳಲ್ಲಿ ತರಲು ಸಾಧ್ಯವೂ ಅಲ್ಲ. ಇಷ್ಟವೂ ಅಲ್ಲ. ಚಲಚ್ಚಿತ್ರಗಳಿಂದ ಈ ಕೊರತೆಯನ್ನು ತುಂಬಿಕೊಳ್ಳಬಹುದು. ಮಕ್ಕಳಿಗೆ ವಿಷಯಜ್ಞಾನವನ್ನು ಮಾಡಿಕೊಡು ವಲ್ಲಿ ಪೂರಕಸಾಧನಗಳೆಂದು ಅವುಗಳನ್ನು ಬಳಸಬಹುದು. ಪ್ರವಾಸದ ಶಕ್ಯತೆ–ಅನು ಕೂಲತೆಗಳಿಲ್ಲದ ಸಂದರ್ಭಗಳಲ್ಲಿ, ವಿದ್ಯಾರ್ಥಿಗಳನ್ನು ಈ ನೂತನ ಸಾಧನದಿಂದ ಬೇಕಾದಲ್ಲಿಗೆ ಕರೆದೊಯ್ಯಬಹುದು.

(೬) ಜಾತ್ರೆಗಳು:— ಹಳ್ಳಿಯ ಜನಜೀವನದ ಬಗ್ಗೆ ಸಾಮಾನ್ಯವಾಗಿ ಒಂದು ತಪ್ಪುತಿಳುವಳಿಕೆ ಕಂಡುಬರುವದು— 'ಹಳ್ಳಿಯ ಜೀವನಕ್ರಮವು ಒಂದೇ ಮುಖವಾಗಿ ಸಾಗುತ್ತಿದೆ. ಅವರಲ್ಲಿ ಬದಲುಭಿನ್ನತೆಗಳಿಲ್ಲ. ಅದರಿಂದ ಈ ಜೀವನವು ನೀರಾಕರ್ಷಕ ವಾಗಿದೆ.' ಹಳ್ಳಿಗರ ಜೀವನಕ್ರಮದ ಸರಿಯಾದ ಪರಿಚಯವುಳ್ಳವರು ಈ ಮಾತನ್ನೆಂದಿಗೂ ಪೂರ್ಣವಾಗಿ ಒಪ್ಪಿಕೊಳ್ಳಲಾರರು. ನಗರ ಜೀವನದಲ್ಲಿ ಕಾಣುವ 'ದಿನಕೊಂದು ಹೊಸ ಪರಿಯು' ಹಳ್ಳಿಗಳಲ್ಲಿ ಕಾಣದೆಂಬದು ನಿಜ. ಆದರೆ ಅವರ ಜೀವನದಲ್ಲಿಯೂ ಅಸ್ಥೆಯ ವಿಷಯುಗಳಿವೆ; ಆನಂದ–ಉಲ್ಲಾಸಗಳ ಸಂದರ್ಭಗಳಿವೆ. ಸುಖಸಂತಸಗಳ ಸನ್ನಿವೇಶಗಳಿವೆ. ಜಾತ್ರೆ, ಸಂತೆ, ಸುಗ್ಗಿ, ಬೈಲಾಟ (ಯಕ್ಷಗಾನ) ಇವು ಈ ಬಗೆಯ ಸಮಯುಗಳೆನ್ನಬಹುದು. ಇವುಗಳಲ್ಲಿ ಜಾತ್ರೆಯೆ ಎಲ್ಲಕ್ಕೂ ಹಿರಿದಾದುದು. ಎಲ್ಲರಿಗೂ ಸಮನಾಗಿ ಸಂತೋಷಪ್ರದವಾದುದು.

ಮೇಲಿನಿಂದ ನೋಡುವವರಿಗೆ; ಈ ಜಾತ್ರೆ ಕೇವಲ ಒಂದು ಉತ್ಸವ— ಹಬ್ಬದ ದಿನ ವಿದ್ದಂತೆ. ಅಂದು ದಿನದ ದುಡಿಮೆಗೆ ವಿರಾಮ. ಇದ್ದುದರಲ್ಲಿಯೇ ಸವಿಯೂಟ, ಒಳ್ಳೇ ಬಟ್ಟೆಗಳನ್ನು ತೊಡುವದು. ಇಡೀದಿನವೆಲ್ಲ ವಿನೋದವಾಗಿ ಕಾಲಕಳೆಯುವದು. ಅಂದಿನ ಪೇಟೆಯಲ್ಲಿ ಎಷ್ಟೇ ಹಣದ ಕೊರತೆಯಿದ್ದರೂ ಮಕ್ಕಳಿಗಾಗಿ 'ಮಿಠಾಯಿ'–ಆಟಿಗೆ,

ಗಳು, ಮಡದಿಗಾಗಿ ಬಟ್ಟೆ, ಮನೆಗಾಗಿ ಪಾತ್ರೆ-ಮುಂತಾದವುಗಳನ್ನು ಕೊಂಡುಕೊಳ್ಳುವದು. ಸಂಜೆಗೆ 'ಜಂಗೀಕುಸ್ತಿ' ಗಳು. ಇಡೀ ರಾತ್ರಿಯೆಲ್ಲ ಒಂದು ಬೈಲಾಟವನ್ನು ನೋಡುವದು. ಇಲ್ಲವೆ ಗೀಗೀ ಪದಗಳನ್ನು, ಲಾವಣಿಗಳನ್ನು ಕೇಳುವದು. ಈ ರೀತಿಯಾಗಿ ಹಗಲು ರಾತ್ರಿಯೆಲ್ಲ ಒಂದಿಲ್ಲೊಂದು ಸಂತೋಷದ ಕಾರ್ಯದಲ್ಲಿ ಅವರು ತೊಡಗುವರು. ಆದರೆ ಈ ಸಂತಸದ ಸಂಗತಿಗಳಲ್ಲಿ ಅನೇಕ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ನಮ್ಮ ಪೂರ್ವಜರು ಹೆಣೆದಿರುವರು. ಪ್ರತಿಯೊಂದು ಜಾತ್ರೆಯೂ ಒಂದು ದೇವತೆಯ ಇಲ್ಲವೆ ಒಬ್ಬ ಪವಾಡಪುರುಷನ ಪೂಜೆಗಾಗಿ, ಪ್ರಿತ್ಯರ್ಥವಾಗಿ. ಆ ದೇವತೆಯ ಇಲ್ಲವೆ ಆ ಮಹಾಪುರುಷನ ಆರಾಧನೆ ಅಂದು ನಡೆಯುವದು. ಶುಚಿಯಾದ ಬಟ್ಟೆಯುಟ್ಟುಕೊಂಡು ಆ ದಿನ ಎಲ್ಲರೂ ದೇವದರುಶನ ತೆಗೆದುಕೊಳ್ಳುವರು. ಯಥಾಶಕ್ತಿಯಾಗಿ ಕಾಣಿಕೆ ಅರ್ಪಿಸುವರು. ತೆಂಗು, ಹಣ್ಣು, ಧೂಪ, ಕರ್ಪುರ, ಇವು ಸಾಮಾನ್ಯ ಪೂಜಾದ್ರವ್ಯಗಳು. ದೇವರಿಗೆ ಅಂದು ಅಲಂಕಾರ ವಿಶೇಷ ಪೂಜೆ. ಕೆಲವು ಜಾತ್ರೆಗಳಲ್ಲಿ ಬಂದ ಭಕ್ತರಿಗೆಲ್ಲ 'ಮಹಾಪ್ರಸಾದ' ದೊರೆಯುವದು. ಇವೆಲ್ಲ ಸಂಗತಿಗಳು ದೈವಭಕ್ತಿ-ಶ್ರದ್ಧೆಗಳಿಗೆ ತುಂಬಾ ಪೋಷಕವಾಗಿರುವವು. ಅಂದಿನ ದಿನವೆಲ್ಲ ಒಂದು ಪವಿತ್ರವಾದ ಸನ್ನಿವೇಶ.

ತೇರು ಜಾತ್ರೆಯ ವೈಶಿಷ್ಟ್ಯ, ಮುಖ್ಯ ಕಾರ್ಯಕ್ರಮ. ಆ ದಿನ ಜನತೆಯ ಸಂಭ್ರಮಕ್ಕೆ ಮಿತಿಯಿಲ್ಲ. ಸುತ್ತಲಿನ ದೂರದ ಭಾಗಗಳಿಂದ 'ಪರಸೆ'ನೆರೆಯುವದು. ಮನೆಯ ಹೆಣ್ಣುಮಕ್ಕಳನ್ನು, ಆಪ್ತೇಷ್ಟರನ್ನು ತೇರಿಗೆ ಬರಮಾಡಿಕೊಳ್ಳುವರು. ಯಾವ ಭೇದವಿಲ್ಲದೆ ತೇರಿನ ಕಾರ್ಯಕ್ರಮದಲ್ಲಿ ಜನತೆ ಭಾಗವಹಿಸುವದು.

ಜಾತ್ರೆ ನಮ್ಮ ಸಂಸ್ಕೃತಿಯ ರಕ್ಷಣೆಗೆ, ಐಕ್ಯಭಾವದ ಸಂವರ್ಧನೆಗೆ ಸಹಾಯಕವಾಗಿದೆ. ಇತ್ತೀಚೆಗೆ ಜಾತ್ರೆಗಳನ್ನು ಲೋಕ ಶಿಕ್ಷಣದ ಸುಪ್ರಸಂಗಳನ್ನಾಗಿ ಮಾಡಿಕೊಂಡಿರುವರು. ಉದ್ಬೋಧಕವಾದ ಉಪನ್ಯಾಸಗಳು, ವಿವಿಧ ಸ್ಪರ್ಧೆಗಳು, ಪ್ರೇಕ್ಷಣೀಯವಾದ ಪ್ರದರ್ಶನಗಳು, ಇಂದು ನಡೆಯುವ ಜಾತ್ರೆಗಳಲ್ಲಿ ಸಾಮಾನ್ಯ ಸಂಗತಿಗಳಾಗಿವೆ. ಇವುಗಳಿಂದ ಜಾತ್ರೆಗಳ ಶೈಕ್ಷಣಿಕ ಮಹತಿಯು ಮತ್ತಿಷ್ಟು ಹೆಚ್ಚಿದೆ.

(೭) **ಹಬ್ಬಗಳು :—** ಭಾರತೀಯ ಸಂಸ್ಕೃತಿಯಲ್ಲಿ ವಾರದ ಒಂದೊಂದು ದಿನವೂ ಒಂದೊಂದು ಹಬ್ಬವಾಗಿದೆಯೆಂದು ವಿನೋದವಾಗಿ ಹೇಳುವದುಂಟು. ಬೇರೆ ಯಾವ ದೇಶಕ್ಕಿಂತಲೂ ಭಾರತದಲ್ಲಿ ಹಬ್ಬಗಳ ಸಂಖ್ಯೆ ಹೆಚ್ಚಿಗಿರುವದು. ಹಬ್ಬಗಳನ್ನು ಧರ್ಮದೊಡನೆ, ಧರ್ಮವನ್ನು ಜೀವನದೊಡನೆ ಏಕರೂಪವಾಗುವಂತೆ ಒಂದುಗೂಡಿಸಿರುವದು ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಈ ಜನತೆಯ ನಿತ್ಯ ಜೀವನದೊಡನೆ ಹಬ್ಬ ಹಾಗೂ ಧರ್ಮಗಳೆರಡೂ ಹಾಸುಹೊಕ್ಕಾಗಿ ಹೆಣೆದುಕೊಂಡುಬಂದಿವೆ. ಜೀವನ ಸಾಮರಸ್ಯವನ್ನು ಬೆಳೆಸುವ ಶಿಕ್ಷಣವು ಹಬ್ಬಗಳನ್ನು ಕಡೆಗಣಿಸುವಂತಿಲ್ಲ.

ಹಬ್ಬಗಳ ಹುಟ್ಟು, ಸದುದ್ದೇಶಕ್ಕಾಗಿ, ಅವುಗಳ ಆಚರಣೆ ಜನತೆಯ ಕಲ್ಯಾಣಕ್ಕಾಗಿ. ಭಾರತೀಯರು ಹಬ್ಬಗಳನ್ನು ಸುಖೋಪಭೋಗದ ಪ್ರಸಂಗಗಳನ್ನಾಗಿ ನಿರ್ಮಿಸಿಲ್ಲ. ಮಿಷ್ಟಾನ್ನದ ಹಬ್ಬಗಳಿರುವಂತೆ, ನಿರಾಹಾರದ ಹಬ್ಬಗಳೂ ಇರುವವು. ಪ್ರತಿಯೊಂದು ಹಬ್ಬದಲ್ಲಿಯೂ ಒಂದು ಒಂದು ದೇವತೆಗೆ ಪೂಜೆ-ಪುರಸ್ಕಾರ. ಒಂದಿಲ್ಲೊಂದು ಬಗೆಯ

ದೇಹದಂಡನೆ, ವ್ರತ-ನಿಯಮಗಳು. ಬೇಸಿಗೆಯ ಉರಿಬಿಸಿಲಿರಬಹುದು. ಆದರೆ ಅಂದು ಶಿವರಾತ್ರಿ. ಸಂಜೆಯ ಪ್ರದೋಷ ಪೂಜೆಯಾಗುವವರೆಗೆ ಬಾಯಲ್ಲಿ ಹನಿ ನೀರು ಹಾಕು ವಂತಿಲ್ಲ. ಇಂದ್ರಿಯ ನಿಗ್ರಹ, ಸ್ವಸುಖ ತ್ಯಾಗಗಳಿಗೆ ಹಬ್ಬಗಳು ಪ್ರಥಮ ಪಾಠಗಳಾಗಿವೆ. ಸವಿಯೂಟ ಮಾಡಬಹುದು ; ಆದರೆ ಅಂದಿನ ಸವಿಯೂಟ ಮೊದಲು ದೇವನಿಗೆ 'ಆರೋ ಹಣೆ'ಯಾಗಬೇಕು. ಎಲ್ಲವೂ ದೇವನದು, ಎನ್ನುವ ನಿರಭಿಮಾನ ; ಎಲ್ಲವೂ ದೇವನಿ ಗಾಗಿ, ಎನ್ನುವ ಸಮರ್ಪಣಭಾವ, ಇದರಿಂದ ತಿಳಿಯದೆಯೆ ಅಂಕುರಿಸುವದು. ಹೀಗೆ ಜೀವನದೊಡನೆ ಬೆರತ ಹಬ್ಬಗಳು, ಹೆಜ್ಜೆ ಹೆಜ್ಜೆಗೆ ಜೀವನವನ್ನು ತಿದ್ದುವ ಒಳ್ಳೇ ಸಾಧನ ಗಳಾಗಿವೆ. ತ್ಯಾಗ, ತಾಳ್ಮೆ, ಬಂಧುಪ್ರೀತಿಗಳಿಗೆ ಜನಾಂಗದ ಹೃದಯದಲ್ಲಿ ದಾರಿಮಾಡಿ ಕೊಡುತ್ತಿವೆ.

ಹಬ್ಬಗಳಲ್ಲಿ ಬಂಧುಗಳೆಲ್ಲರೂ ಸಮ್ಮಿಲಿತರಾಗುವರು. ಸಾರ್ವಜನಿಕವಾಗಿ ಆಚರಿ ಸುವ ಉತ್ಸವಗಳಲ್ಲಿ ಯಾವ ಭೇದಭಾವವಿಲ್ಲದೆ ಎಲ್ಲ ಜನರೂ ಭಾಗವಹಿಸುವರು. ಹಬ್ಬ ಗಳಿಂದ ಜನತೆಯಲ್ಲಿ ಐಕ್ಯ ಭಾವದ ಸಂವರ್ಧನೆಯಾಗುವದು. ಎಲ್ಲ ಧರ್ಮಗಳನ್ನೂ ಸಮನಾಗಿ ಗೌರವಿಸುವ ಸಹಿಷ್ಣುತೆಯು ಸ್ಥಿರವಾಗಿ ಉಳಿಯುವದು. ಹಿಂದೂ ಮುಸಲ್ಮಾ ನರ ಹಬ್ಬಗಳಲ್ಲಿ, ಒಬ್ಬರು ಮತ್ತೊಬ್ಬರ 'ದೇವತೆಗಳಿಗೆ ನಡೆದುಕೊಳ್ಳುವದನ್ನು, ಹಾಗೂ ಪರಸ್ಪರರು ಕೂಡಿಕೊಂಡು ನಲಿದಾಡುವದನ್ನು ಭಾರತದಲ್ಲಿ ಇಂದಿಗೂ ಕಾಣಬಹುದು. ಒಳ್ಳೇ ಸಾಮಾಜಿಕ ಪ್ರಜ್ಞೆಯನ್ನು ಹುಟ್ಟಿಸಿ, ಸಮಾಜದ ಸ್ವಾಸ್ಥ್ಯಕ್ಕೆ ಹಬ್ಬಗಳು ಸಹಾಯಕ ವೆನಿಸಿವೆ. ದೀಪಾವಳಿಯ ಸಂತಸದಲ್ಲಿ ಅಣ್ಣತಮ್ಮಂದಿರು ಅಕ್ಕತಂಗಿಯರು ಏನೇ ವಿರಸ ಭಾವವಿದ್ದರೂ ಅದನ್ನೆಲ್ಲ ಮರೆತುಬಿಡಬೇಕು ; ಒಬ್ಬರಿಗೊಬ್ಬರು ಪ್ರೀತಿಯ ಕಾಣಿಕೆಗಳನ್ನು ಅರ್ಪಿಸಬೇಕು. ಯುಗಾದಿಯಲ್ಲಿ 'ಬೇವು ಬೆಲ್ಲ'ಗಳನ್ನು ಸೇವಿಸಿ ನೋವು ನಲಿವುಗಳ ಸಮ್ಮಿಶ್ರ ಜೀವನವನ್ನು ನೆನೆಯಬೇಕು. ಮಕರ ಸಂಕ್ರಾಂತಿಯಲ್ಲಿ 'ಎಳ್ಳು ಬೆಲ್ಲ ತೆಗೆದುಕೊಳ್ಳಿ, ಎಳ್ಳು ಬೆಲ್ಲದಂತೆ ಕೂಡಿಕೊಂಡು ಸವಿಯಾಗಿ ಬಾಳೋಣ', ಎನ್ನುವ ಸದ್ಭಾವನೆಯನ್ನು ಮನೆಮನೆಗೆ ಒಯ್ದು ಮುಟ್ಟಿಸಬೇಕು. ದಸರೆಯ ದಿನದಲ್ಲಿ— 'ಬಂಗಾರ ತೆಗೆದುಕೊಳ್ಳಿ, ಬಂಗಾರದಂತೆ ಇರೋಣ', ಎಂಬ ಭಾವನೆಯಿಂದ ಬಾಳುವೆಯನ್ನು ಉಜ್ವಲಗೊಳಿಸಬೇಕು. ಸಂಕುಚಿತ ಜೀವನದ ಸೀಮೆಯನ್ನು ದಾಟಿ ಸೀಮೋಲ್ಲಂಘನ ಮಾಡಬೇಕು. 'ಅಂದಿನ ಹಗೆತನದ ಅಂಗಾರವಾಯಿತು, ಇಂದಿನ ಗೆಳೆತನದ ಸಿಂಗಾರವಾಯಿತು',— ಹಿಂದಿನ ವೈರ ಭಾವವು ನಂದಿ, ಮುಂದಿನ ಗೆಳೆತನಕ್ಕೆ ದಸರೆಯ ಹಬ್ಬವು ನಾಂದಿಯಾಗಬೇಕು. ಶಾಂತಿ-ಪ್ರೀತಿಗಳಿಂದ ಪುಷ್ಟಿಗೊಂಡು ಸಮಾಜವು ಪ್ರಗತಿಯ ದಾರಿಯಲ್ಲಿ ಮುಂದರಿಯಲು, ಹಬ್ಬ ಗಳು ಪ್ರೇರಕ ಶಕ್ತಿಗಳಾಗಿವೆ. ಶಿಕ್ಷಣದ ಮಹಾಗುರಿಯೂ ಇದೇ ಆಗಿರುವದು. ಸಂಸ್ಕೃ ತಿಯ ಸೂಕ್ಷ್ಮ ಎಳೆಗಳಿಂದ ನಿತ್ಯ ಜೀವನವನ್ನು ಸತ್ವಶಾಲಿಯನ್ನಾಗಿ ಮಾಡಲು ನಮ್ಮ ಪೂರ್ವಜರು ಕುಶಲತೆಯಿಂದ ಯೋಜಿಸಿದ ಸಂದರ್ಭಗಳೆ ಭಾರತೀಯರ ಹಬ್ಬಗಳು.

ಹಬ್ಬಗಳಲ್ಲಿರುವ ಬೇರೆ ಕೆಲವು ಶೈಕ್ಷಣಿಕ ಅಂಶಗಳೂ ಮನನೀಯವಾಗಿವೆ. ಎಲ್ಲ ಹಬ್ಬಗಳೂ ಒಂದು ದೇವತೆ ಇಲ್ಲವೆ ಒಬ್ಬ ಮಹಾಪುರುಷನ ಹೆಸರಿನಲ್ಲಿ ನಡೆಯುವವಲ್ಲವೆ ? ಆ ದೇವತೆಗೆ ಇಲ್ಲವೆ ಆ ಮಹಾಪುರುಷನಿಗೆ ಸಂಬಂಧಿಸಿದ ಕಥೆ— 'ಮಾಹಾತ್ಮ್ಯ' ಪ್ರತಿ

ಯೊಂದು ಹಬ್ಬಕ್ಕೆ ಹಿನ್ನೆಲೆಯಾಗಿ ನೆಲೆಸಿದೆ. ಹಬ್ಬಗಳು ಈ ಪ್ರಾಚೀನ ಕಥೆಗಳನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಡುವವು. 'ವೀರಪೂಜೆ'ಯ ಸ್ವಾಭಾವಿಕ ಒಲವಿಗೆ ಒಳ್ಳೇ ದಾರಿಯನ್ನು ಹಾಕಿಕೊಡುವವು. ಓದುಬರೆಹ ಬಾರದವರಲ್ಲಿಯೂ ಪ್ರಾಚೀನ ಸಾಹಿತ್ಯದ ಪ್ರಚಾರವನ್ನು ಮಾಡುವವು. ಸನಾತನ ಸಂಸ್ಕೃತಿಯ ಬಗ್ಗೆ ಆದರಾಭಿಮಾನಗಳನ್ನು ಉಳಿಸಿಕೊಳ್ಳುವವು.

ಹಬ್ಬಗಳಲ್ಲಿರುವ ಇನ್ನೊಂದು ಶೈಕ್ಷಣಿಕ ಅಂಶವೂ ಮನನೀಯವಾಗಿದೆ. ಮನುಷ್ಯನು ಸಾಮಾಜಿಕ ಜೀವಿಯಾಗಿರುವಂತೆ, ಉತ್ಸವಪ್ರಿಯನೂ ಆಗಿರುವನು. ಈ ಉತ್ಸವ ಪ್ರಿಯತೆ ಮಾನವ ಸ್ವಭಾವದ ಎಳೆಗಳಲ್ಲಿ ಒಂದಾಗಿದೆ. ಮಾನವರಚಿತವಾದ ಬೇರೆ ಕೆಲವು ಸಂಸ್ಥೆ-ಸಂಪ್ರದಾಯಗಳು ಕಾಲಾವಧಿಯಲ್ಲಿ ಅಳಿದು ಹೋಗಿವೆ. ಆದರೆ ಹಬ್ಬಗಳು ಮಾತ್ರ ಸ್ಥಿರವಾಗಿ ಉಳಿದು ಕೊಂಡಿವೆ. ಮಾನವ ಸ್ವಭಾವದಲ್ಲಿರುವ ಉತ್ಸವ ಪ್ರಿಯತೆಯೆ ಹಬ್ಬಗಳ ಅಮರತೆಗೆ ಭದ್ರವಾದ ತಳಹದಿಯಾಗಿದೆ. ಜೀವನದ ಸೌಕರ್ಯಗಳು ಸುಲಭವಾಗಿ ದೊರೆಯುವ 'ಸಮೃದ್ಧ' ಗುಂಪಿನ ಸ್ವಾಭಾವಿಕ ಪ್ರದೇಶಗಳಲ್ಲಿ ಈ ಉತ್ಸವ ಪ್ರಿಯತೆಯು ಮತ್ತಿಷ್ಟು ಹೆಚ್ಚಾಗಿರುವದು. ಭಾರತವು ಈ ಮಾದರಿಯ ಪ್ರದೇಶ. ಅಂತೆಯೆ ಭಾರತದ ಉತ್ಸವಗಳ ಸಂಖೆಯು ಅಧಿಕವಾಗಿರುವದು.

ದುಡಿದು ದಣಿಯಬೇಕು, ಆದರೆ ದಣಿದು ದುಡಿಯಬಾರದೆಂದು ಹಿರಿಯರು ಹೇಳುವದುಂಟು. ದುಡಿದು ದಣಿದಾಗ್ಗೆ ವಿರಾಮ ವಿನೋದಗಳಿರಬೇಕು. ದಣಿದು ಮಾಡುವ ಕೆಲಸದಲ್ಲಿ ಪ್ರಮಾದಗಳಾಗುವವು. ಕೊನೆಯಲ್ಲಿ ಯಶದೊರೆಯುವದೂ ಸಾಶಂಕವೆನಿಸುವದು. ಅಂತೆಯೆ ಜೀವನದಲ್ಲಿ ವಿರಾಮ ವಿನೋದಗಳು ಅತ್ಯಗತ್ಯವಾದ ವಸ್ತುಗಳೆನಿಸಿವೆ. ದಣಿದ ದೇಹ, ನೊಂದ ಮನಸ್ಸು ಇವುಗಳನ್ನು ಮತ್ತೆ ಕಾರ್ಯಕ್ಷಮವನ್ನಾಗಿ ಮಾಡಲು ವಿರಾಮ ವಿನೋದಗಳೆರಡೂ ಬೇಕು. ಗಾಣದ ಎತ್ತಿನಂತೆ ಕಣ್ಣುಕಟ್ಟಿಕೊಂಡು ಒಂದೇ ವಿಧವಾಗಿ ಸುತ್ತುವರಿಯುವ ಜೀವನ ನಿಸ್ಸತ್ವವಾಗುವದು, ನೀರಸವೆನಿಸುವದು. ಆಸ್ಥೆ ಆನಂದಗಳನ್ನೆಲ್ಲ ಕಳೆದುಕೊಳ್ಳುವದು. ಹಬ್ಬಗಳು ನಿತ್ಯ ಜೀವನದಲ್ಲಿ ಅಗತ್ಯವಿರುವ ವಿರಾಮ-ವಿನೋದಗಳನ್ನು ಒದಗಿಸುವವು. ಜೀವನದ ಏಕರೂಪತೆಯನ್ನು ತಪ್ಪಿಸಿ, ವಿವಿಧತೆಯನ್ನು ಹೆಚ್ಚಿಸಿ, ಜೀವನಕ್ಕೆ ನಿತ್ಯ ನೂತನವಾದ ಸವಿ ಸೊಬಗುಗಳನ್ನು ಹಬ್ಬಗಳು ತಂದು ಕೊಡುವವು. 'ಹಬ್ಬದ ಊಟ'ಬೇರೆ. 'ಹಬ್ಬದ ಉಡಿಪು ತೊಡವು'ಗಳು ಬೇರೆ. ತಳಿರು ತೋರಣಗಳಿಂದ ಮನೆಗಳನ್ನು ಅಲಂಕರಿಸುವ ವಿಧಾನವೇ ಬೇರೆ. ಆಟ ಪಾಟಗಳು, ಪೂಜೆ ಪುರಸ್ಕಾರಗಳು ಬೇರೆ. ಈ ವಿವಿಧತೆಯೆ ಹಬ್ಬಗಳ ಆಕರ್ಷತೆಗೆ, ಹಬ್ಬಗಳಿಗಾಗಿ ಎಲ್ಲರ ಹೃದಯದಲ್ಲಿರುವ ಆತುರತೆಗೆ, ಮುಖ್ಯ ಕಾರಣವಾಗಿದೆ.

ಹಬ್ಬಗಳು ಋತುಮಾನಗಳಿಗೆ ಹೊಂದಿಕೊಂಡಿರುವದು ಇನ್ನೊಂದು ವೈಶಿಷ್ಟ್ಯವಾಗಿದೆ. ಸುಗ್ಗಿ ಮುಗಿದಿದೆ. ಭೂಮಿ-ತಾಯಿ ವರುಷದ ದವಸಧಾನ್ಯಗಳನ್ನು ಕೊಟ್ಟಿದ್ದಾಳೆ, ಇದುವರೆಗೆ ಕೈತುಂಬ ಕೆಲಸ; 'ಮೈಮುರಿ'-ದುಡಿತ. ದಣಿದ ದೇಹಕ್ಕೆ ಇನ್ನು ವಿರಾಮ-ವಿನೋದಗಳು ಬೇಕು. ಅಂತೆಯೆ ಹೊಲದ ರಾಶಿ ಮುಗಿದ ಮೇಲೆ ವಸಂತ ಋತು

ವಿನಲ್ಲಿ ಹಬ್ಬಗಳೂ ಹೆಚ್ಚಿಗೆ. ತೇರು-ಜಾತ್ರೆಗಳೂ ಇದೇ ಸಮಯದಲ್ಲಿ ಹೆಚ್ಚಾಗಿ ಜರಗುವವು. ಚೈತ್ರಮಾಸದಲ್ಲಿ ವಸಂತೋತ್ಸವವನ್ನು ಮನೆಮನೆಯಲ್ಲಿ ಇಂದಿಗೂ ಆಚರಿಸುವದುಂಟು. ಆದರೆ ತುಸು ಪ್ರಾಚೀನಕಾಲದಲ್ಲಿ ವಸಂತೋತ್ಸವವನ್ನು ಸಾಮುದಾಯಿಕವಾಗಿ ಹೆಚ್ಚು ವಿಜೃಂಭಣೆಯಿಂದ ಜರುಗಿಸುತ್ತಿದ್ದರೆಂಬುದು ತಿಳಿದು ಬರುವದು. ಜನ-ಜೀವನಕ್ಕೆ ಉಚಿತ ವಾದ ಸಂಸ್ಕಾರವನ್ನು ಕೊಡುವ ಹಬ್ಬಗಳು ಶಿಕ್ಷಣದಲ್ಲಿ ಸಹಕರಿಸುವ ಹಿರಿದಾದ ಸಂಸ್ಥೆ ಗಳಾಗಿರುವವು.

(ಅ) **ವಾಚನಾಲಯಗಳು :—** ಶಿಕ್ಷಣ ಕಾರ್ಯದಲ್ಲಿ ವಾಚನಾಲಯಗಳು ವಹಿಸುವ ಪಾತ್ರವು ಅತ್ಯಂತ ಪ್ರಧಾನವಾಗಿದೆ. ಪ್ರಾಚೀನ ಭಾರತದ ವಿದ್ಯಾ ಪೀಠಗಳಲ್ಲಿ ಬಹು ದೊಡ್ಡ ಗ್ರಂಥ ಭಾಂಡಾರಗಳಿದ್ದವೆಂಬದು ಕಂಡು ಬರುವದು. ವಾಚನಾಲಯ–(ಗ್ರಂಥಾಲಯ)ವಿಲ್ಲದ ವಿದ್ಯಾಪೀಠವು ಶಸ್ತ್ರಾಗಾರವಿಲ್ಲದ ಕೋಟೆಯಂತೆ',–ಎಂದು ನಾಲಂದಾ ವಿದ್ಯಾಪೀಠದ ಅಧಿಕಾರಿಗಳು ಹೇಳಿರುವರು. ಈ ಮಾತು ಇಂದಿನ ಜೀವನಕ್ಕೆ ಇನ್ನೂ ಹೆಚ್ಚಾಗಿ ಅನ್ವಯಿಸುವದೆಂದು ಹೇಳುವರು. ಕೇವಲ 'ಗುರು ಮುಖೇನ'ಕೇಳಿ ಕಲಿಯುವ ದಿವಸಗಳು ಗತಿಸಿ ಹೋಗಿವೆ. ಅನುಭವದ ಸಾರರೂಪವಾದ ಜ್ಞಾನವೆಲ್ಲ ಅಚ್ಚಾದ ಪುಸ್ತಕ ಗಳಲ್ಲಿ ನೆಲಿಸಿದೆ. ಜ್ಞಾನವೂ ಅಪಾರವಾಗಿ ಬೆಳೆದಿದೆ. ಗಳಿಗೆ ಗಳಿಗೆಗೂ ಗ್ರಂಥಭಾಂಡಾರ ಅಧಿಕಾಧಿಕವಾಗುತ್ತಿದೆ. ಎಂಥ ಸಿರಿವಂತನಿಗಾದರೂ ಎಲ್ಲ ಪುಸ್ತಕಗಳನ್ನು ಸಂಗ್ರಹಿಸುವ ಶಕ್ತಿ ಸಾಲದಂತಾಗಿದೆ. ಸಾರ್ವಜನಿಕವಾದ ಗ್ರಂಥಾಲಯಗಳು ಮಾತ್ರ ತಕ್ಕಮಟ್ಟಿಗೆ ಒಳ್ಳೇ ಆಯ್ಕೆಯಿಂದ ಗ್ರಂಥ ಸಂಗ್ರಹವನ್ನು ಮಾಡಬಲ್ಲವು. ಪ್ರಾಚೀನ ಕಾಲದಲ್ಲಿ ದೇವಾಲಯ, ಧರ್ಮಪೀಠ, ವಿದ್ಯಾಪೀಠಗಳಲ್ಲಿ ಗ್ರಂಥಗಳನ್ನು ಸಂಗ್ರಹಿಸುತ್ತಿದ್ದರು. ಸಾರ್ವಜನಿಕ ವಾಚ ನಾಲಯಗಳು ಇಂದು ಆಕಾರ್ಯವನ್ನು ಮಾಡುತ್ತಿವೆ. ಲಂಡನ, ಮಾಸ್ಕೊ, ವಾಶಿಂಗ್ಟನ್ ಮುಂತಾದ ನಗರಗಳಲ್ಲಿ ಅತಿದೊಡ್ಡ ಗ್ರಂಥಾಲಯಗಳಿರುವವು. ಅವುಗಳಲ್ಲಿ ಗ್ರಂಥಗಳ ಸಂಖ್ಯೆ ಲಕ್ಷಗಳಿಂದ ಎಣಿಸಬೇಕು. ಭಾರತದಲ್ಲಿಯೂ ಕಲ್ಕತ್ತೆ, ಮದ್ರಾಸಗಳಲ್ಲಿ ದೊಡ್ಡ ಗ್ರಂಥಾಲಯಗಳಿರುವವು. ಸರಕಾರವು ಇಂದು ಪ್ರಾದೇಶಿಕ ಗ್ರಂಥಾಲಯಗಳನ್ನೂ ಸ್ಥಾಪಿಸಿದೆ.

ಗ್ರಂಥಾಲಯದ ಕಾರ್ಯವು ಇಂದು ಶಾಸ್ತ್ರೀಯವಾಗಿ ನಡೆಯುತ್ತಿದೆ. ಈ ಶಾಸ್ತ್ರ ದಲ್ಲ ವಿಶಿಷ್ಟ ತರಬೇತಿಯನ್ನು ಪಡೆದಿರುವ ಅಧಿಕಾರಿಗಳು ಗ್ರಂಥಭಾಂಡಾರಿಗಳಾಗಿರುವರು ಗ್ರಂಥಗಳ ವರ್ಗೀಕರಣ, ವಿಷಯ ಸೂಚಿ, ವಿಭಾಗ ರಚನೆ– ಇವುಗಳೆಲ್ಲ ಕ್ರಮಬದ್ಧವಾದ. 'ಕಲೆ'ಯಾಗಿವೆ. ನುರಿತ ಅಧಿಕಾರಿಗಳು ಅಗತ್ಯವಿರುವ ಸಂದರ್ಭಗ್ರಂಥಗಳನ್ನು ಸೂಚಿಸು ವರು. ಅಪಾರವಾದ ಪುಸ್ತಕರಾಶಿಯಿಂದ ಅಪೇಕ್ಷಿತವಾದ ಗ್ರಂಥಗಳನ್ನು ಕೆಲವೇ ನಿಮಿಷ ಗಳಲ್ಲಿ ತಂದು ಮುಟ್ಟಿಸುವರು. ಗ್ರಂಥಾಲಯದ ಉಪಯೋಗವೂ ಓದುಗರಿಗೆ ಒಂದು ಸಂಸ್ಕೃತಿಯನ್ನು ತಂದು ಕೊಡುವದು. ಗಲಾಟೆ ಮಾಡಕೂಡದು. 'ಸೂಜಿ ಬಿದ್ದರೂ ಕೇಳಿಸುವ' ಅಲ್ಲಿಯ ಪ್ರಶಾಂತ, ನಿಶ್ಶಬ್ದ ವಾತಾವರಣಕ್ಕೆ ಹೊಂದಿಕೊಳ್ಳಬೇಕು; ಸರದಿಗಾಗಿ ಕಾಯಬೇಕು. ಸಕಾಲಕ್ಕೆ ಪುಸ್ತಕಗಳನ್ನು ತಿರುಗಿ ತಂದು ಒಪ್ಪಿಸಬೇಕು. ಇವೆಲ್ಲಿ ಕೃತಿ ಗಳು ಒಳ್ಳೇ ಸಂಸ್ಕೃತಿಯ ಅಂಶಗಳಾಗಿ ಕೂಡಿಕೊಳ್ಳುವವು. ವಿಶ್ವವಿದ್ಯಾಲಯಗಳಲ್ಲಿ

ಗ್ರಂಥಾಲಯಗಳೆ ಅಪ್ರತ್ಯಕ್ಷವಾಗಿ ಶಿಕ್ಷಣವನ್ನು ಸಾಗಿಸುವವು. ಪ್ರಾಧ್ಯಾಪಕರು ಉಪಯುಕ್ತ ಸಂದರ್ಭಗ್ರಂಥಗಳನ್ನು ಸೂಚಿಸಿ ಮಾರ್ಗದರುಶನ ಮಾಡುವರು. ಎಷ್ಟೋ ವಿದ್ವಾಂಸರು ಗ್ರಂಥಾಲಯಗಳ ಪ್ರಯೋಜನವನ್ನು ಮಾಡಿಕೊಂಡೇ ಅಗಾಧವಾದ ಪಾಂಡಿತ್ಯವನ್ನು ಪಡೆದಿರುವರು.

ವಿಶಾಲ ಶಿಕ್ಷಣದಲ್ಲಿ ಗ್ರಂಥಾಲಯಗಳಿಗಿರುವ ಮಹತಿಯೆ ಶಾಲೆಯ ವಿಶಿಷ್ಟ ಶಿಕ್ಷಣದಲ್ಲಿಯೂ ಕಂಡು ಬರುವದು. ಪಠ್ಯ ಪುಸ್ತಕಗಳ ಮುಖಾಂತರವಾಗಿ ವಿದ್ಯಾರ್ಥಿಗಳು ದೊರಕಿಸುವ ಜ್ಞಾನವು ಅಲ್ಪವೂ, ಅಪೂರ್ಣವೂ ಆಗಿರುವದು. ಆದುದರಿಂದ ವಿದ್ಯಾರ್ಥಿಗಳ ಮನೋವಿಕಾಸಕ್ಕೆ ವಾಚನಾಲಯಗಳು ಅತ್ಯವಶ್ಯವಾದವುಗಳು. ಪರೀಕ್ಷೆಗಳೇ ಪ್ರದಾನವಾದ ಇಂದಿನ ಶಿಕ್ಷಣದಲ್ಲಿ, ಪಠ್ಯ ಪುಸ್ತಕಗಳಿಗೆ ಸಲ್ಲದ ಪ್ರಾಶಸ್ತ್ಯವು ಬಂದಿದೆ; ಶಿಕ್ಷಕರು, ವಿದ್ಯಾರ್ಥಿಗಳು ಕೂಡಿಯೆ ಪಠ್ಯ ಪುಸ್ತಕಗಳ ಚರ್ವಿತ ಚರ್ವಣೆಯಲ್ಲಿ ತಮ್ಮ ಶಕ್ತಿ, ವೇಳೆ, ಉತ್ಸಾಹಗಳನ್ನೆಲ್ಲ ವೆಚ್ಚಮಾಡುವದುಂಟು. ಕಲಿಯುವ ವಿಷಯಗಳ ಜ್ಞಾನವನ್ನು ವಿಶದಗೊಳಿಸಲು, ಪೂರ್ತಿಗೊಳಿಸಲು ಶಾಲೆಯ ವಾಚನಾಲಯವು ಯೋಗ್ಯವಾದ ಪುಸ್ತಕಗಳನ್ನು ವಿದ್ಯಾರ್ಥಿಗಳಿಗೆ ಪೂರಕವಾಗಿ ಒದಗಿಸಬೇಕು. ಸ್ವಂತ ಪರಿಶ್ರಮದಿಂದ ವಿಷಯ ಜ್ಞಾನವನ್ನು ವಿಸ್ತರಿಸಿಗೊಳ್ಳಲು ವಾಚನಾಲಯಗಳು ಸಹಾಯಕಗಳಾಗುವವು. ಶಿಕ್ಷಕನ ಸಲಹೆ-ಸಹಾಯಗಳು ಮಾತ್ರ ಈ ಕಾರ್ಯದಲ್ಲಿ ಅಗತ್ಯವಾದವುಗಳು. ವಾಚನಾಭಿರುಚಿಯು ಜೀವನವನ್ನು ಉದಾತ್ತಗೊಳಿಸುವ, ಹಾಗೂ ಸುಖಿಯಾಗಿ ಮಾಡುವ ಶ್ರೇಷ್ಠ ಸಾಧನವಾಗಿದೆ.

(೯) ಸರಕಾರ (ಪ್ರಭುತ್ವ) :— ಪ್ರಜಾ ಪ್ರಭುತ್ವದ ಯುಗದಲ್ಲಿ ವಾಸಿಸುವ ನಮಗೆ ಸರಕಾರಕ್ಕೂ ಶಿಕ್ಷಣಕ್ಕೂ ಇರುವ ನಿಕಟವಾದ ಸಂಬಂಧವು ನಿಚ್ಚಳವಾಗಿ ತೋರುತ್ತಿದೆ. ಜನತೆಯ ಶಿಕ್ಷಣದಲ್ಲಿ ಸರಕಾರವು ಎಳ್ಳಷ್ಟೂ ಆಸ್ಥೆ ವಹಿಸಿದ ಕಾಲವು ಪಾಶ್ಚಾತ್ಯ ದೇಶಗಳಲ್ಲಿ ಮೊನ್ನೆಯವರೆಗೆ ನೆಲೆಸಿತ್ತು. ಆದರೆ ಈ ವಿಷಯಕ್ಕೆ ಅಲ್ಲಿಯ ತತ್ವಜ್ಞಾನಿಗಳಲ್ಲಿ ಭಿನ್ನಾಭಿಪ್ರಾಯವಿದ್ದಿತು. 'ಜನತೆಯ ಶಿಕ್ಷಣಕಾರ್ಯವನ್ನು ಅದರ ಪಾಡಿಗೆ ಬಿಟ್ಟು ಕೊಡಬೇಕು. ಖಾಸಗಿಯಾಗಿ, ಸ್ವತಂತ್ರವಾಗಿ ತನ್ನ ಉಪಯುಕ್ತತೆಯಿಂದಲೆ ಅದು ಬಾಳಬೇಕು. ಜನತೆಯ ಆಶೆ ಆಕಾಂಕ್ಷೆಗಳಿಗೆ ಅನುಗುಣವಾಗಿ ಬೆಳೆಯಬೇಕು; ಇಲ್ಲವಾದರೆ ಅಳಿಯಬೇಕು' ಇದೊಂದು ಬಗೆಯ ಅಭಿಪ್ರಾಯ. ಇದಕ್ಕೆ ಪ್ರತಿಯಾಗಿ ಇನ್ನೊಂದು ವಿಚಾರ ಸರಣಿಯೂ ಇದ್ದಿತು. 'ಸರಕಾರ ಜನತೆಯ ಆಶೆ–ಆಕಾಂಕ್ಷೆಗಳ ಪ್ರತಿನಿಧಿ–ಮೂರ್ತ ಸ್ವರೂಪ. ದೇಶದಲ್ಲಿಯ ಪ್ರತಿಯೊಂದು ಮಗುವಿಗೂ ಸರ್ವವಿಧವಾದ ತನ್ನ ಶಕ್ತಿಗಳ ಪೂರ್ಣವಿಕಾಸವನ್ನು ಮಾಡಿಕೊಳ್ಳಲು ಅನುವು ದೊರೆಯಬೇಕು. ಈ ಬಗೆಯ ಶಿಕ್ಷಣದ ಏರ್ಪಾಡನ್ನು ಮಾಡುವದು ಸರಕಾರದ ಹೊಣೆಯಾಗಿದೆ. ಈ ಶಿಕ್ಷಣವು ಸಮರ್ಪಕ ವಾಗಿರಬೇಕು. ಉಳಿದ ವೃತ್ತಿಗಳಲ್ಲಿ ತಗಲು ಮೋಸಗಳಾಗದಂತೆ ಸರಕಾರವು ನೋಡಿಕೊಳ್ಳುವದು. ಅದೇ ರೀತಿಯಲ್ಲಿ ಶಿಕ್ಷಕ ವೃತ್ತಿಯೂ ಸಮರ್ಥರಾದ ತಜ್ಞರ ಕೈಯಲ್ಲಿ ಉಳಿಯುವಂತೆ ಸರಕಾರವು ದಕ್ಷತೆ ವಹಿಸಬೇಕು'— ಈ ಮತಭೇದಗಳು ರಾಜನೀತಿಯವಾದಭೂಮಿಯಲ್ಲಿ ಮೂಡಿಬಂದವು. ಆದರೆ ಹದಿನೆಂಟನೆಯ ಶತಮಾನದ ಪೂರ್ವಾರ್ಧದ ವರೆಗೆ ಪಾಶ್ಚಾತ್ಯ ದೇಶಗಳಲ್ಲಿ

# ಒಪ್ಪೋಲೆ

| ತಪ್ಪು | ಶುದ್ಧ | ಪುಟ | ಪಂಕ್ತಿ |
|---|---|---|---|
| ಸಚೀನ ಮಾಡುಹು | ಸಚೇತನ ಮಾಡುದು | ೧ | ೨೦ |
| ಹರಿದಾದ | ಹಿರಿದಾದ | ೩ | ೯ |
| ರೋಗಬಂದ | ರೋಗದಿಂದ | ೧೧ | ೧೬ |
| ಜನಾಂಗ | ಜನಾಂಗದ | ೧೧ | ೩೧ |
| ಬಾಲಾ ಗೃಹ | ಶಾಲಾ ಗೃಹ | ೧೩ | ೨೮ |
| ಪ್ರತಿಯೋಗಿ ಯಾಗಿ | ಪ್ರತಿ ಯಾಗಿ | ೧೯ | ೨೯ |
| ಅಧಿನಿಕ | ಅಧುನಿಕ | ೨೦ | ೧೧ |
| ತೋಡುವದು | ತೊಡುವದು | ೨೩ | ೩೨ |
| ಸಲುಭವಾಗಿ | ಸುಲಭವಾಗಿ | ೨೬ | ೧೧ |
| ವಹಿಸಿದ | ವಹಿಸದ | ೨೮ | ೨೦ |
| ಪರೋಪಕ್ಷವಾಗಿ | ಪರೋಕ್ಷವಾಗಿ | ೨೯ | ೧೩ |
| ಸಾಲೋವಗಿ | ಸಾಲೋಟಗಿ | ೨೯ | ೨೫ |
| ಸಾಧನದಲ್ಲಿ | ಸಾಧನವಲ್ಲ | ೩೨ | ೨೫ |
| ಸ್ವರಪವನ್ನು | ಸ್ವರೂಪವನ್ನು | ೩೩ | ೨೯ |
| ಕೊಡುವ ಸಂಸ್ಥೆಗಳು | ಮಾಡಿಕೊಡುವ ಸಂಸ್ಥೆಗಳು | ೩೩ | ೩೨ |
| ವಿಚಾರಗಳಲ್ಲಿ | ವಿಚಾರಗಳೆಲ್ಲ | ೩೭ | ೭ |
| ಮಗು ಸಾಮಾಜಿಕ | ಮಗುವಿನ ಸಾಮಾಜಿಕ | ೪೬ | ೨೧ |
| ಸ್ವಾಲಂಬನ | ಸ್ವಾವಲಂಬನ | ೪೮ | ೨೮ |
| ಮಾರ್ಗದಲ್ಲಿ | ವರ್ಗದಲ್ಲಿ | ೪೯ | ೩೩ |
| ಆತ್ಮ ದರ್ಶದ | ಆತ್ಮ ದರ್ಶನ | ೫೩ | ೩೩ |
| ಅದರಿಂದ | ಅರರಿಂದ | ೫೪ | ೩೧ |
| ತಪ್ಪು ದೇಶದ | ತಮ್ಮದೇ ಆದ | ೫೬ | ೬ |
| ಪ್ರತಿಕೆಯನ್ನು | ಪತ್ರಿಕೆಯನ್ನು | ೫೬ | ೯ |
| ಪತ್ರಿಗಳ | ಪತ್ರಿಕೆಗಳ | ೫೬ | ೧೦ |
| ಶಿಕ್ಷನಿಗೆ | ಶಿಕ್ಷಕನಿಗೆ | ೫೬ | ೧೧ |
| 'ಬೀಗದ ಕೈಯಿಂದ... | 'ಉದ್ಯೋಗದ ಬೀಗದ ಕೈಯಿಂದ. . | ೬೦ | ೧೪ |
| ಆವೇಶ-ಆಕಾಂಕ್ಷೆ | ಆವೇಶ ಆಕಾಂಕ್ಷೆ | ೬೬ | ೯ |
| ಮನಸ್ಸಿನ ಕರಗಳು | ಮನಸ್ಸಿನ ಕರಣಗಳು | ೬೭ | ೬ |
| —ಕಾರ್ಯಗಳ ಸಂಬಂಧ | ಕಾರಣ–ಕಾರ್ಯಗಳ ಸಂಬಂಧ | ೬೯ | ೨೯ |
| ಮಾತಾಡುತ್ತ | ಮಾಡುತ್ತ | ೭೦ | ೨೪ |
| ಅವರಲ್ಲೆಲ್ಲ | ಅವಧಾನವಿರುವಲ್ಲೆಲ್ಲ | ೭೪ | ೧೩ |
| ಮೂರ್ಪರಿಯ | ಮುಪ್ಪುರಿಯ | ೭೫ | ೧೭ |
| ಕಲ್ಪಿಕತೆಯೆಂದು | ಕಲ್ಪಲತೆಯೆಂದು | ೭೭ | ೩೧ |
| ಪ್ರಗತಿಗೆ | ಪ್ರಗತಿಯು | ೮೯ | ೧ |
| ದೃಷ್ಟಾಂತಗಳಿಗಾಗಿ | ದೃಷ್ಟಾಂತಗಳಾಗಿ | ೯೧ | ೩೧ |

ಸರಕಾರವು ಸಾರ್ವಜನಿಕ ಶಿಕ್ಷಣದ ಬಗ್ಗೆ ಯಾವ ಆಸ್ಥೆಯನ್ನೂ ವಹಿಸಿರಲಿಲ್ಲ, ಯಾವ ಬಗೆಯ ಸಹಾಯವನ್ನೂ ನೀಡುತ್ತಿರಲಿಲ್ಲ, ಇಗರ್ಜಿಗಳು, ಧರ್ಮಪೀಠಗಳು ಶಿಕ್ಷಣಕಾರ್ಯವನ್ನು ಕೈಕೊಂಡಿದ್ದವು. ಅವರೇ ಶಿಕ್ಷಣ ವರ್ಗಗಳನ್ನು ನಡೆಸುತ್ತಿದ್ದರು. ಈ ವರ್ಗಗಳಲ್ಲಿ ಕೊಡುತ್ತಿರುವ ಶಿಕ್ಷಣವು ಆಯಾ ಧರ್ಮಪೀಠಗಳ ಪ್ರಭಾವಕ್ಕೆ ಪೂರ್ಣವಾಗಿ ಒಳಗಾಗಿತ್ತೆಂಬುದನ್ನು ಬೇರೆ ಹೇಳಬೇಕಿಲ್ಲ: ಮುಂದೆ ಜರ್ಮನಿಯಲ್ಲಿ ಧರ್ಮವು ಸ್ವಾತಂತ್ರ್ಯವನ್ನು ಸಾರಿತು. ಇಂಗ್ಲಂಡದ ರಾಜಕೀಯದಲ್ಲಿ ಪ್ರಜಾಪ್ರಭುತ್ವವು ತನ್ನ ಪ್ರಭಾವವನ್ನು ಬೀರಿತು. ಫ್ರಾನ್ಸದಲ್ಲಿ ರಾಜ್ಯಕ್ರಾಂತಿಯಾಯಿತು. ಇವೆಲ್ಲ ಸಂಗತಿಗಳು ಸರಕಾರದ ಲಕ್ಷವನ್ನು ಶಿಕ್ಷಣ ಕ್ಷೇತ್ರದ ಕಡೆಗೆ ಸೆಳೆದವು. ಅಂಶತಃ ಆದರೂ, ಅಲ್ಲಿಯ ಸರಕಾರಗಳು ಸಾರ್ವಜನಿಕ ಶಿಕ್ಷಣದ ಹೊಣೆಯನ್ನು ವಹಿಸಿಕೊಂಡವು.

ಪ್ರಾಚೀನ ಭಾರತದಲ್ಲಿ ಮಾತ್ರ ಶಿಕ್ಷಣದ ಪರಿಸ್ಥಿತಿಯು ಇದಕ್ಕಿಂತಲೂ ತುಸು ಭಿನ್ನವಾಗಿದ್ದಿತು. ಇಲ್ಲಿಯೂ ಶಿಕ್ಷಣವು ಆಡಳಿತದ ಅಂಗವಾಗಿರಲಿಲ್ಲ. ಆದರೆ ಶಿಕ್ಷಣಕಾರ್ಯಕ್ಕೆ ರಾಜಾಶ್ರಯವು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ದೊರೆಯುತ್ತಿತು. ಶಿಕ್ಷಕ ವೃತ್ತಿಯನ್ನು ವಹಿಸಿಕೊಂಡವರಿಗೆ ಸಾರ್ವಜನಿಕರಿಂದಲೂ ವಿಪುಲವಾದ ಸಹಾಯ ದೊರೆಯುತ್ತಿತ್ತು. ಈಗಿನಂತೆ ಆಡಳಿತದಲ್ಲಿ ಶಿಕ್ಷಣಕ್ಕೊಂದು ಪ್ರತ್ಯೇಕ ವಿಭಾಗ ಅಧಿಕಾರಿಗಳು ಇರುತ್ತಿರಲಿಲ್ಲ. ಶಿಕ್ಷಣಕ್ಕಾಗಿ ನೀಡುವ ಈ ನೆರವು ಧರ್ಮದ ಹಾಗೂ ಧರ್ಮಕ್ಕಾಗಿ ಮಾಡುವ ತ್ಯಾಗದ ಒಂದು ಅಂಗವೆಂಬ ಭಾವನೆ ಬೇರೂರಿತ್ತು. ತೀರ ಬಡಕುಟುಂಬವೂ ಅಸಹಾಯವಾದ ವಿದ್ಯಾರ್ಥಿಗೆ ಒಂದು ರೊಟ್ಟಿಯನ್ನು ನೀಡುವರಲ್ಲಿ ಧನ್ಯತೆ ಪಡೆಯುತ್ತಿತು. ಈ ಉಪಕ್ರಮವೇ ಇಂದಿಗೂ 'ಮಧೂಕರಿ'ಸಾಂಪ್ರದಾಯವಾಗಿ ಭಾರತದಲ್ಲಿ ಉಳಿದುಕೊಂಡಿದೆ. ಹವ್ಯಕವ್ಯಗಳಲ್ಲಿ, ಇನ್ನುಳಿದ ಸಮಾರಂಭದ ಸಂದರ್ಭಗಳಲ್ಲಿ ಶಿಕ್ಷಕರಿಗೆ ಉಪಾದಾನ-ಸಂಭಾವನೆಗಳು ದೊರೆಯುತ್ತಿದ್ದವು. ಗ್ರಾಮ 'ಪಂಚಾಯತಿ'ಯಲ್ಲಿ ಶಿಕ್ಷಕನಿಗೂ ಸ್ಥಾನ. ಹಳ್ಳಿಯವರು ಆತನಿಗಾಗಿ ಬಿಟ್ಟುಕೊಟ್ಟ ಭೂಮಿ—ಗ್ರಾಮನಿವಾಸಿಗಳೆ ಅದನ್ನು ಬಿತ್ತಿ ಬೆಳೆ ತೆಗೆದು ಕೊಡಬೇಕು. ಸಿರಿವಂತರು ತಮ್ಮ ಮಕ್ಕಳಿಗಾಗಿ ಶಿಕ್ಷಕನನ್ನು ನೇಮಿಸುತ್ತಿದ್ದರು. ಅವರ ಮಕ್ಕಳ ಜೊತೆಯಲ್ಲಿ ಆ ಊರಿನ ಉಳಿದ ಬಡಮಕ್ಕಳಿಗೂ ಶಿಕ್ಷಣವು ಪುಕ್ಕಟೆ ದೊರೆಯುತ್ತಿತ್ತು. ತಮ್ಮ ಪಿತೃಗಳ ಸ್ಮೃತಿಗಾಗಿ ಉನ್ನತ ಸ್ಥಾನದಲ್ಲಿರುವವರು ವಿದ್ಯಾಪೀಠವನ್ನು ಸ್ಥಾಪಿಸುತ್ತಿದ್ದರು. ವಿಜಾಪೂರ ಜಿಲ್ಹೆಯ 'ಸಾಲಪಟ್ಟಿಕಾ'(ಇಂದಿನ-ಸಾಲೋಟಗಿ-ಗ್ರಾಮ)ಎಂಬಲ್ಲಿ ರಾಷ್ಟ್ರಕೂಟರ ಮಂತ್ರಿಯಾದ ನಾರಾಯಣನೆಂಬವನು ಒಂದು ದೊಡ್ಡ ವಿದ್ಯಾಪೀಠವನ್ನೇ ಸ್ಥಾಪಿಸಿದ್ದನು. ಈ ವಿದ್ಯಾಪೀಠವು ಸ್ವಾವಲಂಬನವಾಗಿ ನಡೆಯುವಂತೆ ಏರ್ಪಾಟು ಮಾಡಿದ್ದು ಕಂಡುಬರುವುದು. ಆ ಗ್ರಾಮಕ್ಕೆ ಬರುವ 'ಲವಣಿಗ'ಇಂತಿಷ್ಟು ಉಪ್ಪನ್ನು, 'ತೈಲಿಗ' ಒಕ್ಕುಡಿತೆ ಎಣ್ಣೆಯನ್ನು, ಉಳಿದವರೂ ಇದೇ ರೀತಿಯಾಗಿ ತಮ್ಮ ತಮ್ಮ ಕಾಣಿಕೆಯನ್ನೂ ವಿದ್ಯಾಪೀಠಕ್ಕೆ ಸಲ್ಲಿಸುತ್ತಿದ್ದರಂತೆ. ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನಬಟ್ಟೆಕೊಟ್ಟು ಇಂಥ ವಿದ್ಯಾಪೀಠಗಳಲ್ಲಿ ವಿದ್ಯಾದಾನ ಮಾಡಲಾಗುತ್ತಿತ್ತು. '........ಭೂಮಿ-ದಾನಾತ್ ಪರಂ ನಾಸ್ತಿ, ವಿದ್ಯಾದಾನಂ ತತೋಧಿಕಮ್'—, ಎಂದು ದಾನಗಳ ತಾರತಮ್ಯವನ್ನು ಹೇಳುವಾಗ್ಗೆ, ವಿದ್ಯಾದಾನಕ್ಕೆ ತೀರ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗುತ್ತಿತ್ತು. ಹಸಿದು ಬಂದ

ವಿದ್ಯಾರ್ಥಿಗೆ ಆಹಾರ ನೀಡದೆ ಹಿಂದಕ್ಕೆ ಕಳಿಸುವದು ಮಹಾ ಪಾಪವೆಂಬ ಭಾವನೆ ಯಿದ್ದಿತು.

ಸಾರ್ವಜನಿಕರಿಂದ ದೊರೆಯುವ ಈ ಬಗೆಯ ಸಹಾಯದ ಜೊತೆಗೆ ಅಂದಿನ ರಾಜರೂ ಶಿಕ್ಷಣಕ್ಕೆ ಬಹುಮುಖವಾದ ಸಹಾಯವನ್ನು ನೀಡುತ್ತಿದ್ದರು. ಶಿಕ್ಷಣಕ್ಕೆ ಸರ್ವ ವಿಧವಾದ ಪ್ರೋತ್ಸಾಹವನ್ನು ನೀಡುವದು ರಾಜನ ಪ್ರಥಮ ಕರ್ತವ್ಯವೆಂದು ರಾಜನೀತಿಯ ಆದೇಶಗಳಲ್ಲಿ ಹೇಳಲಾಗಿದೆ. ಒಂದು ಬಗೆಯ ಈರ್ಷೆಯಿಂದಲೆ ಅಂದಿನ ರಾಜರು ಈ ಕರ್ತವ್ಯವನ್ನು ಪಾಲಿಸುತ್ತಿದ್ದರು. ಕವಿಗಳಿಗೆ ರಾಜಾಶ್ರಯವಿತ್ತು. ಮೇಧಾವಿಗಳಿಗೆ ಮನ್ನಣೆಯಿತ್ತು. ಪೇಶವೆಯರ ಆಳಿಕೆಯ ಕೊನೆಯವರೆಗೆ ಭಾರತದಲ್ಲಿ ಈ ಪ್ರಾಚೀನ ಪರಂಪರೆಯು ನಡೆದು ಬಂದಿತು. ಎರಡನೇ ಬಾಜೀರಾಯನು ವಿದ್ವಜ್ಜನರಿಗೆ ಕೊಡುವ ಸಂಭಾವನೆ ಪ್ರತಿವರುಷ ಐದುಲಕ್ಷ ರೂಪಾಯಿಗಳಿಗೂ ಅಧಿಕವಾಗಿತ್ತು. ಈ ಬಗೆಯ ಪ್ರತ್ಯಕ್ಷ ಸಹಾಯವಲ್ಲದೆ, ಶಿಕ್ಷಣಕಾರ್ಯಕ್ಕೆ ಅನೇಕ ಬಗೆಯ ಅಪ್ರತ್ಯಕ್ಷವಾದ ನೆರವನ್ನು ಅಂದಿನ ರಾಜರು ನೀಡುತ್ತಿದ್ದರು. ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿಗಳು; ವಿದ್ವದ್ಗೋಷ್ಠಿ ಗಳನ್ನೇರ್ಪಡಿಸಿ ವಿಜಯಿಗಳಾದ ಪಂಡಿತರಿಗೆ ಪಾರಿತೋಷಿಕಗಳನ್ನು ಕೊಡುವದು; ಆಡ- ಳಿತದಲ್ಲಿ ವಿದ್ವಜ್ಜನರಿಗೆ ಉನ್ನತ ಸ್ಥಾನನಗಳನ್ನು ಕೊಡುವದು;— ಇವೇ ಮುಂತಾದ ಹಲವಾರು ಬಗೆಯಿಂದ ವಿದ್ವಜ್ಜನರಿಗೆ ಸಹಾಯ ದೊರೆಯುತ್ತಿತ್ತು. ಇದುಮಾತ್ರವಲ್ಲದೆ, ವಿದ್ಯಾದಾನದಲ್ಲಿ ತೊಡಗಿದವರಿಂದ ತೆರಿಗೆಯನ್ನೂ ತೆಗೆದುಕೊಳ್ಳುತ್ತಿರಲಿಲ್ಲ.

ಶಿಕ್ಷಣಕಾರ್ಯದಲ್ಲಿ ರಾಜರಿಂದ ಎಷ್ಟೇ ಸಹಾಯ ದೊರೆಯುತ್ತಿದ್ದರೂ, ಒಂದು ಸಂಗತಿಯು ವಿಚಾರಣೀಯವಾಗಿದೆ — ಶಿಕ್ಷಣವು ಅರಸೊತ್ತಿಗೆಗೆ ಅಧೀನವಾಗಿರಲಿಲ್ಲ. ಶಿಕ್ಷಣದಲ್ಲಿ ರಾಜರು ಕೈಹಾಕುತ್ತಿರಲಿಲ್ಲ; ಸರಕಾರದ ನಿರ್ಬಂಧ ನಿಯಂತ್ರಣಗಳಿರ ಲಿಲ್ಲ. ಆಶ್ರಮಗಳಿಗೆ, ಅಗ್ರಹಾರಗಳಿಗೆ, ಗುರುಕುಲಗಳಿಗೆ ರಾಜರಿಂದ ವಿಪುಲವಾದ ಧನ ಸಹಾಯ ದೊರೆಯುತ್ತಿತ್ತು. ಆದರೆ ಶಿಕ್ಷಣದ ಧೋರಣೆಯನ್ನು ರೂಪಿಸುವಲ್ಲಿ, ಅಭ್ಯಾಸ ಕ್ರಮವನ್ನು ಗೊತ್ತುಪಡಿಸುವಲ್ಲಿ, ಒಟ್ಟಾರೆ ಶಿಕ್ಷಣದ ನಿರ್ವಹಣೆಯಲ್ಲಿ ರಾಜರು ಯಾವದೇ ಬಗೆಯ ನಿರ್ಬಂಧಗಳನ್ನು ಹೇರುತ್ತಿರಲಿಲ್ಲ. ಕೇವಲ 'ಕರ್ತವ್ಯ' ಬುದ್ಧಿಯಿಂದ ರಾಜರು ಧನಸಹಾಯ ಮಾಡುತ್ತಿದ್ದರು; 'ಕರ್ತವ್ಯ' ಭಾವನೆಯಿಂದಲೆ ಶಿಕ್ಷಕರು ಶಿಕ್ಷಣಕಾರ್ಯ ವನ್ನು ಸಾಗಿಸುತ್ತಿದ್ದರು. ರಾಜಕುಮಾರರು, ಸಾಮಾನ್ಯ ವಿದ್ಯಾರ್ಥಿಗಳು ವಿದ್ಯಾಪೀಠಗಳ ಶಿಸ್ತಿಗೆ ಒಂದೇಸಮನಾಗಿ ಬಾಗಿ ನಡೆಯುತ್ತಿದ್ದರು.

ಕಾಲವು ಬದಲಿಸಿತು. ಶಿಕ್ಷಣ ಸಂಸ್ಥೆಗಳು ಈ ಬಗೆಯ ಸ್ವಾತಂತ್ರ್ಯಕ್ಕೆ ಎರವಾಗ ತೊಡಗಿದವು. ಶಿಕ್ಷಣವು ಸರಕಾರದ ಕರ್ತವ್ಯಮಾಲಿಕೆಯಲ್ಲಿ ಸೇರಿತು. ಪ್ರತ್ಯೇಕ ವಿಭಾಗ ವನ್ನು ಏರ್ಪಡಿಸಿ, ಸರಕಾರವು ಜನತೆಯ ಶಿಕ್ಷಣದ ನಿರ್ವಹಣೆಯನ್ನು ತಾನೇ ಕೈಕೊಂಡಿತು. ಇಲ್ಲವೆ ಸಹಾಯಧನವನ್ನು ಕೊಟ್ಟು ಶಿಕ್ಷಣವನ್ನು ಸುವ್ಯವಸ್ಥಿತಗೊಳಿಸಲು ಅನೇಕ ನಿಯಂ ತ್ರಣಗಳನ್ನು ಹೇರಿತು. ಸಾರ್ವತ್ರಿಕ ಶಿಕ್ಷಣದ ಗುರಿಯನ್ನು ಗೊತ್ತುಪಡಿಸುವದು; ಶಿಕ್ಷ ಣದ ಸಾಮಾನ್ಯ ಧೋರಣೆಯನ್ನು ನಿರ್ದೇಶಿಸುವದು– ಇವೆರಡನ್ನೂ ಸರಕಾರವೆ ಮಾಡುವದು. ಒಕ್ಕೂಟದ ಸ್ವಾಯತ್ತ ರಾಜ್ಯಗಳಲ್ಲಿಯೂ ಕೂಡ, ಈ ವಿಷಯಗಳಲ್ಲಿ ಕೇಂದ್ರಸರಕಾರದ

ನಿರ್ಣಯಗಳನ್ನೇ ರಾಜ್ಯಸರಕಾರಗಳು ಮನ್ನಿಸಬೇಕು. ಶಿಕ್ಷಣಕ್ಕೆ ಸಂಬಂಧಿಸಿದ ಉಳಿತದ ಉಳಿದ ವಿಷಯಗಳಲ್ಲಿ ರಾಜ್ಯಸರಕಾರಗಳು ಸ್ವತಂತ್ರವಾಗಿವೆ. ಶಿಕ್ಷಕನ ಕಾರ್ಯಕ್ಷಮತೆ, ಕಟ್ಟಡ-ಕ್ರೀಡಾಂಗಣ ಹಾಗೂ ಶೈಕ್ಷಣಿಕ ಸಾಧನಗಳ ಸಮರ್ಪಕತೆ; ಇವುಗಳ ಮೇಲ್ವಿಚಾರಣೆಗಾಗಿ ಸರಕಾರವು ಮೇಲಧಿಕಾರಿಗಳನ್ನು ನೇಮಿಸುವದು. ಇದರ ಜೊತೆಗೆ ಶಿಕ್ಷಕನ ಹಿತ-ಸಂರಕ್ಷಣೆಯನ್ನೂ ಸರಕಾರವು ನೋಡಿಕೊಳ್ಳುವದು.

ಸರಕಾರದ ಸ್ವರೂಪವು ಯಾವುದೇ ಮಾದರಿಯದಾಗಿರಬಹುದು. ಸಾಮ್ಯವಾದಿ, ಸಮತಾವಾದಿ, ಇಲ್ಲವೇ ಪ್ರಜಾಸತ್ತಾತ್ಮಕ— ಯಾವುದಿದ್ದರೂ ಸರಿ. ಸಾರ್ವಜನಿಕ ಶಿಕ್ಷಣದ ಮೇಲೆ ಸರಕಾರದ ಕೆಲವೊಂದು ನಿಯಂತ್ರಣವು ಅನಿವಾರ್ಯವೆನಿಸುವದು. ಆದರೆ ಈ ನಿಯಂತ್ರಣವು ಯಾವ ವಿಷಯಗಳಲ್ಲಿ, ಎಷ್ಟು ಪ್ರಮಾಣದಲ್ಲಿ?— ಎಂಬುದೇ ವಿವಾದದ ವಿಷಯವೆನಿಸುವದು. ಪ್ರತಿಭಾಶಾಲಿಯಾದ ಶಿಕ್ಷಕನ ಪ್ರಗತಿ-ಪ್ರಯೋಗಗಳಿಗೆ ಈ ನಿಯಂತ್ರಣಗಳು ಕಾಲ್ತೊಡಕಾಗಬಾರದು; ಮಗುವಿನ ವ್ಯಕ್ತಿತ್ವವನ್ನು ಕಮರಿಸುವಂತಾಗ ಬಾರದು.

ಅಭ್ಯಾಸಪತ್ರಿಕೆಯನ್ನು ರಚಿಸುವದು, ಪಠ್ಯಪುಸ್ತಕಗಳನ್ನು ನಿಯಮಿಸುವದು— ಸರಕಾರದ ನಿಯಂತ್ರಣದಲ್ಲಿ ಇವೇ ಮುಖ್ಯವಾದವುಗಳೆನ್ನಬಹುದು. ಇವೆರಡರ ನಿಯಂತ್ರಣದ ಪರಿಣಾಮವೂ ಬಹುದೂರಗಾಮಿಯಾಗಿರುವದು. ಅಭ್ಯಾಸ ಪತ್ರಿಕೆಯು ಒಂದು ರಾಷ್ಟ್ರದ ಜನತೆಯ ಆಶೆ ಆಕಾಂಕ್ಷೆಗಳ ಪ್ರತೀಕವಾಗಿದೆ. ಪಠ್ಯಪುಸ್ತಕಗಳಲ್ಲಿ ಅವುಗಳ ಪ್ರತಿಬಿಂಬವನ್ನು ಕಾಣಬಹುದು. ಪಠ್ಯಪುಸ್ತಕಗಳು ಮಕ್ಕಳ ಮನಸ್ಸಿಗೆ ಶಿಕ್ಷಣವು ಪೂರೈಸುವ ಆಹಾರದಂತಿವೆ. ಮಕ್ಕಳ ಮನೋಭೂಮಿಕೆಯನ್ನು ಅವು ರೂಪಿಸುವವು. ಅವರ ಭಾವನೆಗಳಿಗೆ ಬೇಕಾದ ಬಣ್ಣ ಬಳೆಯುವವು. ಏಕತಂತ್ರೀ (ಸರ್ವಾಧಿಕಾರಿ) ರಾಜ್ಯಪದ್ಧತಿಯಲ್ಲಿ, ಅಲ್ಲಿಯ ಅಧಿಕಾರಿಗಳು ಪಠ್ಯಪುಸ್ತಕಗಳಿಂದ ದೊರೆಯುವ ಈ ಪ್ರಯೋಜನವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳುವರು. ಮಕ್ಕಳ ಮನಸ್ಸಿನಲ್ಲಿ ದ್ವೇಷ-ದುರಭಿಮಾನಗಳ ವಿಷವನ್ನು ತುಂಬುವರು. ವಿದೇಶಿಯ ಪ್ರಭುತ್ವವು ತನ್ನ ಆಳಿಕೆಯ ಬೇರುಗಳನ್ನು ಭದ್ರಗೊಳಿಸಲು ಶಿಕ್ಷಣವನ್ನೂ ಒಂದು ಸಾಧನವಾಗಿ ಮಾಡಿಕೊಳ್ಳುವದು. ತಮ್ಮ ಶ್ರೇಷ್ಠತೆ ಹಾಗೂ ಭಾರತೀಯರ ಬಗ್ಗೆ ಹೀನಭಾವನೆಗಳನ್ನು ಮಕ್ಕಳ ಮನಸ್ಸಿನಲ್ಲಿ ಬಿಂಬಿಸುವಂತೆ, ಬ್ರಿಟಿಶರು ಅಂದಿನ ಶಿಕ್ಷಣಕ್ರಮದ ರೂಪರೀತಿಗಳನ್ನು ಗೊತ್ತುಪಡಿಸಿದ್ದರು. ಅಂದಿನ ಶಿಕ್ಷಣಪದ್ಧತಿಯ ದೋಷಗಳನ್ನು ದೂರವಾಗಿರಿಸಿ, ಸ್ವಾವಲಂಬನ ಹಾಗೂ ಸ್ವದೇಶಾಭಿಮಾನಗಳಿಂದ ಕೂಡಿದ ಶಿಕ್ಷಣಯೋಜನೆಯನ್ನು ಭಾರತದ ಪ್ರಜಾರಾಜ್ಯವು ಇಂದು ರಚಿಸಿದೆ.

(೧೦) **ಶಾಲೆ :—** ಕೇವಲ ಅನುಭವಗಳಿಂದ ಪಡೆಯುವ ವ್ಯಾಪಕ ಶಿಕ್ಷಣವು ಅವ್ಯವಸ್ಥಿತವಾದುದು. ವಿಶಿಷ್ಟ ಧ್ಯೇಯರಹಿತವಾದುದು. ಅನಿಯಂತ್ರಿತವಾದ ಅನುಭವಗಳಿಂದ ಉಂಟಾಗುವ ಸಂಸ್ಕಾರವು ಮಕ್ಕಳ ಸರಿಯಾದ ವಿಕಾಸಕ್ಕೆ ಪ್ರತಿಕೂಲವೂ ಆಗಬಹುದು. ಮಕ್ಕಳ ವಯೋಮಾನದ ಒಲವು ಶಕ್ತಿಗಳಿಗೆ ಉಚಿತವಾದ ಸನ್ನಿವೇಶಗಳನ್ನು ಒದಗಿಸುವದು; ನಿಸರ್ಗ-ದತ್ತವಾದ ಅವರ ಶಾರೀರಿಕ, ಮಾನಸಿಕ ಹಾಗೂ ಆತ್ಮಿಕ ಶಕ್ತಿಗಳನ್ನು ಸ್ಫುಟಗೊಳಿಸುವದು; ಈ ಒಲವು ಶಕ್ತಿಗಳ ವಿಕಾಸಕ್ಕೆ ಯಥೋಚಿತವಾದ

ಸಂಸ್ಕರಣವನ್ನು ನೀಡುವದು, ಯಾವುದೇ ಬಗೆಯ ಘಾತಿ ಘಾಸಿಗಳಿಲ್ಲದೆ ಮಕ್ಕಳು ಮುಂದಿನ ಜೀವನದಲ್ಲಿ ಪದಾರ್ಪಣ ಮಾಡುವಂತೆ ಅವರನ್ನು ಅಣಿಗೊಳಿಸುವದು— ಇವುಗಳನ್ನೆಲ್ಲ ಕಾರ್ಯಗತಗೊಳಿಸಲು 'ಶಾಲೆ'ಯೆಂಬ ಶಿಕ್ಷಣ ಸಂಸ್ಥೆಯು ಜನ್ಮತಾಳಬೇಕಾಯಿತು. ಜೀವನಾದ್ಯಂತವಾಗಿ ಸಾಗುವ ಅನುಭವವಜನ್ಯ ಶಿಕ್ಷಣ–ವ್ಯಾಪಕ ಶಿಕ್ಷಣ. ಶಾಲೆಯ ಆವಾರ ದಲ್ಲಿ ಮಕ್ಕಳಿಗೆ ಕೊಡಲ್ಪಡುವ ಶಿಕ್ಷಣ–ಮರ್ಯಾದಿತ ಶಿಕ್ಷಣ. ಮಕ್ಕಳ ಶಾಲೆಗಳನ್ನು 'ಬಾಲೋದ್ಯಾನ'ಗಳೆಂದು ಫ್ರೋಬೆಲ್‌ನು ಹೇಳಿರುವದು ಯಥಾರ್ಥವಾಗಿದೆ. ಮಗು ಒಂದು ಸಸಿಯಂತೆ. ಸಸಿಯಲ್ಲಿ ತನ್ನದೇ ಆದ ರೀತಿಯಿಂದ ವಿಕಾಸ ಹೊಂದುವ ಶಕ್ತಿ ಹುದುಗಿದೆ. ಮಗುವೆಂಬ ಸಸಿಯು ತನ್ನದೇ ಆದ ರೀತಿಯಲ್ಲಿ ಬೆಳೆಯಲು ಶಾಲೆ ಉದ್ಯಾನವಿದ್ದಂತೆ. ಸುತ್ತಲಿನ ಸನ್ನಿವೇಶಗಳೊಡನೆ, ಕಾಲಕಾಲಕ್ಕೆ ಒದಗುವ ಜೀವನದ ಸಂದರ್ಭಗಳೊಡನೆ ಸಮರಸವಾಗಿ ಹೊಂದಿಕೊಂಡು ಮಗು ಬೆಳೆಯಬೇಕು. ಶಿಕ್ಷಕನು ತೋಟಿಗನಂತೆ. ಮಗು ವಿನ ವಿಕಾಸವು ಸರಾಗವಾಗಿ, ಸಮುಪೇತವಾಗಿ, ಸಲೀಲವಾಗಿ ಸಾಗುವಂತೆ ಆತನು ಶಾಲೆಯ ಪರಿಸರಣವನ್ನು ರಚಿಸಬೇಕು. ಶಿಕ್ಷಣ ಸಾಮಗ್ರಿಯನ್ನು ಒದಗಿಸಬೇಕು. ಕಸ–ಕಳೆ ಯನ್ನೆಲ್ಲ ತೆಗೆದುಹಾಕಿ, ತೋಟಕ್ಕೆ ಬೇಲಿಯನ್ನು ಹಚ್ಚುವ ತೋಟಿಗನಂತೆ, ಶಿಕ್ಷಕನಾದರೂ ಮಕ್ಕಳ ಸರ್ವಾಂಗೀಣವಾದ ವಿಕಾಸಕ್ಕೆ ಹಾನಿಕರವಾದುದನ್ನು ತೆಗೆದುಹಾಕಬೇಕು; ಪ್ರತಿ ಕೂಲವಾದುದನ್ನು ಪ್ರತಿಬಂಧಿಸಬೇಕು.

ಹುಟ್ಟಿದಂದಿನಿಂದ ಮರಣದವರೆಗೆ ಸಾಗುವ ಆಗುಹೋಗುಗಳು ಒದಗುವ ಅನು ಭವಗಳು ಶಿಕ್ಷಣದ ಅಂಗಗಳೆ ಆಗಿವೆ. ನಮಗೆ ತಿಳಿಯದಿದ್ದರೂ ಅವೆಲ್ಲವುಗಳ ಪರಿಣಾಮವು ಆಗದೆ ಹೋಗದು. ತಾಳ ಮೇಳಗಳಿಲ್ಲದೆ ಹೇಗೋ ಒದಗುವ ಈ ಆಗಂತುಕವಾದ ಆಘಾತ ಗಳಿಗೆ ಜೀವನವು ಬಲಿಯಾದರೆ, ಅದರ ರೂಪಸಿದ್ಧಿಗಳು ಹದಗೆಡುವುವು. ಇದನ್ನು ತಪ್ಪಿ ಸುವದೇ ಶಿಕ್ಷಣ ಸಂಸ್ಥೆಗಳ ಕಾರ್ಯವಾಗಿದೆ. ಶಿಕ್ಷಣ ಸಂಸ್ಥೆಗಳೆಂದರೆ ಕೇವಲ ಜ್ಞಾನದಾನದ ಕೇಂದ್ರಗಳೆಂದು ಭಾವಿಸುವದು ತಪ್ಪು ತಿಳುವಳಿಕೆ. ಜ್ಞಾನ ಹಾಗೂ ಜೀವನಗಳನ್ನು ಒಂದು ಗೂಡಿಸುವದು ಅವುಗಳ ಕಾರ್ಯವಾಗಿದೆ. ರೂಸೋನಿಂದ ಡ್ಯೂಯಿಯವರೆಗೆ ಶಿಕ್ಷಣ ತಜ್ಞರು ಇದೇ ಮಾತನ್ನೇ ಒತ್ತಿ ಹೇಳಿರುವರು. ಜ್ಞಾನ ಹಾಗು ಜೀವನಗಳಲ್ಲಿ ಸಂಪರ್ಕ ಸಹಕಾರಗಳು ತಪ್ಪಿದವೆಂದರೆ, ಬಾಳುವೆಯು ಬಯಲು ಭ್ರಾಂತಿಯಾಗುವದು. 'ಶಿಕ್ಷಣವು ಜೀವನದ ಸಾಧನದಲ್ಲಿ, ಶಿಕ್ಷಣವೇ ಜೀವನವು'— ಎಂಬುದು ಡ್ಯೂಯಿಯವರ ಮತ ವಾಗಿದೆ.

ಶಿಕ್ಷಣವು ರಾಷ್ಟ್ರಪುರುಷನ ಉಸುರಿನಂತಿರಬಹುದು. ಶಿಕ್ಷಣ ಸಂಸ್ಥೆಗಳು ರಾಷ್ಟ್ರ ಪುರುಷನ ಕಣ್ಣುಗಳಿದ್ದಂತೆ. ಸಮಾಜದ ಸುಖ–ಶಾಂತಿ–ಅಭ್ಯುದಯಗಳೆಲ್ಲವೂ ಶಿಕ್ಷಣ ಸಂಸ್ಥೆಗಳನ್ನವಲಂಬಿಸಿರುವವು. ರಾಷ್ಟ್ರ ಜೀವನದ ಸ್ವರೂಪವನ್ನು ಗೊತ್ತುಪಡಿಸುವ ಪವಿತ್ರ ವಾದ ಕಾರ್ಯವು ಶಿಕ್ಷಣ ಸಂಸ್ಥೆಗಳದಾಗಿದೆ. ರಾಷ್ಟ್ರ-ನಿರ್ಮಾಣದ ಕಾರ್ಯದಲ್ಲಿ ಅವುಗಳ ಸ್ಥಾನವು ಅತೀವ ಮಹತ್ವದ್ದಾಗಿದೆ.

ಮಕ್ಕಳಿಗೆ ವಿಶಾಲ ಜೀವನದ ಮೊದಲು ಪರಿಚಯವನ್ನು ಕೊಡುವ ಸಂಸ್ಥೆಗಳು ಶಾಲೆಗಳೆ. ಮನೆಯ ಕಿರಿ ಸಮಾಜದಿಂದ ಹೊರಗಿನ ವಿಶಾಲ ಸಮಾಜಕ್ಕೆ ಪ್ರವೇಶಿಸಲು

ಶಾಲೆಗಳು ಸೇತುವೆಗಳಿದ್ದಂತೆ. ಮಕ್ಕಳ ಜೀವನದಲ್ಲಿ ಎರಡನ್ನೂ ಹೊಂದಿಸಿ ಕೊಡುವ ಕೊಂಡಿಗಳಿದ್ದಂತೆ. ಶಾಲೆ ವಿಶಾಲ ಸಮಾಜದ ಒಂದು ಚಿಕ್ಕ ಮಾದರಿಯಂತಿರಬೇಕು. ಆದರೆ ಆ ಸಮಾಜದಲ್ಲಿರುವ ಸ್ವಾರ್ಥ, ಸ್ಪರ್ಧೆ ಮುಂತಾದ ಆಗಂತುಕ ದೋಷಗಳಿಂದ ದೂರವಾಗಿರಬೇಕು. ಜೀವನದ ಉನ್ನತವಾದ ಆದರ್ಶಗಳನ್ನು ಅದು ಪ್ರತಿನಿಧಿಸಬೇಕು. ಶಾಲೆಯ ಜೀವನವು ಪ್ರಾಗತಿಕವಾಗಿರಬೇಕು. ಮಕ್ಕಳ ವಯೋಮಾನಕ್ಕೆ ಹೊಂದಿಕೊಳ್ಳುವಂತೆ ಜೀವನದ ಸನ್ನಿವೇಶಗಳನ್ನು ಹಂತ ಹಂತವಾಗಿ ಅವರಿಗೆ ಒದಗಿಸಬೇಕು.

## ಅಭ್ಯಸನಗಳು

೧. ವಿಶಾಲ ಶಿಕ್ಷಣವು ಯಾವುದು.

೨. ಮಕ್ಕಳ ಮನೋವಿಕಾಸದಲ್ಲಿ ಕುಟುಂಬದ ಪ್ರಭಾವವು ಹೇಗಿರುವದು ?

೩. ಧರ್ಮ ಹಾಗೂ ಶಿಕ್ಷಣಗಳ ಸಮನ್ವಯವನ್ನು ಹೇಗೆ ಸಾಧಿಸಬಹುದು ? ಈ ಕಾರ್ಯದಲ್ಲಿ ಬರುವತೊಡಕುಗಳೇನು ?

೪. 'ಪತ್ರಿಕೆಗಳು ಲೋಕಶಿಕ್ಷಣದ ಅಮೋಘ ಸಾಧನವಾಗಿವೆ', 'ಲೋಕಶಿಕ್ಷಣದಲ್ಲಿ ಪತ್ರಿಕೆಗಳ ಕಾರ್ಯವು ಹೊಣೆಗಾರಿಕೆಯದು'— ಇವೆರಡನ್ನೂ ವಿವರವಾಗಿ ವಿವೇಚಿಸಿರಿ.

೫. ಮಕ್ಕಳಿಗೆ, ವಯಸ್ಕರಿಗೆ, ಬಾನುಲಿಯ ಶೈಕ್ಷಣಿಕ ಪ್ರಯೋಜನಗಳು ಯಾವು ?

೬. ಟೆಲಿವ್ಹಿಜನ್, ಶೈಕ್ಷಣಿಕವಾಗಿ ಹೆಚ್ಚು ಉಪಯುಕ್ತವಾಗಿದೆ— ಏಕೆ ?

೭. ಚಲಚ್ಚಿತ್ರಗಳ ಪ್ರಭಾವವು ಸಮಾಜದ ಮೇಲೆ ಹೇಗೆ ಆಗುವದು ? ಅವುಗಳ ಲೋಕಪ್ರಿಯತೆಗೆ ಕಾರಣವೇನು ?

೮. ಚಲಚ್ಚಿತ್ರಗಳು ಶಿಕ್ಷಣದಲ್ಲಿ ಪೂರಕ ಸಾಧನಗಳಾಗಬಹುದು—ಹೇಗೆ ?

೯. ಜಾತ್ರೆಯಲ್ಲಿರುವ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಅಂಶಗಳು ಯಾವು ?

೧೦. ಹಬ್ಬಗಳಲ್ಲಿ ಭಾರತೀಯ ಸಂಸ್ಕೃತಿಯು ಯಾವ ವೈಶಿಷ್ಟ್ಯವು ಕಂಡುಬರುವದು ? ಹಬ್ಬಗಳು ಜೀವನವನ್ನು ತಿದ್ದುವ ಒಳ್ಳೇಸಾಧನಗಳಾಗಿವೆ— ಹೇಗೆ ?

೧೧. ಗ್ರಂಥಾಲಯಗಳು ಅಪ್ರತ್ಯಕ್ಷವಾಗಿ ಶಿಕ್ಷಣದಲ್ಲಿ ಸಹಕರಿಸುವವು— ಹೇಗೆ ?

೧೨. ಪಾಶ್ಚಾತ್ಯದೇಶಗಳಲ್ಲಿ ಸರಕಾರ ಹಾಗೂ ಶಿಕ್ಷಣಗಳ ಬಗ್ಗೆ ಯಾವ ಭಿನ್ನಾಭಿಪ್ರಾಯಗಳಿದ್ದವು ? ಈ ವಿಷಯದಲ್ಲಿ ಪ್ರಾಚೀನ ಭಾರತದ ಪರಿಸ್ಥಿತಿಯು ಹೇಗಿದ್ದಿತು ?

೧೩. ಶಿಕ್ಷಣದಲ್ಲಿ ಸರಕಾರದ ನಿಯಂತ್ರಣವು ಹೇಗೆ ? ಎಷ್ಟರಮಟ್ಟಿಗೆ ಇರಬೇಕು ?

೧೪. ಶಿಕ್ಷಣದಲ್ಲ ಪಠ್ಯಪುಸ್ತಕಗಳ ಪ್ರಭಾವವೇನು ?

೧೫. ಶಿಕ್ಷಣ ಸಂಸ್ಥೆ(ಶಾಲೆ)ಗಳ ಅಗತ್ಯವೇನು ? ಅವುಗಳ ಸ್ವರೂಪವು ಹೇಗಿರಬೇಕು? ಅವುಗಳ ಕಾರ್ಯವೇನು ?

# ೪. ಶಿಕ್ಷಣದ ಮುನ್ನಡೆಯಲ್ಲಿ ಮೈಲುಗಲ್ಲುಗಳು

ಮಹಾನದಿಯ ಉಗಮವು ಚಿಕ್ಕದಾಗಿರುವುದು,— ಒಂದು ಬೆಟ್ಟದ ಝರಿ ಇಲ್ಲವೆ ಹನಿಹನಿಯಾಗಿ ಕರಗುವ ಒಂದು ಹಿಮ ನದಿ. ಈ ಚಿಕ್ಕ ಪ್ರವಾಹಕ್ಕೆ ಮಾರ್ಗದಲ್ಲಿ

ಅನೇಕ ಪ್ರವಾಹಗಳು ಕೂಡಿಕೊಳ್ಳುವವು. ನಿದಾನವಾಗಿ, ವಿಶಾಲವಾಗಿ ಹರಿಯುವ ಮಹಾ ನದಿಯ ನಿರ್ಮಾಣವಾಗುವದು. ಒಂದು ನೂತನವಾದ, ಕ್ರಾಂತಿಕಾರಕವಾದ ವಿಚಾರ ಪ್ರವಾಹದ ರೀತಿಯೂ ಹೀಗೆಯೆ ಆಗಿರುವದು. ಮೇಧಾವಿಯಾದ ಮಹಾಪುರುಷನ ಮುನ್ನೋಟದಲ್ಲಿ ಒಂದು ವಿಚಾರವು ಹೊಳೆಯುವದು. ಅದೇ ಕ್ಷೇತ್ರದಲ್ಲಿ ಕೆಲಸ ಮಾಡುವ ಅನೇಕ ಮಹನೀಯರು ಅದೇ ವಿಚಾರ ಧಾರೆಯನ್ನೇ ಪೋಷಿಸಿಕೊಂಡು ಬರುವರು. ಅನುಭವದ ಬೆಳಕಿನಲ್ಲಿ ಮೂಲವಿಚಾರವನ್ನು ತುಸು ಪರಿಷ್ಕರಿಸಬಹುದು. ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಅಲ್ಲಲ್ಲಿ ವ್ಯತ್ಯಾಸಗೊಳಿಸಬಹುದು. ಮುಂದೆ ಕೆಲಕಾಲದ ನಂತರ ಆ ವಿಚಾರವು ಸರ್ವಮಾನ್ಯವಾದ ಸಿದ್ಧಾಂತದ ಸ್ವರೂಪವನ್ನು ತಾಳುವದು. ನಾಗರಿಕತೆಯೊಡನೆ ಸಮನಾಗಿ ಹೆಜ್ಜೆ ಹಾಕುತ್ತ ಮುಂದೆ ಸಾಗಿರುವ ಶಿಕ್ಷಣದ ವಿಷಯಕ್ಕೂ ಈ ಮಾತು ತುಂಬಾ ಅನ್ವಯಿಸುವದು. ತನ್ನ ಉದ್ದೇಶ ಸಾಧನೆಯಲ್ಲಿ, ವ್ಯಕ್ತಿಗಳಿಂದ, ಸಂಸ್ಥೆಗಳಿಂದ ಶಿಕ್ಷಣವು ಬಹುಮುಖವಾದ ನೆರವನ್ನು ಪಡೆದಿದೆ. ಮುನ್ನಡೆಯ ಮಾರ್ಗದಲ್ಲಿ ಶಿಕ್ಷಣವನ್ನು ನೂತನ ವಿಚಾರಧಾರೆಗಳಿಂದ ಪೋಷಿಸಿಕೊಂಡು ಬಂದ ಮೇಧಾವಿಗಳು ಯಾರು? ನೂತನ ಪ್ರಯೋಗಗಳಿಂದ ಶಿಕ್ಷಣವನ್ನು ಪರಿಷ್ಕೃತಗೊಳಿಸಿದ ಸಂಸ್ಥೆಗಳು ಯಾವು ? ಶಿಕ್ಷಣದ ಮೂಲೋದ್ದೇಶ ಸಾಧನೆಗಾಗಿ ಇವರಿಬ್ಬರೂ ಯಾವ ಸೇವೆಯನ್ನು ಸಲ್ಲಿಸಿರುವರು? ಶಿಕ್ಷಣಕಾರ್ಯದಲ್ಲಿ ತೊಡಗಿದವರಿಗೆ ಈ ವಿವೇಚನೆಯು ಅಗತ್ಯವಾಗಿದೆ.

(೧) ಗುರುಕುಲ:— ಶಿಕ್ಷಣದ ವಿಷಯದಲ್ಲಿ ನಮ್ಮ ಪೂರ್ವಜರ ದೃಷ್ಟಿಯು ಐಹಿಕವಾಗಿರಲಿಲ್ಲ. ಅಂತೆಯೆ ಅಂದಿನ ಶಿಕ್ಷಣದ ಅಂತಿಮ ಗುರಿಯು ಪಾರಲೌಕಿಕವಾಗಿತ್ತು. ನಿಸರ್ಗದ ನಿಕಟವಾದ ಸಹವಾಸದಲ್ಲಿ, ಆಶ್ರಮದ ಪವಿತ್ರವಾದ ಪರಿಸರಣದಲ್ಲಿ, ಋಷಿಸದೃಶರಾದ ಗುರುಗಳ ಸನ್ನಿಧಿಯಲ್ಲಿ ಅಂದಿನ ಭಾರತೀಯ ಬಟುಗಳು ತಮ್ಮ ವಿದ್ಯೆಯನ್ನು ಸಾಗಿಸುತ್ತಿದ್ದರು. 'ವಿಮುಕ್ತಿ'ಯೆ ಅವರ ಗುರಿಯಾಗಿತ್ತು. ಗುರುಕುಲ ಶಿಕ್ಷಣದಲ್ಲಿ ಇವೇ ಮುಖ್ಯ ಸಂಗತಿಗಳಾಗಿವೆ.

'ಉಪನಯನ'ವೆಂದರೆ, ಗುರುವಿನ ಸನ್ನಿಧಿಗೆ ವಿದ್ಯಾರ್ಜನೆಗಾಗಿ ವಿದ್ಯಾರ್ಥಿಯನ್ನು ಕರೆದುಕೊಂಡು ಹೋಗುವದು. ಷೋಡಶ ಸಂಸ್ಕಾರಗಳಲ್ಲಿ ಉಪನಯನವು ಮಹತ್ವದ್ದಾಗಿರುವದು. ಬೇರೆ ಬೇರೆ ವರ್ಣಗಳ ಬಟುಗಳಿಗೆ ಉಪನಯನದ ವಯೋಮಾನವೂ ವಿವಿಧವಾಗಿದೆ. ಇಂದಿನ ರೂಢಿಯಲ್ಲಿ ಉಪನಯನವು ತನ್ನ ಮೂಲೋದ್ದೇಶವನ್ನೇ ಮರೆತುಬಿಟ್ಟಂತಿದೆ.

ಎಂಟು-ಹನ್ನೆರಡು ವರುಷಗಳವರೆಗೆ ಮಗು ತಾಯಿ ತಂದೆಗಳ ಕಣ್ಮಣಿಯಾಗಿ, ಪ್ರೀತಿಯ ಕೇಂದ್ರವಾಗಿ ಬೆಳೆದಿರುವನು. ಉಪನಯನವಾಯಿತು. ಇನ್ನು ಮನೆಯಿಂದ ತೊಲಗಬೇಕು. ತಾಯಿ–ತಂದೆಗಳಿಂದ ಅಗಲಬೇಕು. ಸಂಸ್ಕೃತಿ ಸಂಪ್ರದಾಯಗಳ ಪ್ರಭಾವದಿಂದ ಇಬ್ಬರೂ ಈ ವಿಯೋಗಕ್ಕಾಗಿ ಖೇದಪಡುತ್ತಿರಲಿಲ್ಲ. ತಾಯಿ-ತಂದೆಗಳೂ ಸಂತೋಷದಿಂದ ತಮ್ಮ ಮಗನನ್ನು ಹರಸಿ ಬೀಳ್ಕೊಡುತ್ತಿದ್ದರು. ಮಗು ಕೂಡ ಅಷ್ಟೇ ಉತ್ಸಾಹದಿಂದ ಗುರುವಿನ ಬಳಿ ಸಾರುತ್ತಿದ್ದನು. ಮಕ್ಕಳ ವಿದ್ಯಾಭ್ಯಾಸ ಚನ್ನಾಗಿ ಸಾಗಬೇಕೆಂದು ಸಿರಿವಂತರು ದೂರದೂರದ ಗುರುಕುಲಗಳಿಗೆ ಅವರನ್ನು ಕಳಿಸುತ್ತಿದ್ದರಂತೆ. ಗುರುವಿಗೆ

'ಅಂತೇವಾಸಿ'ಯಾಗಿ ಗುರುಕುಲದಲ್ಲಿ ಆತನು ವಿದ್ಯಾರ್ಜನೆ ಮಾಡಬೇಕು. ಗುರುಕುಲದಲ್ಲಿ ಮನೆತನದ ಸ್ಥಾನಮಾನಗಳಿಗೆ ಮನ್ನಣೆಯಿರಲಿಲ್ಲ. ಶ್ರೀಕೃಷ್ಣನಾದರೂ ಅಷ್ಟೇ, ಬಡ ಕುಚೇಲನಾದರೂ ಅಷ್ಟೇ. ಗುರುವಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಗುರುಕುಲದ ನಿಯಮಗಳಂತೆ ಎಲ್ಲರೂ ನಡೆಯಬೇಕು. 'ಬ್ರಾಹ್ಮೀ ಮುಹೂರ್ತ'ದಲ್ಲಿ ಗುರುವಿಗಿಂತಲೂ ಮೊದಲು ಏಳಬೇಕು; ಗುರು-ಮಲಗಿದ ನಂತರ ಮಲಗಬೇಕು. ಮಧ್ಯಾಹ್ನದಲ್ಲಿ ಭಿಕ್ಷೆ ಮಾಡಿಕೊಂಡು ಬರಬೇಕು. ಸಂಗ್ರಹಿಸಿದ ಭಿಕ್ಷೆಯನ್ನು ಗುರುವಿಗೆ ಸಮರ್ಪಿಸಬೇಕು. ಗುರುವಿನ ಅಗ್ನಿಕಾರ್ಯಕ್ಕಾಗಿ ಸಮಿತ್ತನ್ನು ಕಲೆಹಾಕಬೇಕು. ಹೋಮಹವನಗಳಲ್ಲಿ ಗುರುವಿಗೆ ನೆರವಾಗಬೇಕು. ಹಸುಗಳನ್ನು ಕಾಯಬೇಕು. ಗಿಡಗಳಿಗೆ ನೀರು ಹಾಕಬೇಕು. ಕೃಷಿಕಾರ್ಯದಲ್ಲಿ ಸಹಕರಿಸಬೇಕು. ಗುರುಪತ್ನಿಗೆ ಮನೆಗೆಲಸಗಳಲ್ಲಿ ನೆರವಾಗಬೇಕು. ಈ ಬಗೆಯ ಗುರುಸೇವೆ ಮಕ್ಕಳಲ್ಲಿ ಶ್ರಮಗೌರವದ ಭಾವನೆಯನ್ನು ಬೆಳೆಸುತ್ತಿತ್ತು. ನಿಸರ್ಗದ ಮಡಲಿನಲ್ಲಿ ಗುರುಕುಲದ ಬಟುಗಳು ಬೆಳೆಯುವರು. ನಿಸರ್ಗದ ನಿತ್ಯ ನೂತನ ನೋಟಗಳನ್ನು ಅವರು ನೋಡುವರು. ಪಶುಪಕ್ಷಿಗಳು ಅವರ ಜೊತೆಗಾರರು. ಈ ಬಗೆಯ ಸನ್ನಿವೇಶದಲ್ಲಿ ನಿಸರ್ಗಪ್ರೇಮ, ದೈವಭಕ್ತಿಗಳು ಗುರುಕುಲದ ನಿವಾಸಿಗಳಲ್ಲಿ ತಾವಾಗಿಯೆ ಜನಿಸುತ್ತಿದ್ದವು. ಸಾಮಾನ್ಯವಾಗಿ ಗುರುಕುಲಗಳು ಪ್ರಶಾಂತವಾದ 'ತಪೋವನ'ಗಳಲ್ಲಿ ನೆಲಸಿದ್ದವು. ನಗರಗಳ ಹೊರವಲಯದ ಉದ್ಯಾನಗಳಲ್ಲಿಯೂ ಗುರುಕುಲಗಳಿದ್ದವೆಂದು ತಿಳಿದುಬರುವದು, ನಗರಗಳ ಕೋಲಾಹಲದಿಂದ ಈ ಶಿಕ್ಷಣ ಸಂಸ್ಥೆಗಳು ದೂರವಾಗಿರಬೇಕೆಂಬುವದೆ ಇದಕ್ಕೆ ಕಾರಣ. ಗುರುಕುಲಗಳು ಬಿಡಿಯಾದ ಶಿಕ್ಷಣ ಸಂಸ್ಥೆಗಳು. ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಅನ್ನಬಟ್ಟೆಗಳನ್ನು ಕೊಟ್ಟು ಅಧ್ಯಾಪನವನ್ನು ಮಾಡುವ ಗುರುಗಳೂ ಇದ್ದರು. ಅವರಿಗೆ 'ಕುಲಪತಿ'ಗಳೆಂದು ಹೇಳುವರು. ಶಕುಂತಲೆಯ ಸಾಕು-ತಂದೆಯಾದ ಕಣ್ವರು ಈ ಬಗೆಯ ಕುಲಪತಿಗಳಾಗಿದ್ದರು. 'ಅಗ್ರಹಾರ'ಗಳು ಅಧ್ಯಾಪನವನ್ನು ಕೈಕೊಂಡಿರುವ ಗುರುಗಳ ಒಂದು ಪ್ರತ್ಯೇಕವಾದ ವಾಸಭೂಮಿ. ಆ ಪ್ರದೇಶದ ಸಮಗ್ರ ಆದಾಯವೆಲ್ಲ ಈ ಶಿಕ್ಷಣ ಸಂಸ್ಥೆಗಳಿಗಾಗಿ ನಿವೇದಿತವಾಗಿರುತ್ತಿತ್ತು. ನಲಂದಾ, ವಿಕ್ರಮಶಿಲಾ, ಮುಂತಾದವುಗಳು ಅತಿದೊಡ್ಡ ಬೌದ್ಧ ವಿದ್ಯಾಪೀಠಗಳು— ಈಗಿನ ವಿಶ್ವವಿದ್ಯಾಲಯಗಳಿದ್ದಂತೆ. ಇವುಗಳಲ್ಲಿ ವ್ಯಾಸಂಗಮಾಡಲು ವಿದೇಶದ ವಿದ್ಯಾರ್ಥಿಗಳೂ ಬರುತ್ತಿದ್ದರು.

ಗುರಕುಲ ಶಿಕ್ಷಣದ ದೃಷ್ಟಿಯು ಪಾರಲೌಕಿಕವಾಗಿರಬಹುದು; ಅದರ ಅಂತಿಮ ಗುರಿಯು 'ವಿಮುಕ್ತಿ'ಯಾಗಿರಬಹುದು. ಪ್ರಾಚೀನ ಜ್ಞಾನ ಸಂಪತ್ತಿಯನ್ನೂ, ಸಂಪ್ರದಾಯಗಳನ್ನು ನಿಷ್ಠೆಯಿಂದ ಜತನಮಾಡುವದೆ ಗುರುಕುಲದ ವಿದ್ಯಾಭ್ಯಾಸವೆಂದು ತೋರಬಹುದು. ಆದರೆ ಅವುಗಳಲ್ಲಿ ಎಲ್ಲ ಬಗೆಯ ಲೌಕಿಕ ವಿದ್ಯೆಗಳಲ್ಲಿಯೂ ವಿದ್ಯಾರ್ಥಿಗಳಿಗೆ ಶಿಕ್ಷಣ ದೊರೆಯುತ್ತಿತ್ತು. ಒಂದೊಂದು ಗುರಕುಲ ಒಂದೊಂದು ವಿದ್ಯೆಗಾಗಿ ಪ್ರಾಶಸ್ತ್ಯಪಡೆದಿತ್ತು. ಆ ವಿದ್ಯೆಯಲ್ಲಿ ಪಾರಂಗತರಾದ ಗುರುಗಳು ಅವುಗಳಿಗೆ ಅಧಿಪತಿಗಳಾಗಿದ್ದರು. ಸಾಮಾನ್ಯ ಶಿಕ್ಷಣದೊಡನೆ, ತಮ್ಮ ಒಲವು ಶಕ್ತಿಗಳ ಮೇರೆಗೆ ವಿದ್ಯಾರ್ಥಿಗಳು ಆರಿಸಿಕೊಂಡ ವಿಷಯಗಳಲ್ಲಿ ಅವರಿಗೆ ವಿಶೇಷವಾದ ಶಿಕ್ಷಣವು ದೊರೆಯುತ್ತಿತ್ತು.

'ಸಮಾವರ್ತನ' ವೆಂದರೆ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಗುರುಕುಲದಿಂದ ಮನೆಗೆ ಮರಳಿಬರುವದು. ಗುರುದಕ್ಷಿಣೆಯನ್ನು ಸಲ್ಲಿಸಿ ಸುಶಿಕ್ಷಿತನಾಗಿ, ಸುಸಂಸ್ಕೃತನಾಗಿ ಬಂದ ಯುವಕನು ಇನ್ನುಮೇಲೆ ಸಂಸಾರಿಕನಾಗಬಹುದು.

ವಿದ್ಯಾಭ್ಯಾಸದ ಮಾತುಹಾಗಿರಲಿ. ಗುರುಕುಲ ಜೀವನಕ್ರಮವೆ ಉದಾತ್ತವಾಗಿತ್ತು. ಉನ್ನತವಾದ ಆದರ್ಶಗಳಿಂದ ಪ್ರೇರಿತವಾಗಿತ್ತು. ಗುರು ಶಿಷ್ಯರಲ್ಲಿಯ ಸಂಬಂಧವು ಅನ್ಯೋನವಾಗಿತ್ತು; ಅಕೃತ್ರಿಮವಾಗಿತ್ತು; ಆದರಪೂರ್ಣವಾಗಿತ್ತು: ತಂದೆ ಮಕ್ಕಳಂತೆ ಇಬ್ಬರೂ ಕೂಡಿಬಾಳುತ್ತಿದ್ದರು. ಅನುಕರಣಶೀಲವಾದ ವಯೋಮಾನದಲ್ಲಿ ಗುರುವಿನ ಉನ್ನತವಾದ ಆದರ್ಶವು ಯಾವಾಗಲೂ ವಿದ್ಯಾರ್ಥಿಗಳ ಕಣ್ಮುಂದೆ. ಅಲ್ಲಿ ನಡೆಯುವ ಧಾರ್ಮಿಕ ವಿಧಿವಿಧಾನಗಳು, ಪ್ರಾಸಂಗಿಕವಾಗಿ ಗುರುವಿನ ಸದುಪದೇಶ, ಒಳ್ಳೇ ಜೊತೆಗಾರರು, ಮನೋನಿಗ್ರಹಕ್ಕೆ ಸಾಧನವಾದ ವ್ರತನಿಯಮಗಳು, ಶೀಲಸಂವರ್ಧನೆಗೆ ಗುರುಕುಲದ ಈ ಜೀವನ ಎಲ್ಲ ಬಗೆಯಿಂದಲೂ ಸಹಾಯಕವಾಗಿತ್ತು. ಸಾರಾಂಶವೆಂದರೆ ಗುರುಕುಲದಲ್ಲಿ ಅಧ್ಯಯನವೂ ಅನುಭವವೂ, ಆದರ್ಶವೂ–ಆಚರಣೆಯೂ, ಒಂದಕ್ಕೊಂದು ಹೊಂದಿಕೊಂಡು ಸರಾಗವಾಗಿ ಸಾಗುತ್ತಿದ್ದವು.

೨. ಶಿಕ್ಷಣದಲ್ಲಿ ಶಾಸ್ತ್ರಕಾರರು :– ಶಿಕ್ಷಣದಲ್ಲಿ ಇಂದು ನವಯುಗವು ಪ್ರಾರಂಭಿಸಿದೆ. ಜನ–ಜೀವನಕ್ಕೆ ಶಿಕ್ಷಣವು ತೀರ ಸಮೀಪವಾಗತೊಡಗಿವೆ. ಶಿಕ್ಷಣದಲ್ಲಿಯೂ ಸ್ವಾತಂತ್ರ್ಯದ ಸುಳಿಗಾಳಿ ಬೀಸುತ್ತಿದೆ. ಶಿಕ್ಷಣವು ಹೊಸಹಾದಿಗುಂಟ ಸಾಗಹತ್ತಿದೆ. ಶಿಕ್ಷಣದಲ್ಲಿಯ ನೂತನ ಉಪಕ್ರಮಗಳು ಮಾನಸಶಾಸ್ತ್ರದ ಮೂಲ ತತ್ವಗಳ ತಳಹದಿಯಮೇಲೆ ನಿಂತಿವೆ. ನೂತನ ಶಿಕ್ಷಣದ ಅಧಿಷ್ಠಾತೃವು ಮಗು. ಮಗು ಶಿಕ್ಷಣದ ಪ್ರಾಣವಿದ್ದಂತೆ. ಸಚೇತನವಾದ ಮಗು ಶಿಕ್ಷಣದಲ್ಲಿ ತನಗೆ ಬೇಕಾದುದನ್ನು ಮಾತ್ರ ತೆಗೆದುಕೊಳ್ಳಬಲ್ಲದು. ಆತನ ಒಲವು ಶಕ್ತಿಗಳನ್ನೇ ಶಿಕ್ಷಣವು ಅನುಸರಿಸಬೇಕು. ಮಗುವಿಗೆ ಮಿದುಳಿರುವಂತೆ, ಮನಸ್ಸೊಂದಿದೆ. ಆಶೆ ಆಕಾಂಕ್ಷೆಗಳಿವೆ. ಉದ್ವೇಗ ಉಲ್ಹಾಸಗಳಿವೆ. ಚಿಕ್ಕ ಮಗು ಬೆಳೆದ ಮನುಷ್ಯನ ಕಿರಿದಾದ ಮೂರ್ತಿಯಾಗಿಲ್ಲ. ಭಿನ್ನವಾದ ವಯೋಮಾನಗಳಲ್ಲಿ ಮಗುವಿನ ಮಾನಸಿಕ ಹಾಗೂ ಆತ್ಮಿಕ ಶಕ್ತಿಗಳು ಹೇಗೆ ಪ್ರಕಟಗೊಳ್ಳುವವೆಂಬುದರ ಪರಿಚಯು ಶಿಕ್ಷಣದಲ್ಲಿ ಅಗತ್ಯವಾದುದು. ಮಗುವಿನ ಮೈ–ಮನಗಳನ್ನು ಭಿನ್ನವಾಗಿ ಭಾವಿಸದೆ, ಅವೆರಡೂ ಒಂದೇ ತಾಳ ನಿಯಮಗಳನ್ನನ್ನುಸರಿಸಿ ಬೆಳೆಯುವವೆಂಬುದು ಇಂದಿನ ಸಿದ್ಧಾಂತ. ಈ ಶಕ್ತಿಗಳಲ್ಲಿ ಒಂದು ಮಗು ಮತ್ತೊಂದು ಮಗುವಿನಂತಿರುವದಿಲ್ಲ. ಮನಸ್ಸಿನ ಕಾರ್ಯವು ಅನೇಕ ಮುಖವಾಗಿ ಕೊನೆಗಂಡರೂ, ಮನಸ್ಸು ಮಾತ್ರ ತನ್ನಲ್ಲಿ ಏಕರೂಪವಾಗಿದೆ, ಅಖಂಡವಾಗಿದೆ. ಶಿಕ್ಷಣಕಾರ್ಯದಲ್ಲಿ ಮಗುವಿನ ಆಯಾ ವಯೋಮಾನದ ಜೀವನವನ್ನು ಪರಿಗಣಿಸಬೇಕು. ಆತನ ಬೇಡಿಕೆಗಳ ಸರಿಯಾದ ಕಲ್ಪನೆಯಿರಬೇಕು; ಒಲವು ಶಕ್ತಿಗಳನ್ನೂ ಆಸ್ಥೆ ಅನಾದರಗಳನ್ನೂ ಸೂಕ್ಷ್ಮವಾಗಿ, ಸಹಾನುಭೂತಿಯಿಂದ ಪರಿಶೀಲಿಸಬೇಕು.

ಇವೆಲ್ಲ ವಿಚಾರಗಳನ್ನು ಒಳಗೊಂಡ ಶಿಕ್ಷಣಕ್ಕೆ 'ನೂತನ ಶಿಕ್ಷಣ'ವೆಂದು ಸಾಮಾನ್ಯವಾಗಿ ಹೇಳುವರು. ಈ ವಿಚಾರಗಳನ್ನು ಆಗಾಗ್ಗೆ ಕಂಡು ಹಿಡಿದವರೆ 'ಶಿಕ್ಷಣದಲ್ಲಿ ಶಾಸ್ತ್ರಕಾರರು'. 'ದೃಷ್ಟಾರ'ರೆಂತಲೂ ಅವರಿಗೆ ಹೇಳಬಹುದು.

ನೂತನ ಶಿಕ್ಷಣ ತತ್ವಗಳ ದ್ರಷ್ಟಾರರಲ್ಲಿ ರೂಸೋ 'ಆದ್ಯ'ನು—ಮೊದಲಿಗನು. ಉಳಿದವರು ಆತನು ಕಂಡು ಹಿಡಿದ ತತ್ವಗಳನ್ನು ಹೆಚ್ಚು ವಿಶದಗೊಳಿಸಿದರು. ಇಲ್ಲವೆ ಆ ತತ್ವಗಳ ತಳಹದಿಯಮೇಲೆ ಶಿಕ್ಷಣ ಕ್ರಮದ ಕಟ್ಟಡವನ್ನು ನಿರ್ಮಿಸಿದರು. ಇವರೆಲ್ಲರೂ— 'ಶಿಕ್ಷಣವನ್ನು ಮಾನಸ ಶಾಸ್ತ್ರದ ಚೌಕಟ್ಟಿನಲ್ಲಿ ಕೂಡಿಸಿದರು'— ಎಂತಲೂ ಹೇಳುವದುಂಟು. ಶಿಕ್ಷಣದ ಬಗ್ಗೆ ಇಷ್ಟೊಂದು ಉನ್ನತ ತತ್ವಗಳನ್ನು ಈ ವ್ಯಕ್ತಿಯು ಕಂಡುಹಿಡಿದಿರಬಹುದೆ ?— ಎಂದು ಅಚ್ಚರಿ ಪಡುವಷ್ಟು, ರೂಸೋನ ಜೀವನವು ಮೊದಲಿನಿಂದ ಕೊನೆಯವರೆಗೆ ಅವ್ಯವಸ್ಥಿತವಾಗಿದೆ. ಸ್ವಾನುಭವದ ಹಿನ್ನೆಲೆಯಲ್ಲಿ ಆತನ ಒಳ್ಳೇ ವಿಚಾರಗಳಲ್ಲಿ ಮಿಂಚಿನಂತೆ 'ಥಕ್ಕನೆ'ಹೊಳೆದು ಮಾಯವಾದವುಗಳು. ಬಂಡೆಗಲ್ಲು ಒರಟಾದರೂ, ಅದರಲ್ಲಿರುವ ಚಿನ್ನದ ಎಳೆಗಳು ಬೆಳಕಿನಲ್ಲಿ ಚಮಕಿಸುವದಿಲ್ಲವೆ? ಆತನ ಶಿಕ್ಷಣ ತತ್ವಗಳಿಗೆ ಹಿನ್ನೆಲೆಯಾದ ರೂಸೋನ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿದು ಕೊಳ್ಳಬಹುದು.

ಜೀನ ಜಾಕ್ಸ ರೂಸೋ ೧೭೧೨ರಲ್ಲಿ ಜಿನಿವಾ ನಗರದವೊಳಗೆ ಹುಟ್ಟಿದನು. ಆತನ ತಂದೆ ಗಡಿಯಾಳ ದುರಸ್ತಿ ಮಾಡುವವನು. ತಂದೆ ವಿಲಾಸಪ್ರಿಯ, ಚಂಚಲ ವೃತ್ತಿಯವನು. ತಾಯಿ ಭಾವನಾಪ್ರಧಾನಳು. ರೂಸೋಗೆ ಚಿಕ್ಕಂದಿನಲ್ಲಿಯೆ ಮಾತೃವಿಯೋಗವಾಯಿತು. ಸೋದರತ್ತೆ ಈತನನ್ನು ನೋಡಿಕೊಳ್ಳಬೇಕಾಯಿತು. ಅವಳೂ ಆತನ ತಂದೆಯಂತೆ ಸೋಮಾರಿ, ಸುಖಪ್ರಿಯಳು. ರೂಸೋನ ನಡತೆ ವಿದ್ಯಾಭ್ಯಾಸಗಳ ಬಗ್ಗೆ ಅವಳು ದಕ್ಷತೆ ವಹಿಸಲಿಲ್ಲ. ರೂಸೋ ದುಸ್ಸಹವಾಸದಲ್ಲಿ ಕಾಲಿಟ್ಟನು. ತಂದೆಯುಕೂಡ ರೂಸೋ ಉದ್ರೇಕಜನಕವಾದ ಲಘು ಸಾಹಿತ್ಯವನ್ನು ಓದಿಕೊಂಡನು ; ಅಜ್ಜನ ಸಹವಾಸದಲ್ಲಿ ಇತಿಹಾಸ ಹಾಗೂ ಜೀವನ ಚರಿತ್ರೆಗಳನ್ನು ಓದಿಕೊಂಡನು. ಇದರಿಂದ ಆತನ ವಿಷಯ ಜ್ಞಾನವು ಹೆಚ್ಚಿತು ; ಆದರೆ ಮನಸ್ಸು ದುರ್ಬಲವಾಯಿತು. ಭಾವನೆ ಹಾಗೂ ಕಲ್ಪನೆಗಳಿಗೆ ಆತನು ಅಧೀನನಾದನು. ಮನಸ್ಸು ಅಂಕಿತದಲ್ಲಿ ಉಳಿಯಲಿಲ್ಲ. ಸ್ವಚ್ಛಂದವೃತ್ತಿಗೆ ಆತನು ಮನಸೋತನು. ಸುಳ್ಳಾಡುವದು, ಕಳವುಮಾಡುವದು, ಮುಂತಾದ ದುಶ್ಚಟಗಳಿಗೆ ಆತನು ಬಲಿಯಾದನು. ಶಾಲೆಯ ವಿದ್ಯಾಭ್ಯಾಸದಲ್ಲಿ ಆತನಿಗೆ ಆಸ್ಥೆಯಿರಲಿಲ್ಲ. ಜಿನೇವಾದ ಸುತ್ತಲಿನ ಸೃಷ್ಟಿ ಸೌಂದರ್ಯವು ಆತನ ಅಂತರಂಗವನ್ನು ಸೂರೆಗೊಂಡಿತು. ಅಲೆದಾಡುವದು ಆಕರ್ಷಕವೆನಿಸಿತು. ಹೊಟ್ಟೆಯ ಪಾಡಿಗಾಗಿ ಏನಾದರೂ ಕೀಳು ಕೆಲಸ ಮಾಡುತ್ತ ಮೂರು ವರುಷಗಳವರೆಗೆ ರೂಸೋ ಊರಿಂದ ಊರಿಗೆ ಅಲೆದಾಡಿದನು. ಈ ಅಲೆದಾಟವು ಆತನ ಸೌಂದರ್ಯ ಪ್ರೀತಿಯನ್ನೂ ಹಾಗೂ ಸ್ವಾತಂತ್ರ್ಯದ ಹಸಿವನ್ನು ಇಮ್ಮಡಿಯಾಗಿ ಮಾಡಿತು. ಕೆಲಕಾಲ ಸಾವ್ಹೋಯ ನಗರದಲ್ಲಿ ರೂಸೋ ಅನೀತಿಯ ಜೀವನವನ್ನೂ ನಡೆಸಿದನು. ಸಂಗೀತ, ವಿಜ್ಞಾನ ಹಾಗೂ ತತ್ವಜ್ಞಾನಗಳನ್ನು ತನಗೆ ತಿಳಿದಂತೆ ಹೇಗೊ ಅಭ್ಯಾಸಮಾಡಿದನು. ತನ್ನ ೨೯ನೆಯ ಮಯಸ್ಸಿನವರೆಗೆ ಆತನ ಈ ಸಂಚಾರೀ ಜೀವನವು ಅವ್ಯವಸ್ಥಿತವಾಗಿ ನಡೆಯಿತು. ಮುಂದೆ ಪ್ಯಾರೀಸಿನಲ್ಲಿ ನೆಲಿಸಿದಾಗ್ಗೆ ಆತನ ಜೀವನದಲ್ಲಿ ಸ್ಥೈರ್ಯ ಉಂಟಾಯಿತು ರೂಸೋ ಗ್ರಂಥರಚನೆಯಲ್ಲಿ ತೊಡಗಿದನು. ಫ್ರಾನ್ಸದಲ್ಲಿ ಅರಸನ ದಬ್ಬಾಳಿಕೆಯಿಂದ ಸಾಮಾನ್ಯ ಜನರ ಅಂದಿನ ಸ್ಥಿತಿಗತಿಯು ತೀರ ಶೋಚನೀಯವಾಗಿತ್ತು. ರೂಸೋ ಬಡಜನರ ಕೈವಾರಿಯಾಗಿ ಈ ದಬ್ಬಾಳಿಕೆಯನ್ನು ಪ್ರತಿಷೇಧಿಸಿದನು.

ಆತನ ವಿಚಾರಗಳು ಅತ್ಯಂತ ಕ್ರಾಂತಿಕಾರಿಗಳಾಗಿದ್ದವು. ಫ್ರಾನ್ಸದ ರಾಜ್ಯ ಕ್ರಾಂತಿಗೆ ರೂಸೋನ ವಿಚಾರಗಳೆ ಸ್ಫೂರ್ತಿಯನ್ನು, ಪ್ರೇರಣೆಯನ್ನು ನೀಡಿದವೆಂದು ಹೇಳುವರು. ಆತನ ಬರೆಹಗಳನ್ನು ಪ್ರತಿಬಂಧಿಸಲಾಯಿತು. ಬಂಧನವನ್ನು ತಪ್ಪಿಸಲು ರೂಸೋ ಮತ್ತೆ ಅಲೆದಾಡಬೇಕಾಯಿತು; ಇಂಗ್ಲಂಡಕ್ಕೆ ಹೋದನು. ಈ ಸುಮಾರಿಗೆ ಆತನ ಮನಸ್ಸು ದುರ್ಬಲವಾಯಿತು, ಬುದ್ಧಿ ಭ್ರಮೆಯಾಯಿತು. ರೂಸೋ ಪ್ಯಾರೀಸಿಗೆ ಮರಳಿದನು. ೧೭೭೮ರಲ್ಲಿ ಆತನು ಮರಣಹೊಂದಿದನು. ಫ್ರಾನ್ಸದ ರಾಜ್ಯ ಕ್ರಾಂತಿಯ ನಂತರ, ಕ್ರಾಂತಿ ಕಾರರು ಆತನಿಗೆ ತಮ್ಮ ಕೃತಜ್ಞತೆಯನ್ನು ವ್ಯಕ್ತಗೊಳಿಸಿದರು. ಅಸ್ಥಿರ, ಅನಿಯಮಿತ ಹಾಗೂ ಅವ್ಯವಸ್ಥಿತವಾದ ತನ್ನ ಜೀವಮಾನದಲ್ಲಿ, ರೂಸೋನಿಗೆ ಶಾಂತಿ-ಸ್ವಾಸ್ಥ್ಯಗಳು ಲಭಿಸಲಿಲ್ಲ. ಮರಣಾನಂತರವೇ ಆತನಿಗೆ ಕೀರ್ತಿ ಗೌರವಗಳು ಲಭಿಸಿದವು; ಆತನ ವಿಚಾರಗಳ ದೂರಗಾಮಿಯಾದ ಪ್ರಭಾವವನ್ನು ಜಗತ್ತು ಅರಿತುಕೊಂಡಿತು.

ರೂಸೊ ಅನೇಕ ಗ್ರಂಥಗಳನ್ನು ರಚಿಸಿದನು. ಅವುಗಳಲ್ಲಿ ಕೆಲವು ಸಾಮಾಜಿಕ, ಕೆಲವು ರಾಜನೈತಿಕ. ಆದರೆ ಆತನು ಬರೆದಿರುವ 'ಎಮಿಲಿ'ಯೆಂಬುದು ಶೈಕ್ಷಣಿಕ ಗ್ರಂಥ ವಾಗಿದೆ. ಇದೇ ಗ್ರಂಥವೆ ಶಿಕ್ಷಣ ಪ್ರಪಂಚದಲ್ಲಿ ಕಲ್ಪನೆಗೆ ಮೀರಿ ಕ್ರಾಂತಿಯನ್ನುಂಟು ಮಾಡಿದೆ; ರೂಸೋನಿಗೆ ಅಮರವಾದ ಕೀರ್ತಿಯನ್ನು ತಂದುಕೊಟ್ಟಿದೆ.

ಎಮಿಲಿ- ಇದೊಂದು ಕಾಲ್ಪನಿಕ ಕಥಾನಕವಾಗಿದೆ. ಎಮಿಲಿ ರೂಸೋನ ಕಲ್ಪನೆಯ ಕೂಸು. ತಾಯಿ ತಂದೆಗಳಿಲ್ಲದ ಅನಾಥ ಮಗು. ಈ ಮಗುವಿನ ಜೋಪಾ ಸನೆಯನ್ನು 'ಆದರ್ಶ' ಶಿಕ್ಷಕನು ವಹಿಸಿಕೊಳ್ಳುವನು. ಪೂರ್ವಬಾಲ್ಯದಿಂದ ಪ್ರಾಪ್ತವಯಸ್ಕ ನಾಗುವವರೆಗೆ ಎಮಿಲಿ ಹೇಗೆ ಬೆಳೆಯುವನು ? ರೂಸೋನ ತತ್ವಗಳ ಮೇರೆಗೆ ಆತನ ಶಕ್ಷಣವು ಹೇಗೆ ಸಾಗುವದು ? ಎಂಬುದೇ ಈ ಕಥಾನಕದ ವಸ್ತುವಾಗಿದೆ.

ಜನ್ಮವೆತ್ತಿದಕೂಡಲೆ ಎಮಿಲಿಯನ್ನು ನಗರದಿಂದ ದೂರವಿರುವ ನಿಸರ್ಗರಮಣೀಯ ವಾದ ಪ್ರದೇಶಕ್ಕೆ ಕರೆದುಕೊಂಡು ಹೋಗುವರು. ನಗರದ ಕೃತ್ರಿಮ ಜೀವನದ ಬಗ್ಗೆ ರೂಸೋನಿಗೆ ತುಂಬಾ ವಿದ್ವೇಷ. ನಿಸರ್ಗದ ಮಡಿಲಿನಲ್ಲಿ ಎಮಿಲಿನಿರಾತಂಕವಾಗಿ ಬೆಳೆಯುವನು. ಆತನಿಗೆ ಬಟ್ಟೆತೊಡವುಗಳ ಬಂಧನವಿಲ್ಲ. ಚಳಿ-ಮಳೆ ಬಿಸಿಲುಗಳಿಗೆ ಮೈಯೊಡ್ಡಬೇಕು. ಔಷಧ-ವೈದ್ಯರುಗಳಿಂದ ಸುದೂರವಾಗಿರಬೇಕು. ಕಷ್ಟಸಹಿಷ್ಣುತೆ ಗಾಗಿ ತನ್ನ ದೇಹವನ್ನು ಅಣಿಗೊಳಿಸಬೇಕು. ಆತನ ಆಟಪಾಟಗುಳು ತರುಲತೆಗಳೊಡನೆ ಹೂಹಣ್ಣುಗಳೊಡನೆ. ಮಹತ್ವದ ಸಂಗತಿಯೆಂದರೆ, ಹಿರಿಯರು ಆತನ ಬಗ್ಗೆ ಅಳತೆಮೀರಿದ ಆಸ್ಥೆವಹಿಸಬಾರದು. ಅತಿಯಾದ ಈ 'ಕಾಳಜಿ'ಯೆ ಮಗುವಿನ ವಿಕಾಸ ವನ್ನು ಹದಗೆಡಿಸುವದು, ಪರಾವಲಂಬಿಯಾಗಿ ಮಾಡುವದೆಂದು-ರೂಸೋನ ಹೇಳಿಕೆ.

ಶೈಶವದಂತೆ ಪೂರ್ವ ಬಾಲ್ಯವೂ ನಿಸರ್ಗಕ್ಕೆ ಅಂಕಿತವಾಗಿರಬೇಕು. ಈ ವಯೋ ಮಾನದಲ್ಲಿ ಮಗುವಿನ ತರ್ಕಶಕ್ತಿಯು ಇನ್ನೂ ಜಾಗೃತವಾಗಿರುವದಿಲ್ಲ. ತಾರ್ಕಿಕ ವಿಷಯ ಗಳಿಂದ ಮಗು ದೂರವಾಗಿರಬೇಕು. ನೈತಿಕ, ಸಾಮಾಜಿಕ ಬಂಧನಗಳಿಗೆ ಆತನನ್ನು ಒಳ ಪಡಿಸಬಾರದು. 'ನಿಸರ್ಗದ ನಿಯಮಗಳು ನಿಷ್ಠುರವಾಗಿವೆ, ನಿಸರ್ಗದ ಶಕ್ತಿಯು

ಪ್ರಚಂಡವಾಗಿದೆ, ಅವುಗಳೆದುರಿನಲ್ಲಿ ತಾನು ದುರ್ಬಲ, ಅಸಹಾಯ'— ಈ ಪ್ರಜ್ಞೆಯೊಂದು ಮಗುವಿನಲ್ಲಿ ಮೂಡಿದರಾಯಿತು. ಅನುಕರಣ ಪ್ರವೃತ್ತಿಯ ಪ್ರಭಾವವನ್ನು ರೂಸೊ ಅರಿತಿದ್ದನು. ನಗರದ ಅನಿಷ್ಟ ಆಚಾರವಿಚಾರಗಳನ್ನು ಮಗು ಅನುಕರಣದಿಂದ ಎತ್ತಿ ಕೊಳ್ಳಬಾರದೆಂದು ಆತನನ್ನು ದೂರದಲ್ಲಿ ಇಡುವದು ರೂಸೋನಯೋಜನೆ. ಕಷ್ಟ ಸಹಿಷ್ಣುತೆಗಾಗಿ ಶರೀರವನ್ನು ಬಲಪಡಿಸುವಂತೆ, ಸ್ವಾನುಭವದಿಂದ ಇಂದ್ರಿಯಗಳ ಸಂಸ್ಕರಣ ವನ್ನು ಎಮಿಲಿಯು ಇದೇ ಅವಧಿಯಲ್ಲಿ ಪಡೆಯಬೇಕು. ಭಾರ, ಎತ್ತರ ಹಾಗೂ ಅಂತರ ಗಳಲ್ಲಿಯ ಹೆಚ್ಚುಕಡಿಮೆಗಳನ್ನು ಆತನು ಅಪ್ರತ್ಯಕ್ಷವಾಗಿ ಅರಿತುಕೊಳ್ಳಬೇಕು. ವಿವಿಧ ಇಂದ್ರಿಯಗಳಿಂದ ಪಡೆಯುವ ಜ್ಞಾನವನ್ನು ಸಾದೃಶ್ಯ-ವ್ಯತ್ಯಾಸಗಳಿಂದ ಹೊಂದಿಕೊಳ್ಳ ಬೇಕು. ಕಿವಿ, ಕಣ್ಣು ಹಾಗೂ ಕೈಗಳಿಗೆ ಸಂಗೀತ ಹಾಗೂ ಚಿತ್ರಕಲೆಗಳಿಂದ ಉಚಿತವಾದ ಸಂಸ್ಕರಣದೊರೆಯುವದೆಂದು ಆತನ ಹೇಳಿಕೆ. ಅನುಕರಣವೆ ಇವೆರಡೂ ಕಲೆಗಳಿಗೆ ಸಾಧನ.

ಉತ್ತರ ಬಾಲ್ಯದಲ್ಲಿ ಎಮಿಲಿ ನಿಸರ್ಗವಿಜ್ಞಾನದ ಪರಿಚಯವನ್ನು ಮಾಡಿಕೊಳ್ಳು ವನು—ಶಾಲೆಯಲ್ಲಿ ಕಲಿಸುವ ಪದ್ಧತಿಯಿಂದಲ್ಲ; ಆದರೆ ಸ್ವಾನುಭವ ದಿಂದ. ಬೇರೆ ಬೇರೆ ಋತುಮಾನಗಳಲ್ಲಿ ಸೂರ್ಯೋದಯ ಸೂರ್ಯಾಸ್ತಗಳನ್ನು ಆತನು ನಿರೀಕ್ಷಿಸಬೇಕು. ಅಡವಿಯಲ್ಲಿ ದಾರಿತಪ್ಪಿಸಿಕೊಳ್ಳಬೇಕು. ಅಲೆದಾಡಬೇಕು. ನಕ್ಷೆನಕಾಶಗಳ ಸಹಾಯ ವಿಲ್ಲದೆ ತನ್ನ ದಾರಿಯನ್ನು ಕಂಡುಕೊಳ್ಳಬೇಕು. ಪಠ್ಯಪುಸ್ತಕಗಳ ಪಾಠ'ವಿಲ್ಲದೆ ನಿಸರ್ಗದ ಬಹುಮುಖವಾದ ಪರಿಚಯವನ್ನು ಆತನು ಮಾಡಿಕೊಳ್ಳಬೇಕು. ಇದೇ ಅವಧಿಯ ಮೂರು ವರುಷಗಳಲ್ಲಿ ಜೀವನೋಪಯೋಗಿಯಾದ ಒಂದು ವೃತ್ತಿಯನ್ನು ಆತನು ಕಲಿಯ ಬೇಕು. ಎಮಿಲಿ ಕುರ್ಚಿ-ಕಪಾಟುಗಳನ್ನು ತಯಾರಿಸಲು ಕಲಿಯುವನು. ಜೀವನದ ಏರಿಳಿತಗಳಲ್ಲಿ ಚರಿತಾರ್ಥಕ್ಕೆ ಇದು ಸಾಧನವಾಗುವದು.

ಹದಿನೈದನೆಯ ವರುಷದ 'ಪ್ರಾಯ'ದಲ್ಲಿ ಎಮಿಲಿಗೆ ಸಮಾಜದ ಸಂಪರ್ಕ ಒದಗುವದು. ಭಿನ್ನವಾದ ರೀತಿ-ಪ್ರಕೃತಿಗಳುಳ್ಳ ಜನರೂಡನೆ ಆತನು ಬೆರೆತುಕೊಳ್ಳುವನು. ಸ್ವಾನುಭವದಿಂದಲೇ ಆತನು ಸಾಮಾಜಿಕ ರೀತಿ-ನೀತಿಗಳನ್ನು ಕಲಿಯಬೇಕು. ಕಳ್ಳರಿಂದ, ವಂಚಕರಿಂದ ಮೋಸ ಹೋಗದಂತೆ ದಕ್ಷತೆಯನ್ನು ಪಡೆಯಬೇಕು. ಸಜ್ಜನ, ದುರ್ಜನ ರೊಡನೆ, ಬಡವರೊಡನೆ, ಬಲ್ಲಿದವರೊಡನೆ ಎಮಿಲಿಗೆ ಸಂಪರ್ಕ ಬರುವಂತೆ ಶಿಕ್ಷಕನು ಏರ್ಪಾಡು ಮಾಡುವನು. ಅಂದಿನ ಪರಿಸ್ಥಿತಿಗೆ ಮೋಸಹೋಗದಂತೆ, ಇತಿಹಾಸಕಾರನ ದೂರದೃಷ್ಟಿಯು ಮೂಡುವಂತೆ, ಎಮಿಲಿಗೆ ಇತಿಹಾಸದ ಪರಿಚಯವನ್ನು ಮಾಡಿಕೊಡಲಾ ಗುವದು.

ಕೊನೆಯದಾಗಿ ಎಮಿಲಿ ವಿವಾಹಿತ ನಾಗುವಸಮಯ. ಜೀವನದಲ್ಲಿ ಆತನಿಗೆ ತಕ್ಕ ಜೊತೆಗಾರ್ತಿ ಬೇಕು. ಸೋಫಿಯಾ ಆತನ ವಧು. ಸ್ತ್ರೀಯರಬಗ್ಗೆ, ಅವರ ಶಿಕ್ಷಣದ ಬಗ್ಗೆ ರೂಸೋನಿಗೆ ತುಂಬಾ ಹೀನ ಭಾವನೆ, ಕೀಳುಭಾವನೆ, ಕೀಳು ವಿಚಾರ. ಪುರುಷನ ಸುಖಕ್ಕೆ ಸಾಧನವಾಗುವದೆ ಸ್ತ್ರೀಜೀವನ. ಅದುವೆ ಅವಳ ಕಾರ್ಯ, ಗುರಿ. ಪುರುಷನನ್ನು ಸಂತೋಷಗೊಳಿಸಬೇಕು, ಸುದೃಢವಾದ ಸಂತಾನೋತ್ಪಾದನೆಯನ್ನು

ಮಾಡಬೇಕು-ಇದಕ್ಕಾಗಿ ಅವಳ ಜೀವನ ಮೀಸಲಾಗಿದೆ. ಪುರುಷನು ನಿಸರ್ಗದ ತೊಂದರೆಗಳನ್ನು ಸಹಿಸಿಕೊಳ್ಳಲು ಸಿದ್ಧನಾಗಿರುವಂತೆ, ಪುರುಷನಿಂದಾಗುವ ತಾಪ ತೊಂದರೆಗಳನ್ನು ಸಹಿಸಲು ಸ್ತ್ರೀ ಸಿದ್ಧಳಾಗಿರಬೇಕು. ವಿಜ್ಞಾನ, ತತ್ವಜ್ಞಾನ, ಇವುಗಳು ಅವಳಿಗೆ ಅಗತ್ಯವಾಗಿಲ್ಲ, ಪುರುಷನನ್ನು ಸಂತೋಷಗೊಳಿಸುವ ಕಲೆಯೊಂದೆ ಅವಳಿಗೆ ಸಾಕು. ಈ ಉದ್ದೇಶಕ್ಕೆ ಅಗತ್ಯವಿರುವ ಕಲೆಗಳನ್ನು ಅವಳು ಕಲಿಯಬಹುದು.

ರೂಸೋನ ವಿಚಾರಗಳು— ಇಂದು ನಮಗೆ ವಿಸಂಗತ, ವಿಕ್ಷಿಪ್ತವಾಗಿ ತೋರಬಹುದು. ಅವು ಹಾಗಿರುವದೂ ನಿಜ. ಆದರೆ, – 'ಅತಿರೇಕಕ್ಕೆ ಅತಿರೇಕವೆ ಉಪಾಯ' ಎಂಬ ಹೇಳಿಕೆಯೊಂದಿದೆ. ಆ ಕಾಲಕ್ಕೆ ಮಗುವಿನ ಶಿಕ್ಷಣದಲ್ಲಿ ಆಗುತ್ತಿರುವ ಅನ್ಯಾಯದ ಅತಿರೇಕವನ್ನು ಈ ಬಗೆಯ ಉಗ್ರವಾದ, ವಿಕ್ಷಿಪ್ತವೆನಿಸುವ ವಿಚಾರಗಳಿಂದಲೆ ರೂಸೋ ಪ್ರತಿ-ಭಟಿಸಬೇಕಾಯಿತು. ಮೇಲಾಗಿ, ರೂಸೋ ಒಬ್ಬ ದಾರ್ಶನಿಕ. ಸ್ವಾನುಭವದಲ್ಲಿ ತನಗೆ ತಾತ್ಕಾಲಿಕವಾಗಿ ಹೊಳೆದ ವಿಚಾರಗಳನ್ನು ನಿರ್ಭೀತಿಯಿಂದ ಆತನು ಹೇಳಿ ಕೊಟ್ಟಿರುವನು. ಆದುದರಿಂದ ಆತನು ಹೇಳಿರುವ ಎಲ್ಲ ವಿಚಾರಗಳೂ ವ್ಯಾವಹಾರಿಕವಾಗಿಲ್ಲ; ಅಷ್ಟೊಂದು ಸುಸಂಗತವೂ ಆಗಿಲ್ಲ.

ರೂಸೋನು ಪ್ರತಿಪಾದಿಸಿರುವ ಶಿಕ್ಷಣ ವಿಧಾನಕ್ಕೆ— 'ನಿಸರ್ಗ ಶಿಕ್ಷಣ'ವೆಂದು ಹೇಳುವರು. 'ದೇವನ ಕೈಯಿಂದ ಹೊರಗೆ ಬರುವಾಗ್ಗೆ ಎಲ್ಲವೂ ಸರಿಯಾಗಿರುತ್ತದೆ; ಮನುಷ್ಯನ ಕೈಯಲ್ಲಿ ಎಲ್ಲವೂ ಹದಗೆಡುತ್ತದೆ'. ನಿಸರ್ಗ ಶಿಕ್ಷಣದಲ್ಲಿ ಈ ಮಾತು ರೂಸೋನ ಮಹಾಮಂತ್ರವೆನಿಸಿದೆ ಇಂದ್ರಿಯಗಳ ಹಾಗೂ ವಿವಿಧ ಶಕ್ತಿಗಳ ಸ್ವಯಂ ಪ್ರೇರಿತವಾದ ವಿಕಾಸವೇ ರೂಸೋನ ದೃಷ್ಟಿಯಲ್ಲಿ ನಿಸರ್ಗ ಶಿಕ್ಷಣವಾಗಿದೆ. ವಯಸ್ಕರಿಗಿಂತಲೂ ಮಕ್ಕಳ ಒಲವು ಶಕ್ತಿಗಳು ವಯೋಮಾನಕ್ಕೆ ಅನುಗುಣವಾಗಿ ಭಿನ್ನವಾಗಿರುವದು, ಹಾಗೂ ಬೆಳೆಯುವವು. ಮಗುವಿನ ಕೆಲವು ಶಕ್ತಿಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕು, ಮಗು-ಕಿರಿಯ ಮನುಷ್ಯನೆಂದು ಭಾವಿಸಿದೆ, ಮಗುವೆಂತಲೆ ಆತನ ಕೂಡ ವರ್ತಿಸಬೇಕು.— ಈ ವಿಚಾರವು ನೂತನ ಶಿಕ್ಷಣಕ್ಕೆ ರೂಸೋ ಕೊಟ್ಟಿರುವ ಹಿರಿದಾದ ಕಾಣಿಕೆಯಾಗಿದೆ. ಹನ್ನೆರಡು ವಯಸ್ಸಿನವರೆಗೆ —'ಮಗುವಿನ ದೇಹವನ್ನು ಬಲಗೊಳಿಸಬೇಕು, ಮನಸ್ಸನ್ನೂ ಬರಿದಾಗಿಡಬೇಕು.'— 'ಆತನಿಗೆ ಏನೂ ಹೇಳಿಕೊಡಬಾರದು'.ಎಂದು ಹೇಳುವಲ್ಲಿ, ಮಗುವಿನ ಒಲವಿಗೆ ವಿರುದ್ಧವಾಗಿ, ಶಕ್ತಿಗೆ ಮೀರಿ ಯಾವ ವಿಷಯವನ್ನೂ ಒತ್ತಾಯದಿಂದ ಕಲಿಸಬಾರದೆಂಬುವದು ರೂಸೋನ ಅಭಿಪ್ರಾಯವಾಗಿದೆ. 'ಶಿಕ್ಷಣದಲ್ಲಿ ಬಹಳ ಮಾತನಾಡುವದರಿಂದ, ಬಹಳ ಮಾತನಾಡುವ ವ್ಯಕ್ತಿಗಳನ್ನು ಮಾತ್ರ ನಾವು ನಿರ್ಮಿಸುತ್ತೇವೆ.' ರೂಸೋನು ಹೇಳಿಕೊಟ್ಟ ಈ ಮಾತೂ ಮನನೀಯವಾಗಿದೆ. ಎಲ್ಲವನ್ನೂ ಶಿಕ್ಷಕನು ತಾನೇ ಹೇಳಿಕೊಡದೆ, ಕಲಿಯುವವರ ಸ್ವಂತ ಪ್ರತಿಭೆ-ಪರಿಶ್ರಮಗಳಿಗೆ ಸಾಕಷ್ಟು ಅವಸರ ದೊರೆಯಬೇಕೆಂಬುವದು ಆತನ ಅಭಿಪ್ರಾಯ. ಪೂರ್ವಬಾಲ್ಯ ಶಿಕ್ಷಣವು ಪೂರ್ಣವಾಗಿ ಶಾರೀರಿಕವಾಗಿರಬೆಕೆಂಬುವದು ರೂಸೋನ ಇನ್ನೊಂದು ಮನನೀಯವಾದ ವಿಚಾರ. ಶಾರೀರಿಕ ಶಿಕ್ಷಣದಲ್ಲಿ ನಿರತನಾದ ಮಗುವಿನ ಸಹಜ ಪ್ರವೃತ್ತಿಗಳು, ಉದ್ರೇಕಗಳು ಅಡ್ಡದಾರಿಯನ್ನು ಹಿಡಿಯಲಾರವೆಂದು ಆತನ ಹೇಳಿಕೆ. 'ನಿರೋಗಿಯಾದ ಶರೀರಲ್ಲಿ ನಿರ್ದುಷ್ಟವಾದ

ಮನಸ್ಸು'— ಎಂಬ ಸೂತ್ರವು ರೂಸೋನ ಹೇಳಿಕೆಯನ್ನೇ ಸಮರ್ಥಿಸುವದು. ರೂಸೋನ 'ನಿಷೇಧಾತ್ಮಕ ಶಿಕ್ಷಣ'ದಲ್ಲಿ ಮಗುವಿನ ಬೌದ್ಧಿಕ ವಿಕಾಸಕ್ಕೆ ತಡೆ, ನೈತಿಕ ಜೀವನದ ಬಗ್ಗೆ ಅನಾಸ್ಥೆ. ಪೂರ್ವಬಾಲ್ಯದಲ್ಲಿ ಮಗುವಿನಲ್ಲಿರುವ ಪಶುವೃತ್ತಿ ಹಾಗೂ ಪಾರ್ಥಿವ ಶಕ್ತಿಗಳನ್ನು ಮಾತ್ರ ಪುಷ್ಟಿಗೊಳಿಸಬೇಕು— ಎಂದು ರೂಸೋ ಒಂದೆಡೆಗೆ ಹೇಳಿರುವನು. ಮತ್ತೊಂದು ಕಡೆಗೆ ರೂಸೋ ಈ ತಪ್ಪನ್ನು ತಿದ್ದಿಕೊಂಡಿರುವನು. ಈ ಅವಳಿಯಲ್ಲಿ ಮಗುವಿಗೆ ಕೊಡಬೇಕಾದುದು ಒಂದೇ ಜ್ಞಾನ—ಅಂದರೆ ತನ್ನ ಕರ್ತವ್ಯದ ತಿಳುವಳಿಕೆಯನ್ನು ತಪ್ಪು-ಒಪ್ಪುಗಳ ತಾರ್ಕಿಕ ವಿಧಾನದಿಂದ ಮಗುವಿಗೆ ತಂದು ಕೊಡಬಾರದು. ಈ ತರ್ಕವು ಮಗುವಿಗೆ ಸಂಬಂಧಿಸಿದ ವಿಷಯುವಲ್ಲ. ಈ ರೀತಿಯಾಗಿ ಪರಂಪರೆಯ ಶಿಕ್ಷಣ ವಿಧಾನವನ್ನು ರೂಸೋ ಬಲವಾಗಿ ಖಂಡಿಸಿರುವದರಿಂದಲೆ, ರೂಸೋನ ಯೋಜನೆಗೆ 'ನಿಷೇಧಾತ್ಮಕ ಶಿಕ್ಷಣ'ವೆಂಬ ಹೆಸರು ಬಂದಿದೆ ರೂಸೋನ ಈ ವಿಚಾರಗಳು ಅಂದು ಬಿತ್ತಿದ ಬೀಜಗಳಾಗಿ, ಇಂದಿನ ನೂತನ ಶಿಕ್ಷಣದಲ್ಲಿ ಬೆಳೆದು ಫಲದಾಯಕವಾಗಿವೆ. ನೂತನಶಿಕ್ಷಣದ ಗುರಿಯನ್ನು ರೀತಿ-ವಿಧಾನಗಳನ್ನು ರೂಪಿಸಲು ಇವೇ ವಿಚಾರಗಳೆ ಹಿನ್ನೆಲೆಯಾಗಿವೆ. ಶಿಕ್ಷಣದಲ್ಲಿ ನೂತನ ಪ್ರಯೋಗಗಳಿಗೆ ಪ್ರೇರಕ ಶಕ್ತಿಗಳಾಗಿವೆ. ಪ್ರಗತಿ-ಪರವಾದ ಶಿಕ್ಷಕರಿಗೆ ಸ್ಫೂರ್ತಿಯ ಸೆಲೆಗಳಾಗಿವೆ.

**ಪೆಸ್ಟೆಲೋಝಿ** —ರೂಸೋ, ಶಿಕ್ಷಣದಲ್ಲಿ ಉದಾತ್ತ ತತ್ವಗಳನ್ನು ಕಂಡು ಹಿಡಿದನು; ಪೆಸ್ಟೆಲೋಝಿ ಅವುಗಳನ್ನು ಕಾರ್ಯಗತಗೊಳಿಸಿದನು. ರೂಸೊ ದಾರ್ಶನಿಕ, ಪೆಸ್ಟೆಲೋಝಿ ನಿಜವಾದ ಶಿಕ್ಷಕ. ಶಿಕ್ಷಣ ಕಲೆಗೆ ಮಾನಸಶಾಸ್ತ್ರದ ಭದ್ರವಾದ ತಳಹದಿಯನ್ನು ಹಾಕಿ ಕೊಟ್ಟವನು, ಶಿಕ್ಷಣವನ್ನು ಮಾನಸಶಾಸ್ತ್ರದ ಚೌಕಟ್ಟಿನಲ್ಲಿ ಚಿರಸ್ಥಾಯಿಯಾಗಿ ಮಾಡಿದವನು, ಇತ್ಯಾದಿಯಾಗಿ ಪೆಸ್ಟೆಲೋಝಿಯ ಬಗ್ಗೆ ಪ್ರಶಂಸೆಯ ಮಾತುಗಳನ್ನು ಹೇಳುವದುಂಟು. ಈ ಪ್ರಶಂಶೆಯು ಯಥಾರ್ಥವಾಗಿದೆ. ಅನ್ವನಹಾರ್ಯವೆಂದು ತೋರುವ ರೂಸೋನ ಶಿಕ್ಷಣ ತತ್ವಗಳನ್ನು ಆತನು ಆಚರಿಸಿ ತೋರಿಸಿದನು, ಅವುಗಳನ್ನು ವ್ಯವಸ್ಥಿತ ಶಿಕ್ಷಣ ವಿಧಾನವಾಗಿ ಮಾರ್ಪಡಿಸಿದನು.

ಪೆಸ್ಟೆಲೋಝಿ ಶಿಕ್ಷಣರಂಗದಲ್ಲಿ ಪ್ರವೇಸಿದುದೂ ಒಂದು ಯೋಗಾಯೋಗವೆ. ೧೭೪೬ ರಲ್ಲಿ ಝೂರಿಚ್‌ನಗರದೊಳಗೆ ಆತನು ಹುಟ್ಟಿದನು. ಐದು ವರುಷದವನಿರುವಾಗಲೆ ಆತನ ತಂದೆ ತೀರಿಕೊಂಡನು. ತಾಯಿಯೆ ಆತನನ್ನು ಜೋಕೆಮಾಡಿದಳು. ಅವಳದು ತ್ಯಾಗಮಯ ಧಾರ್ಮಿಕ ಜೀವನ. ತಾಯಿಯ ಈ ಗುಣವನ್ನು ಪೆಸ್ಟೆಲೋಝಿಯು ಪಡೆದುಕೊಂಡಿದ್ದನು. ಈ ಗುಣದ ಬಲದಿಂದಲೆ ಅವನು ಶಾಲೆಯಲ್ಲಿ ಸಹಪಾಠಿಗಳ ಹಾಗೂ ಶಿಕ್ಷಕರ ಪ್ರೀತಿಯನ್ನು ಪಡೆದಿದ್ದನು. ಜಿನೇವ್ಹಾದ ಮ್ಯಾಜಿಸ್ಟ್ರೇಟನು ರೂಸೋನ ಗ್ರಂಥಗಳನ್ನು ಬಹಿಷ್ಕೃತವಾಗಿ ಮಾಡಿದ್ದನು ಆತನು ಪ್ರಕಟವಾಗಿ ನಿಷೇಧಿಸಿದನು; ಅದಕ್ಕಾಗಿ ಶಿಕ್ಷೆ ಅನುಭವಿಸಬೇಕಾಯಿತು. ರೂಸೋನ ಬಗ್ಗೆ ಇರುವ ಈ ಪ್ರೀತ್ಯಾದರಗಳು ಕೊನೆಯವರೆಗೂ ಆತನಲ್ಲಿ ಉಳಿದವು. ಧರ್ಮಶಾಸ್ತ್ರದ ಅಭ್ಯಾಸವನ್ನು ಬಿಟ್ಟುಕೊಟ್ಟು ಆತನು ಬೇಸಾಯವನ್ನು ಕೈಕೊಂಡನು. ಬೇಸಾಯದ ಕ್ಷೇತ್ರವಾದ ನ್ಯೂಹಾಫದಲ್ಲಿ ಮನೆ ಮಾಡಿಕೊಂಡು ಇರಹತ್ತಿದನು. ಬೇಸಾಯವು ಸಫಲವಾಗಲಿಲ್ಲ. ಶಿಕ್ಷಣದ ಮುಖಾಂತರ

ಜನತೆಯ ಸೇವೆಯನ್ನು ಮಾಡಲು ಆತನು ನಿರ್ಧರಿಸಿದನು. ಒಕ್ಕಲಿಗರ ಕೆಲವು ಮಕ್ಕಳನ್ನು ತೆಗೆದುಕೊಂಡು ಅವರಿಗಾಗಿ ಶಾಲೆಯನ್ನು ಪ್ರಾರಂಭಿಸಿದನು. ಶಾಲೆಯ ಕೆಲಸವು ಒಳ್ಳೆ ಯಶಸ್ವಿಯಾಗಿ ನಡೆಯಿತು. ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಾಯಿತು. ಹಣದ ಕೊರತೆಯಿಂದ ಈ ಸಂಸ್ಥೆಯನ್ನು ನಿಲ್ಲಿಸಬೇಕಾಯಿತು. ಪೆಸ್ಟೆಲೋಝಿ ಅತೀವ ಬಡತನದಿಂದ ಕಾಲಕಳೆಯಬೇಕಾಯಿತು. ಆತನು ಗ್ರಂಥರಚನೆಯನ್ನು ಕೈಕೊಂಡನು. 'ಲಿಯೊನಾರ್ಡ ಮತ್ತು ಗಟ್ರೂರ್ಡ' ಎಂಬ ಪುಸ್ತಕದಲ್ಲಿ ಶಿಕ್ಷಣದ ಬಗ್ಗೆ ತನ್ನ ವಿಚಾರಗಳನ್ನು ಆತನು ಜನತೆಯ ಮುಂದಿಟ್ಟನು. ಈ ಪುಸ್ತಕವು ಒಳ್ಳೇ ಲೋಕಪ್ರಿಯವಾಯಿತು. ಶಿಕ್ಷಣದಬಗ್ಗೆ ಆತನಿಗಿರುವ ಆಸಕ್ತಿಯು ಕಡಿಮೆಯಾಗಿರಲಿಲ್ಲ. ಅಲ್ಲಲ್ಲಿ ಶಾಲೆಗಳನ್ನು ತೆರೆದನು. ಅಂದಿನ ಬದಲಾಗುವ ಪರಿಸ್ಥಿತಿಯ ಮೂಲಕ ಒಂದೆಡೆಗೆ ಸ್ಥಿರವಾಗಿ ನಿಲ್ಲುವದು ಆತನಿಗೆ ಸಾಧ್ಯವಾಗಲಿಲ್ಲ. ಬರ್ಗಡಾರ್ಫ ಹಾಗೂ ವ್ಹರ್ಡೂನದಲ್ಲಿ ತೆರೆದ ಶಾಲೆಗಳು ಜನರ ಮೆಚ್ಚುಗೆ ಪಡೆದವು. ಶಿಕ್ಷಕರ ತರಬೇತಿಯ ವರ್ಗವನ್ನೂ ಅವುಗಳಿಗೆ ಜೋಡಿಸಲಾಯಿತು. ದೂರದ ಭಾಗಗಳಿಂದ ವಿದ್ಯಾರ್ಥಿಗಳು ಅಲ್ಲಿಗೆ ಬರತೊಡಗಿದರು. ಶಿಕ್ಷಣ ಕಲೆಯನ್ನು ಅಭ್ಯಸಿಸಲು ಹರ್ಬಾರ್ಟ, ಫ್ರೋಬೆಲ್ ಮುಂತಾದ ಶಿಕ್ಷಣ ಪ್ರೇಮಿಗಳನ್ನು ಆತನ ಸಂಸ್ಥೆಗಳು ಬರಮಾಡಿಕೊಂಡವು. ೧೮೨೭ರಲ್ಲಿ ತನ್ನ ಪ್ರೀತಿಯ ನಿವಾಸವಾದ 'ನ್ಯೂಹಾಲ್ಫದಲ್ಲಿ ಪೆಸ್ಟೆಲೋಝಿ' ತೀರಿಕೊಂಡನು.

ಆಧುನಿಕ ಶಿಕ್ಷಣವು ಪೆಸ್ಟೆಲೋಝಿಯು ಬಿತ್ತಿದ ಬೀಜಗಳಿಂದಲೆ ಅಂಕುರಿಸಿತೆಂದು ಹೇಳಿದರೆ ತಪ್ಪಾಗದು. ಅಂದಿನ ಶಿಕ್ಷಣ-ಕ್ರಮವು ತುಂಬಾ ಸದೋಷವಾಗಿತ್ತು. ಅರ್ಥ ತಿಳಿಯದ ವಿಷಯಗಳನ್ನು ಯಾಂತ್ರಿಕ ವಿಧಾನಗಳಿಂದ 'ಗಳಿಪಾಠ' ಮಾಡಿಸುವದೆ ಶಿಕ್ಷಣದ ವಿಧಾನವಾಗಿತ್ತು. ಅರ್ಥ ತಿಳಿದುಕೊಂಡು ವಿಷಯವನ್ನು ಆತ್ಮಸಾತ್ ಮಾಡಿಕೊಳ್ಳುವ ದೃಷ್ಟಿಯೆ ಇರಲಿಲ್ಲ. ಅನುಕರಣದಿಂದ, ಶಿಕ್ಷಕನು 'ನುಡಿದಂತೆ ನುಡಿದು' ಕಂಠಪಾಠ ಮಾಡುವದೊಂದೆ ವಿದ್ಯಾರ್ಥಿಗಳ ಕಾರ್ಯ. ಈ ಯಾಂತ್ರಿಕ ಜಡ ವಿಧಾನದಿಂದ ಮಕ್ಕಳಿಗಾಗುವ ಅನ್ಯಾಯವನ್ನೂ ರೂಸೋ ಎತ್ತಿ ತೋರಿಸಿದ್ದನು. ಪೆಸ್ಟೆಲೋಝಿಗೂ ಅದರ ಪ್ರತ್ಯಯ ಉಂಟಾಗಿತ್ತು. ಮಕ್ಕಳ ವಯೋಮಾನ ಬಲವು ಶಕ್ತಿಗಳಿಗೆ ಹೊಂದಿಕೊಳ್ಳುವಂತೆ ಮಾಡಿ, 'ಶಿಕ್ಷಣವು ಮಾನಸ-ಶಾಸ್ತ್ರಾನುವರ್ತಿಯಾಗುವಂತೆ' ಮಾಡುವದೆ ತನ್ನ ಉದ್ದೇಶವೆಂದು ಪೆಸ್ಟೆಲೋಝಿ ಸಾರಿದನು. ಶಿಕ್ಷಣವು ನಿಸರ್ಗವನ್ನು– ಮಾನವನ ಮೂಲ ಪ್ರವೃತ್ತಿಗಳನ್ನು ಅನುಸರಿಸಬೇಕೆಂಬುವದಕ್ಕೆ ಆತನ ಒಪ್ಪಿಗೆಯಿತ್ತು. ಆದರೆ ಅವುಗಳನ್ನು ಬೇಕಾದ ಹಾಗೆ, ಅವ್ಯವಸ್ಥಿತವಾಗಿ ಬೆಳೆಯಗೊಡಬಾರದೆಂಬುದು ಆತನ ಅಭಿಪ್ರಾಯ. ಮಾನವನ ಪ್ರಕೃತಿಯಲ್ಲಿ 'ಪಶುತ್ವ'ವಿರುವಂತೆ, ದೈವತ್ವ'ವೂ ಇರುವದು. ಬೌದ್ಧಿಕ ಹಾಗೂ ನೈತಿಕ ವಿಕಾಸದಲ್ಲಿ ಈ ದೈವತ್ವವು ಪ್ರಕಟವಾಗುವದೆಂದು ಆತನ ಹೇಳಿಕೆ. ಮಗು ನೈತಿಕವಾಗಿ, ಧಾರ್ಮಿಕವಾಗಿ ಹಾಗೂ ಸಮಾಜೋಪಕಾರಿಯಾಗಿ ಬೆಳೆಯಬೇಕೆಂಬುದು ಆತನ ಆಕಾಂಕ್ಷೆ. ಅಂತೆಯೆ, ವೃತ್ತಿ ಶಿಕ್ಷಣದಿಂದಲೆ ಮಗುವಿನ ಶಿಕ್ಷಣಕ್ಕೆ ಪೂರ್ಣತೆಯು ಪ್ರಾಪ್ತವಾಗುವದೆಂದು ಆತನು ಹೇಳಿರುವದು.

ಸ್ವಂತ ನಿರೀಕ್ಷಣೆಯಿಂದಲೆ ಜ್ಞಾನವನ್ನು ಪಡೆಯಬೇಕೆಂಬುವದು ಪೆಸ್ಟೆಲೋಝಿಯ ಸಿದ್ಧಾಂತ. ಈ ತತ್ವಕ್ಕೆ 'ಆನ್‌ಶಾಂಗ' ಎಂದು ಕರೆಯುವದುಂಟು. ಅಂದಿನ ಶಿಕ್ಷಣ

ಪರಂಪರೆಯ ನಿರ್ಜೀವ ವಿಧಾನದಿಂದ ಇದು ವಿಭಿನ್ನವಾಗಿದೆ. ಸಂವೇದನೆ–ಅವಲೋಕನ–ಎಲ್ಲ ಜ್ಞಾನೇಂದ್ರಿಯಗಳಿಂದ ಪಡೆಯುವ ಅನುಭವವನ್ನು ಒಳಗೊಂಡಿರುವದು. ಜ್ಞಾನ ಪ್ರಾಪ್ತಿಗೆ–ಶಿಕ್ಷಣಕ್ಕೆ–ಈ ಅವಲೋಕನವೆ ತಳಹದಿಯೆನಿಸುವದು. ಸ್ವಾನುಭವದಿಂದ, ಅಂತಃಪ್ರೇರಣೆಯಿಂದಾಗಿ, ಸಾಕ್ಷಾತ್ತಾಗಿ ಪಡೆಯುವ ಜ್ಞಾನ, ಪ್ರೀತಿ, ಶ್ರದ್ಧೆಗಳಿಗೆ ಪೆಸ್ಟಲೋಝಿಯು ಈ ನೂತನ ಹೆಸರನ್ನು ಕೊಟ್ಟಿರುವನು. ವಸ್ತುವಿನ ಪ್ರತ್ಯಕ್ಷ ಪರಿಚಯವೆ ಜ್ಞಾನದ ಸಾಧನವೆಂದು ಆತನು ಹೇಳಿರುವನು.

ಶಿಕ್ಷಣದ ಈ ನೂತನ ವಿಧಾನವನ್ನು ತನ್ನ ಎರಡು ವರುಷದ ಮಗುವಿನಿಂದಲೇ ಮೊದಲು ಮಾಡಿದನು. ೨೦–೩೦ ಅನಾಥರಾದ ಬಡ ಒಕ್ಕಲಿಗರ ಮಕ್ಕಳಿಗೆ ಅನ್ನ ಬಟ್ಟೆ ಕೊಟ್ಟು ತನ್ನ ಶಿಕ್ಷಣಪದ್ಧತಿಯ ಪ್ರಯೋಗ ನಡೆಸಿದನು. ಈ ಶಿಕ್ಷಣದಲ್ಲಿ ಹುಡುಗರಿಗೆ ಬೇಸಾಯ–ತೋಟಗಾರಿಕೆಗಳಲ್ಲಿ, ಹಾಗೂ ಹುಡುಗಿಯರಿಗೆ ಹೊಲಿಗೆ, ಗೃಹಕೃತ್ಯಗಳಲ್ಲಿ ವೃತ್ತಿ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಹವೆಯು ಪ್ರತಿಕೂಲವಿದ್ದರೆ, ಇಬ್ಬರೂ ನೂಲು ಏಕೆ–ನೇಕಾರಿಕೆಗಳಲ್ಲಿ ತೊಡಗುತ್ತಿದ್ದರು. 'ಲಿಯೋನಾರ್ಡ ಮತ್ತು ಗಟ್ರೂಡ', ಎಂಬ ತನ್ನ ಶೈಕ್ಷಣಿಕ ಗ್ರಂಥದಲ್ಲಿ– ಸದ್ಗುಣಿಯಾದ ಗಟ್ರೂಡಳು ಕುಡುಕನೂ ದುರಾಚಾರಿಯೂ ಆದ ತನ್ನ ಪತಿ–ಲಿಯೋನಾರ್ಡನನ್ನು ಹೇಗೆ ಒಳ್ಳೇ ಹಾದಿಗೆ ತಂದಳೆಂಬುದೂ, ತನ್ನ ಮಕ್ಕಳಿಗೆ ತಾನೇ ಹೇಗೆ ಒಳ್ಳೇ ಶಿಕ್ಷಣ ಕೊಟ್ಟಳೆಂಬುದೂ, ಅವಳ ಮೇಲ್ಪಂಕ್ತಿಯು ಸುತ್ತಲಿನ ಸಮಾಜವನ್ನು ಸದ್ವರ್ತನೆಯಲ್ಲಿ ಹೇಗೆ ಪರಿವರ್ತಿಸಿತೆಂಬುದೂ ಒಳ್ಳೇ ಮಾರ್ಮಿಕವಾಗಿ ವರ್ಣಿತವಾಗಿದೆ. ಮಾತೃಭಕ್ತಿಯು ದೈವಭಕ್ತಿಯಲ್ಲಿ ಪರಿಣತಗೊಳ್ಳುವದೆಂಬುದೂ ಅಲ್ಲಿ ತೋರಿಸಲ್ಪಟ್ಟಿದೆ.

ಪೆಸ್ಟಲೋಝಿಯು ರೂಸೋನಿಂದ ಪ್ರಭಾವಿತನಾಗಿದ್ದನು, ಆದರೆ ಆತನ ವಿಚಾರಗಳ ಅಂಧಾನುಕರಣವನ್ನು ಮಾಡಿರುವದಿಲ್ಲ. ರೂಸೋ 'ಮೂರ್ತಿ ಭಂಜಕ'. ರೂಸೋನ ವಿಚಾರಗಳು 'ನಿಷೇಧಾತ್ಮಕ'ವಾಗಿವೆ. 'ಹೀಗಿರಬಾರದು', ಎಂದು ದೋಷಗಳನ್ನು ಎತ್ತಿ ತೋರಿಸುವದರಲ್ಲಿ ಆತನದು ಎತ್ತಿದ ಕೈ. ಪೆಸ್ಟಲೋಝಿಯ ವಿಚಾರಗಳು ವಿಧಾಯಕ. ತನ್ನ ವಿಧಾನಗಳು ವ್ಯವಹಾರ್ಯವೆಂದು ಆತನು ಪ್ರಯೋಗಗಳಿಂದ ಸಿದ್ಧಗೊಳಿಸಿದನು.

(ಗ) ಶಿಕ್ಷಣವು ಒಂದು ವಿಕಾಸಕ್ರಮ; ಬೀಜದಿಂದ ಗಿಡವು ಬೆಳೆಯುವಂತೆ. ಮಗುವಿನ ಸಹಜಶಕ್ತಿಗಳು ಬೀಜದೋಪಾದಿಯಲ್ಲಿರುವವು. ಅವುಗಳ ವಿಕಾಸವು ವಯೋಮಾನಗಳಿಗೆ ಅನುಗುಣವಾಗಿ ಕ್ರಮಬದ್ಧವಾಗಿ ನಡೆಯುವದು. ಮಗುವಿನ ಒಳವು ಶಕ್ತಿಗಳ ನೈಸರ್ಗಿಕ ವಿಕಾಸದ ಮೆಟ್ಟಲುಗಳಿಗೆ ಅನುಗುಣವಾಗಿ ಆತನ ಶಿಕ್ಷಣವು ಸಾಗಬೇಕು. ಅವಿಕಾಸಿತ ಶಕ್ತಿಗಳುಳ್ಳ ಮಗುವನ್ನು ವಿಕಾಸಿತ ಶಕ್ತಿಯುಳ್ಳ ಪ್ರೌಢನಂತೆ ಭಾವಿಸುವದು ಅನರ್ಥಕಾರಿಯಾಗುವದು. ಶಿಕ್ಷಣಕ್ಕೆ ಮೊದಲು ಮಗುವಿನ ವಯೋಭೂಮಿಕೆಯನ್ನು ಚನ್ನಾಗಿ ತಿಳಿದುಕೊಳ್ಳಬೇಕೆಂಬುದನ್ನು ಪೆಸ್ಟಲೋಝಿಯು ಮೂಲವಾಗಿ ಪ್ರತಿಪಾದಿಸುವನು. ಶಿಕ್ಷಣದ ಮುನ್ನಡೆಗೆ ಆತನು ನೀಡಿರುವ ಹಿರಿದಾದ ಕಾಣಿಕೆಯಿದು. (ಅ) ಕಲಿಸುವ ವಿಷಯದ ಅಂಗಗಳನ್ನು 'ಬಿಡಿಬಿಡಿ'ಯಾಗಿ ಮಾಡಿಕೊಡಬೇಕು. ಮಕ್ಕಳ ಮನೋವಿಕಾಸದ ಮೆಟ್ಟಲುಗಳಿಗೆ ಅನುಗುಣವಾಗಿ–ಸುಲಭತೆಯಿಂದ ಕಠಿಣತೆಯು

ಕಡೆಗೆ—ವಿಷಯ-ಪ್ರತಿಪಾದನೆಯನ್ನು ಹಂತಹಂತವಾಗಿ ಮಾಡಬೇಕು. ಪ್ರತಿಯೊಂದು ಮೆಟ್ಟಿಲು ಸ್ವಯಂಪೂರ್ಣವಾಗಿರಬೇಕು. (೩) ಮೊದಲು ಮೌಖಿಕ, ನಂತರ ಲಿಖಿತ.— ಇದು ಭಾಷಾ ಶಿಕ್ಷಣದ ವಿಧಾನವಾಗಬೇಕು. 'ವಸ್ತುದರ್ಶನ' ದಿಂದ 'ವಿಚಾರ ಜನನ'ವಾಗುವದು. ವಿಚಾರವು 'ಶಬ್ದ-ನಿರೂಪಣ'ಕ್ಕೆ ಮಾರ್ಗ ಮಾಡಿಕೊಡುವದು. ಮೊದಲು ವಸ್ತುವಾಚಕ, ಆಮೇಲೆ ಭಾವವಾಚಕಗಳು. (೪) ಸಹಜ ಪ್ರವೃತ್ತಿಗಳನ್ನು ಉದಾತ್ತಗೊಳಿಸುವದೆ ನೈತಿಕ ಶಿಕ್ಷಣ. (೫) ಶಿಸ್ತು ಸೌಮ್ಯವಾಗಿರಬೇಕು, ಸ್ವಯಂಪ್ರೇರಿತವಾಗಿರಬೇಕು, ಪ್ರೀತಿಯಿಂದಲೆ ಅದು ಬೆಳೆಯಬೇಕು. (೬) ಶಿಕ್ಷಣವು ಎಲ್ಲ ಮಕ್ಕಳ ಜನ್ಮಸಿದ್ಧ ಹಕ್ಕು; ಎಲ್ಲ ಮಕ್ಕಳಿಗೂ ಅದು ಸಮಾನವಾಗಿ ದೊರೆಯಬೇಕು. 'ಮೂರಂತಸ್ತಿನ ಮನೆಯಲ್ಲಿ' ದೊರೆಯುವ ಶಿಕ್ಷಣವು 'ಒಂದಸ್ತಿನ' ಗುಡಿಸಲಿನಲ್ಲಿಯೂ ದೊರೆಯುವಂತಾಗಬೇಕು-ಇದು ಪೆಸ್ಟೆಲೋಝಿಯ ಮನೀಷೆ. (೭) ಜ್ಞಾನವು ಶಕ್ತಿಯಾಗಬೇಕು, ಕ್ರಿಯಾಶೀಲವಾಗಬೇಕು. ಜೀವನದಲ್ಲಿ ಅದರ ಉಪಯೋಗವಾಗಬೇಕು. (೮) ವೃತ್ತಿಶಿಕ್ಷಣದೊಡನೆ ಸಾಮಾನ್ಯ ಶಿಕ್ಷಣವನ್ನು ಸಮನ್ವಿತಗೊಳಿಸಬೇಕು. ಜೀವನೋಪಯೋಗಿಯಾದ ವೃತ್ತಿ ಶಿಕ್ಷಣದಿಂದಲೆ ಶಿಕ್ಷಣಕ್ಕೆ ಪೂರ್ಣತೆಬರುವದು.

ರೂಸೋನಿಂದ ಸ್ಫೂರ್ತಿಪಡೆದು, ಭೂತದಯೆಯಿಂದ ಪ್ರೇರಿತನಾಗಿ ಪೆಸ್ಟೆಲೋಝಿ ಶಿಕ್ಷಣ ರಂಗವನ್ನು ಪ್ರವೇಶಿಸಿದನು. ಸ್ವಾನುಭವದಿಂದ ಕಂಡುಹಿಡಿದ ತತ್ವಗಳನ್ನು ಪ್ರಯೋಗದ ಒರೆಗಲ್ಲಿನಿಂದ ಪ್ರಮಾಣಿತಗೊಳಿಸಿದನು. ಶಿಕ್ಷಣದ ಪ್ರಗತಿಗೆ ಆತನು ನೀಡಿದ ಸಹಾಯವು ಅಧಿಕವಾಗಿದೆ, ಅನೇಕ ಮುಖವಾಗಿದೆ. ಅಂತೆಯೆ— 'ರೂಸೊ ಮಕ್ಕಳ ಸ್ವರ್ಗವನ್ನು ಶೋಧಿಸಿದನು; ಪೆಸ್ಟೆಲೋಝಿಯು ಆ ಸ್ವರ್ಗಕ್ಕೆ ಸೇತುವೆಯನ್ನು ನಿರ್ಮಿಸಿದನು; ಹರ್ಬಾರ್ಟನು ಆ ಸೇತುವೆಯ ಐದು ಕಮಾನುಗಳನ್ನು ರಚಿಸಿದನು....' ಎಂದು ಹೇಳಿರುವದು ಯಥಾರ್ಥವಾಗಿದೆ.

**ಫ್ರೋಬೆಲ್** :— ರೂಸೋನಿಂದ ಸ್ಫೂರ್ತಿ ಪಡೆದು, ಪೆಸ್ಟೆಲೋಝಿಯ ಶೈಕ್ಷಣಿಕ ಪ್ರಯೋಗಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿ, ಶಿಕ್ಷಣದ ಮುನ್ನಡೆಗಾಗಿ ಫ್ರೋಬೆಲ್‌ನು ಮಹತ್ವದ ಸೇವೆಯನ್ನು ಸಲ್ಲಿಸಿರುವನು. ಜರ್ಮನಿಯ ಕಾಡಿನ ಒಂದು ಚಿಕ್ಕಹಳಿಯಲ್ಲಿ—, ಓಬರವಿಸ್ ಬ್ಯಾಶ್ ಎಂಬಲ್ಲಿ ೧೭೮೨ರಲ್ಲಿ ಫ್ರೋಬೆಲ್‌ನು ಹುಟ್ಟಿದನು. ಆತನು ಕೂಸಿರುವಾಗಲೆ ತಾಯಿಯು ತೀರಿಕೊಂಡಳು. ತಂದೆ ಎರಡನೆ ಮದುವೆ ಮಾಡಿಕೊಂಡನು. ಬಾಲ್ಯದಲ್ಲಿ ಮಲತಾಯಿಯ ಅಪ್ರೀತಿ, ತಂದೆಯ ಅನಾಸ್ಥೆ ಎರಡನ್ನೂ ಆತನು ಅನುಭವಿಸಬೇಕಾಯಿತು. ತಂದೆಯ ತೋಟದ ಕೆಲಸದಲ್ಲಿ ಬಾಲ್ಯದಲ್ಲಿಯೆ ಫ್ರೋಬೆಲ್‌ನು ನೆರವಾಗುತ್ತಿದ್ದನು. ಆಗಲೆ ನಿಸರ್ಗಪ್ರೇಮವು ಆತನಲ್ಲಿ ಮೊಳೆತಿತು. ಮುಂದೆ ಅರಣ್ಯಾಧಿಕಾರಿಯ ಕೈಕೆಳಗೆ ಕೆಲಸಮಾಡುವಾಗ್ಗೆ ನಿಸರ್ಗನಿರೀಕ್ಷಣೆಗೆ, ನಿಸರ್ಗೋಪಾಸನೆಗೆ ಹೆಚ್ಚಿನ ಅವಕಾಶದೊರೆತಿತು. ಆತನಲ್ಲಿ ಜ್ಞಾನದ ಹಂಬಲವು ಹಿರಿದಾಗಿತ್ತು. ಆದರೆ ಆದಕ್ಕೆ ಬಡತನವು ಕಾಲ್ತೊಡಕಾಗುತ್ತಿತ್ತು. ಪೆಸ್ಟೆಲೋಝಿ ಮಾದರಿಯ ಶಾಲೆಯೊಂದರಲ್ಲಿ ಶಿಕ್ಷಕನ ಕೆಲಸವು ಆತನಿಗೆ ದೊರೆತಿತು. ಈ ಶಿಕ್ಷಕವೃತ್ತಿಗೆ ಹೆಚ್ಚು ಜ್ಞಾನದ ಅಗತ್ಯವು ಆತನಿಗೆ ಅನಿಸಿತು. ಅದಕ್ಕಾಗಿ ಅಲೆದಾಡಿದನು. ಕೊನೆಗೆ ತನ್ನ ಸ್ನೇಹಿತರ ಜೊತೆಯಲ್ಲಿ

ಕೇಲ್ಹೌ ಯೆಂಬಲ್ಲಿ ಒಂದು ನೂತನ ಶಿಕ್ಷಣ ಸಂಸ್ಥೆಯನ್ನು ಆತನು ಪ್ರಾರಂಭಿಸಿದನು. ಆತನ ಶಿಕ್ಷಣ ಕಾರ್ಯವು ಇಲ್ಲಿ ಯಶಸ್ವಿಯಾಗಿ ನಡೆಯಿತು. ಆದರೆ ಸ್ಥಳಿಕ ವಿರೋಧಕ್ಕಾಗಿ ಆ ಸ್ಥಳವನ್ನು ಆತನು ಬಿಡಬೇಕಾಯಿತು. ಸ್ವಿಝರ್ಲಂಡ ಸರಕಾರವು ಆತನಿಗೆ ಆಶ್ರಯ ಕೊಟ್ಟಿತು. ಪತ್ನಿಯ ಅನಾರೋಗ್ಯಕ್ಕಾಗಿ ಆತನು ಜರ್ಮನಿಗೆ ಮರಳಿ ಬಂದನು. ಜರ್ಮನಿಯ ಬ್ಲ್ಯಾಂಕನ್ ಬರ್ಗಯೆಂಬ ಹಳ್ಳಿಯಲ್ಲಿ ಫ್ರೋಬೆಲ್‌ನು ತನ್ನ ಮೊಟ್ಟ ಮೊದಲಿನ ' ಕಿಂಡರ ಗಾರ್ಟನ್ ' — ಬಾಲೋದ್ಯಾನ ಮಂದಿರವನ್ನು ೧೮೩೭ ರಲ್ಲಿ ಪ್ರಾರಂಭಿಸಿದನು ಆತನ ಅಣ್ಣನ ಮಗನೊಬ್ಬನು ಸಮಾಜವಾದವನ್ನು ಪ್ರತಿಪಾದಿಸುವ ಪುಸ್ತಕಬರೆದಿದ್ದನು. ಈ ಪುಸ್ತಕದಲ್ಲಿ ತನ್ನ ಅಂಗವು ಎಷ್ಟೂ ಇಲ್ಲವೆಂದು ಫ್ರೋಬೆಲ್‌ನು ಸಿದ್ಧಮಾಡಿಕೊಟ್ಟರೂ, ಪ್ರಸಿಯಾ ಸರಕಾರವು ನಂಬಲಿಲ್ಲ. ಪ್ರಸಿಯಾದಲ್ಲಿಯ ಎಲ್ಲ ಕಿಂಡರ ಗಾರ್ಟನ್ ಶಾಲೆಗಳೂ ಬಂದುಮಾಡಲ್ಪಟ್ಟವು. ಈ ಮಾನಸಿಕ ಆಘಾತದಿಂದಲೆ ಫ್ರೋಬೆಲ್‌ನು ೧೮೫೨ ರಲ್ಲಿ ತೀರಿಕೊಂಡನು.

ನಿಸರ್ಗದ ನಿಕಟವಾದ ಸಹವಾಸದಲ್ಲಿ, ಫ್ರೋಬೆಲ್‌ನು ಜೀವನದ ಮಹಾತತ್ವನ್ನೊಂದನ್ನು ಗುರುತಿಸಿದನು. ಅಣುರೇಣುತೃಣಕಾಷ್ಠಗಳಿಂದ ಮೊದಲುಗೊಂಡು— 'ಜೀವ ಭಾವ ಪ್ರಸರದಲ್ಲಿ ಪಸರಿಸಿದ ' ಪರತತ್ವವು, ಆದಿಶಕ್ತಿಯು ' ಏಕಮೇವ ' ಆಗಿರುವದು. ಸೃಷ್ಟಿಯ ಎಲ್ಲ ಅಂಗಗಳಲ್ಲಿಯೂ ಈ ಆದಿಶಕ್ತಿಯ ಅಂಶವಿದೆ, ದೈವಿಕವಾದ ತೇಜಸ್ಸಿದೆ. ಎಲ್ಲ ವಸ್ತುಗಳ ಇರುವಿಕೆಗೆ, ಐಕ್ಯತೆಗೆ ಈ ಆದಿತತ್ವವೆ ಆಧಾರವಾಗಿದೆ '— ಈ ಮೂಲ ತತ್ವವನ್ನು ಫ್ರೋಬೆಲ್‌ನು ಕಂಡುಹಿಡಿದನು. ಚಿಕ್ಕಮಕ್ಕಳಲ್ಲಿ ಅಡಗಿದ ಆದಿ ಶಕ್ತಿಯ ಅಂಶವನ್ನು ಪ್ರಕಟಗೊಳಿಸುವದು, ಚೈತನ್ಯ ಸ್ವರೂಪಿಯಾದ ಮಗುವಿನಲ್ಲಿ ದೈವಿಕ ತೇಜಸ್ಸಿನ ಕಿಡಿಯನ್ನು ಹೊತ್ತಿಸಿ ಉಜ್ವಲಗೊಳಿಸುವದು ಶಿಕ್ಷಣದ ಕಾರ್ಯವೆಂದು ಫ್ರೋಬೆಲ್‌ನು ಹೇಳಿರುವನು. • ಈ ತತ್ವಗಳ ಮೂರ್ತಿಸ್ವರೂಪವೆ ಕಿಂಡರಗಾರ್ಟನ್ ಸಂಸ್ಥೆಯಾಗಿದೆ. ಮನೆ ವಿಸ್ತರಿಸಿ ಶಾಲೆಯಲ್ಲಿ, ಸಮಾಜ ವಿಸ್ತರಿಸಿ ಪ್ರಪಂಚದಲ್ಲಿ—ಹೀಗೆ ಅಧಿಕಾಧಿಕ ಐಕ್ಯತೆಯನ್ನು ಸಾಧಿಸಿ ಆದಿತತ್ವದಲ್ಲಿ ಮಗುವಿಗೆ ಐಕ್ಯದ ಅನುಸಂಧಾನ ಮಾಡಿ ಕೊಡುವದೇ ಶಿಕ್ಷಣವೆಂದು ಆತನ ಸಿದ್ಧಾಂತವಾಗಿದೆ.

ಫ್ರೋಬೆಲ್‌ನ ಪದ್ಧತಿಯು ಸಾಮಾನ್ಯರ ಬುದ್ಧಿಗೆ ನಿಲುಕದಷ್ಟು ತಾತ್ವಿಕವಾಗಿ ತೋರಬಹುದು. ಆದರೆ ಶಿಕ್ಷಣದಲ್ಲಿ ಶೈಶವದ ಮಹತಿಯನ್ನು ಆತನು ಮೊದಲು ಜನತೆಯ ನಿದರ್ಶನಕ್ಕೆ ತಂದನು. ಶೈಶವವು ಮುಂದಿನ ಜೀವನದ ತಳಹದಿಯಾಗಿದೆ. ವ್ಯಕ್ತಿಯ ' ಸ್ವ ' – ಭಾವದ ರೂಪರೇಷೆಯು ಈ ಅವಧಿಯಲ್ಲಿಯೆ ನಿರ್ಣೀತವಾಗುವದು. ಇಂದು ಬಿತ್ತಿದ ಬೀಜಗಳು,— ಗುಣಗಳೆ ಆಗಿರಲಿ, ವಿಚಾರಗಳೆ ಆಗಿರಲಿ, ಕೃತಿಗಳೆ ಆಗಿರಲಿ,—ಪ್ರಬುದ್ಧ ಜೀವನದಲ್ಲಿ ಫಲಿಸುವವು.

ಚಿಕ್ಕಮಕ್ಕಳ ಮೊದಲು ಶಿಕ್ಷಣಕ್ಕೆ ಫ್ರೋಬೆಲ್‌ನು ಕೊಟ್ಟಿರುವ ' ಬಾಲೋದ್ಯಾನ ' ವೆಂಬ ಹೆಸರು ಸಾರ್ಥಕವಾದುದು. ಬಾಲೋದ್ಯಾನವು ಒಂದು ಶಿಕ್ಷಣ ಸಂಸ್ಥೆಯೂ ಆಗಿಲ್ಲ ; ಇಲ್ಲವೆ ಕಟ್ಟುನಿಟ್ಟುಗಳಿಂದ ಕೂಡಿದ ಒಂದು ಶಿಕ್ಷಣ ಪದ್ಧತಿಯೂ ಆಗಿರುವದಿಲ್ಲ. ಬಾಲೋದ್ಯಾನವು ಬೆಳೆಯುವ ಮಗುವಿನಲ್ಲಿ ಸ್ವಾಭಾವಿಕವಾಗಿ ನಡೆಯುವ

ಆತ್ಮಪ್ರಕಾಶವದ ಪೂರ್ವಸಿದ್ಧತೆ, ಇಲ್ಲವೆ ಆತ್ಮಸಂಸ್ಕಾರದ ಪೂರ್ವಸಿದ್ಧತೆ, ಇಲ್ಲವೆ ಆತ್ಮಸಂಸ್ಕಾರದ ಪೂರ್ವ ಪೀಠಿಕೆ ಮಾತ್ರ. ಚಿಕ್ಕಮಕ್ಕಳು ತೋಟದಲ್ಲಿ ಬೆಳೆಯುವ ಸಸಿಗಳಂತೆ. ಶಿಕ್ಷಕನು ತೋಟಗನು. ಬೆಳೆಯುವ ಸಸಿಗೆ ನೀರು–ನೆಲ–ಬೆಳಕುಗಳ ಅನುಕೂಲತೆಯೂ ಬೇಕು ಕಸಕೀಟಕಗಳಿಂದಾಗುವ ಕಂಟಕವೂ ದೂರವಾಗಬೇಕು. ಇವೆರಡನ್ನೂ ನೋಡಿಕೊಳ್ಳುವದು ತೋಟಗನ ಕೆಲಸ. ಶಿಕ್ಷಕನಾದರೂ ಚಿಕ್ಕಮಕ್ಕಳಲ್ಲಿರುವ ಸುಪ್ತ–ಶಕ್ತಿಗಳು ಸ್ಫುಟವಾಗಲು ಸಮರ್ಪಕವಾದ ಸನ್ನಿವೇಶಗಳನ್ನು ಒದಗಿಸಬೇಕು–ಆತ್ಮವಿಕಾಸಕ್ಕೆ ಬಾಧೆ ತರುವ ವಿರೋಧಕ ಶಕ್ತಿಗಳನ್ನು ತೆಗೆದುಹಾಕಬೇಕು. ವಯೋಮಾನಕ್ಕೆ ಅನುಗುಣವಾಗಿ, ಮಕ್ಕಳ ನೈಸರ್ಗಿಕ ಶಕ್ತಿಗಳ ಸಹಜವಾದ, ಸಮರಸವಾದ ಬೆಳವಣಿಗೆಯೆ ಶಿಕ್ಷಣ. ಇದಕ್ಕೆ ಅನುವು ಮಾಡಿಕೊಡುವದೆ ಶಿಕ್ಷಕನ ಕಾರ್ಯ. ಈ ಬೆಳವಣಿಗೆಯಲ್ಲಿ ಒಂದು ಸಂಗತಿಯು ಮಹತ್ವದ್ದಾಗಿದೆ. ಮಗುವಿನ ಎಲ್ಲ ವಯೋವಿಭಾಗಗಳಲ್ಲಿಯೂ ಇದು ಅಪ್ರತಿಹತವಾಗಿ ಮುಂದರಿಯುವದು. ಗಿಡದ ಬೆಳವಣಿಗೆಯೆಂದರೆ—ಟೊಂಗೆ ಇಲ್ಲವೆ ಬೊಡ್ಡೆಯದೊಂದೇ ಬೆಳವಣಿಗೆಯಾಗಿಲ್ಲ. ಬೇರಿನಿಂದ–ಎಲೆ, ಹೂ, ಹೀಚು, ಕಾಯಿ–ಗಿಡದ ಸರ್ವಾಂಗಗಳ ಸಮರಸವಾಗಿ ಒಂದು ಗೂಡಿದ ಬೆಳವಣಿಗೆ. ಹೂ–ಹೀಚು–ಕಾಯಿ–ಗಳ ಸ್ಥಿತ್ಯಂತರಗಳಲ್ಲಿ ಸರಿಯಾಗಿ ಬೆಳೆದು ಬಂದರೇನೆ ಚೆನ್ನಾದ, ಮಧುರವಾದ ಹಣ್ಣಿನ ನಿರ್ಮಿತಿಯಾಗುವದು. ಶಿಶುವಾಗಿ, ಬಾಲಕನಾಗಿ — ಎಲ್ಲ ಸ್ಥಿತ್ಯಂತರಗಳಲ್ಲಿಯೂ ಅಂತಃಶಕ್ತಿಗಳ ಸರಿಯಾದ ವಿಕಾಸವಾದರೇನೆ ಮಗು 'ಪ್ರೌಢ ಪದವಿಗೆ ಅರ್ಹನಾಗುವನು.

ಚಿಕ್ಕಮಕ್ಕಳಗಳಲ್ಲಿ ಸ್ವಾಭಾವಿಕವಾದ ಕೃತಿ-ಪ್ರೇಮವಿರುವದು ; ರಚನಾತ್ಮಕ ಪ್ರವೃತ್ತಿಯಿರುವದು. ಅವರು ಆಡುವ ಆಟಗಳಲ್ಲಿ ಇವೆರಡೂ ಸಹಜಶಕ್ತಿಗಳು ಪ್ರಕಟವಾಗುವವು ಅಂತೆಯೆ, ಚಿಕ್ಕ ಮಕ್ಕಳ ಆಟಗಳನ್ನೇ ಅವರ ಆತ್ಮಸಂಸ್ಕಾರದ ಸಾಧನಗಳನ್ನಾಗಿ ಮಾಡಲು ಫ್ರೋಬೆಲ್‌ನು ಯೋಚಿಸಿರುವನು. ಈ ಬಗೆಯ ಅನೇಕ ಆಟಗಳನ್ನು ಆತನು ಕಲ್ಪಿಸಿರುವನು. ಇವುಗಳಲ್ಲಿ ಹಲವು ಸಾಂಘಿಕ ಆಟಗಳು. ಮಗು ಸಾಮಾಜಿಕ ಜೀವನದಲ್ಲಿಯೆ ಆತನ ಶಕ್ತಿಗಳು, ಭಾವನೆಗಳು ಬೆಳೆಯುವದುಂಟು. ಸಾಮಾಜಿಕ ಸದ್ಗುಣಗಳ ಸರಿಯಾದ ಪೋಷಣೆಗೆ ಸಾಂಘಿಕ ಆಟಗಳೆ ಸಾಧನಗಳೆನಿಸುವವು. ಈ ಆಟಗಳೆ ಬಾಲೋದ್ಯಾನ ಮಂದಿರದಲ್ಲಿ ಮಕ್ಕಳ 'ಕೃತಿ'ಗಳು. ಈ ಆಟಗಳ ಸಾಮಗ್ರಿಗಳಿಗೆ ಫ್ರೋಬೆಲ್‌ನು 'ಕಾಣಿಕೆ'ಗಳೆಂದು ಹೇಳಿರುವನು. ಈ 'ಕಾಣಿಕೆ'ಗಳೆಲ್ಲ ಜೀವನ ತತ್ವದ ವಿವಿಧ ಅಂಶಗಳ ಮೂರ್ತ ಸ್ವರೂಪಗಳಾಗಿವೆ. ಸಪ್ತವರ್ಣಗಳ ಉಣ್ಣೆ ಚೆಂಡುಗಳು, ಕಟ್ಟಿಗೆಯ ಘನ, ಕೋನ, ಸಿಲಿಂಡರ ಮುಂತಾದ ಆಕೃತಿಗಳು— ಇಂಥ ಕಾಣಿಕೆಗಳಲ್ಲಿ ಕೆಲವಾಗಿವೆ. ಕಥೆ, ಹಾಡು, ನೃತ್ಯಗಳಲ್ಲಿ ಮಕ್ಕಳು ಆನಂದದಿಂದ ನಲಿಯುವರು. ಕಥೆ ಸಂಗೀತಕ್ಕೆ, ಅಭಿನಯಕ್ಕೆ ವಸ್ತು ಒದಗಿಸುವದು. ಕಥೆಯಲ್ಲಿ ಕೇಳಿದ ವಸ್ತು ರೇಖಾಚಿತ್ರಕ್ಕೆ, ಮಣ್ಣಿನ ಮೂರ್ತಿಗೆ ವಿಷಯವಾಗುವದು. ಕಥೆ, ಹಾಡು, ಕೈಕೆಲಸ ಈ ಮೂರರಲ್ಲಿಯೂ ಶಿಕ್ಷಕನು ಕುಶಲತೆಯಿಂದ ಹೊಂದಿಕೆಯನ್ನು ಸಾಧಿಸಬೇಕು. ಪ್ರಾಣಿಗಳನ್ನು ಸಾಕುವದು, ತೋಟದಲ್ಲಿ ಕೆಲಸಮಾಡುವದು ಇವು ಇನ್ನಿತರ ಚಟುವಟಿಕೆ— 'ಕೃತಿ'ಗಳಾಗಿವೆ. ಬಾಲೋದ್ಯಾನ ಮಂದಿರವು ನಿಸರ್ಗದ ಸುಂದರವಾದ ಸನ್ನಿವೇಶದಲ್ಲಿರಬೇಕು, ಅದರ

ಸುತ್ತಲೂ ಹೂ-ಹಸಿರುಗಳಿಂದಕೂಡಿದ ಉದ್ಯಾನವಿರಬೇಕೆಂದು ಫ್ರೋಬೆಲ್‌ನ ಅಪೇಕ್ಷೆ. ಈ ವಿವಿಧ ಚಟುವಟಿಕೆಗಳನ್ನೆಲ್ಲ ಇಲ್ಲಿ ಒಂದು ಶೈಕ್ಷಣಿಕ ಉದ್ದೇಶದಿಂದ ಕೈಕೊಳುವರು. ಬೆಳೆಯುವ ಮಕ್ಕಳಲ್ಲಿ ಇಂದ್ರಿಯಗಳ ಸರಿಯಾದ ಸಂಸ್ಕರಣ, ಅತ್ಮಶಕ್ತಿಗಳ ವಿಕಾಸ ಹಾಗೂ ಸಾಮಾಜಿಕ ಜೀವನದ ಪ್ರಥಮ ಪಾಠ— ಈ ಉದ್ದೇಶಗಳಿಂದಲೆ ಫ್ರೋಬೆಲ್‌ನ ಕೃತಿಗಳು ಹಾಗೂ ಕಾಣಿಕೆಗಳು ಪ್ರೇರಿತವಾಗಿರುವವು.

ಶಿಕ್ಷಣದಲ್ಲಿ ಶೈಶವದ ಮಹತಿಯನ್ನು ತೋರಿಸಿಕೊಟ್ಟು ಫ್ರೋಬೆಲ್‌ನು ಶಿಶುವಿಹಾರಗಳಿಗೆ ದಾರಿಮಾಡಿಕೊಟ್ಟನು. ನಿಜವಾಗಿ ನೋಡಿದರೆ, ತಾಯಿ-ತಂದೆಗಳೆ ಶೈಶವದಲ್ಲಿ ಮಗುವಿನ ಜೋಪಾಸನೆಯನ್ನು ಕೈಕೊಳ್ಳಬೇಕು. ಫ್ರೋಬೆಲ್‌ನ ಅಭಿಪ್ರಾಯವೂ ಹೀಗೆಯೇ ಇರುವದು. ಆದರೆ ಜೀವನ ತೊಡಕಿನದಾಗಿದೆ. ತಾಯಿ-ತಂದೆಗಳಿಗೆ ಈ ಕಾರ್ಯಕ್ಕೆ ಸಮಯ ದೊರೆಯುವದಿಲ್ಲ. ಮೇಲಾಗಿ ಮಕ್ಕಳ ಮನೋಭೂಮಿಕೆಯನ್ನರಿತುಕೊಂಡು ಅವರಿಗೆ ಸರಿಯಾದ ಮಾರ್ಗದರ್ಶನ ಮಾಡುವ ಪರಿಜ್ಞಾನ ಬಹಳಷ್ಟು ತಾಯಿ-ತಂದೆಗಳಿಗಿರುವದಿಲ್ಲ. ಅದಕ್ಕಾಗಿ ಶಿಶು ವಿಹಾರಗಳು ಇಂದು ಅಗತ್ಯವೆನಿಸಿವೆ. ಕಾರ್ಮಿಕರಮಕ್ಕಳಿಗಾಗಿ ಶಿಶುವಿಹಾರಗಳು ಮೊದಲು ತಲೆಯೆತ್ತಿದ್ದವು. ಇಂದು ನಗರಗಳಲ್ಲಿ ಓಣಿ-ಓಣಿಗೂ ಒಂದು ಶಿಶುವಿಹಾರ ಕಂಡುಬರುವದು. ೩ ರಿಂದ ೬ ವರುಷಗಳ ವರೆಗೆ ಮಕ್ಕಳಿಗೆ ಇವುಗಳಲ್ಲಿ ಆನಂದದಾಯಕ ಕಾರ್ಯಕ್ರಮಗಳಿರುವವು. ಕೊನೆಯ ಎರಡು ವರುಷಗಳಲ್ಲಿ ಅಕ್ಷರಾಭ್ಯಾಸ, ಅಂಕಿಗಳ ಪರಿಚಯವನ್ನು ಕ್ರೀಡಾ-ಪದ್ಧತಿಯಿಂದಲೆ ಮಾಡಿಕೊಡುವರು. ಮನೆಯದೆ ವಾತಾವರಣ, ಮನೆಯವರದೇ ಎನಿಸುವ ಆರೈಕೆ ಅಂತಃಕರಣಗಳು ಮಕ್ಕಳಿಗೆ ಇಲ್ಲಿ ದೊರೆಯುವಂತೆ ಯೋಜನೆ ಮಾಡುವರು- ಕಥೆ, ಹಾಡು, ಬಗೆಬಗೆಯ ಆಟಪಾಟಗಳಲ್ಲಿ ಮಕ್ಕಳು ಆನಂದದಿಂದ ಕಾಲಕಳೆಯುವರು. ಸ್ವಯಂ ಪ್ರೇರಿತ ಚಟುವಟಿಕೆಗಳಿಗೆ ಉಚಿತವಾದ ಸಾಮಗ್ರಿಯನ್ನು ಒದಗಿಸಿ ಇಂದ್ರಿಯಗಳ ಸಂಸ್ಕರಣಕ್ಕೂ ಅನುವು ದೊರೆಯುವಂತೆ ಮಾಡುವರು. ಭಾರತ ಸರಕಾರವು ಶಿಶುವಿಹಾರಗಳ ಅಗತ್ಯವನ್ನು ಅರಿತಿರುವದು. ದೇಶದಲ್ಲಿ ಇರಥ ಶಿಶುವಿಹಾರಗಳನ್ನು ಸರಕಾರವೆ ಶೀಘ್ರವಾಗಿ ಸ್ಥಾಪಿಸುವ ನಿರೀಕ್ಷೆಯಿರುವದು.

ಮಾತಾ ಮಾಂಟೀಸೋರಿ :— ನಿಸರ್ಗ ಶಿಕ್ಷಣವನ್ನು ಪ್ರತಿಪಾದಿಸಿ, ಬಲಾತ್ಕಾರದ ಕಲಿಕೆಯ ಬಂಧನದಿಂದ ರೂಸೋ ಮಗುವನ್ನು ಮುಕ್ತಗೊಳಿಸಿದನು. ಪ್ರತ್ಯಕ್ಷಾನುಭವವೆ ಜ್ಞಾನದ ಸಾಧನವೆಂದು ಪೆಸ್ಟಲೋಝಿ ಪ್ರತಿಪಾದಿಸಿದನು. ಪೆಸ್ಟಲೋಝಿಯ ವಿಧಾನಕ್ಕೆ ಹರ್ಬಾರ್ಟನು ಮಾನಸಶಾಸ್ತ್ರದ ಬೆಂಬಲವನ್ನು ನೀಡಿದನು. ಫ್ರೋಬೆಲ್‌ನು ಶಿಕ್ಷಣದಲ್ಲಿ ಶೈಶವದ ಮಹತಿಯನ್ನು ಮನವರಿಕೆ ಮಾಡಿಕೊಟ್ಟನು. ಅಂತಃಶಕ್ತಿಗಳ ವಿಕಾಸಕ್ಕೆ ಮಕ್ಕಳ ಸ್ವಯಂ ಪ್ರೇರಿತ ಚಟುವಟಿಕೆಗಳ ಯೋಜನೆಮಾಡಿದನು. ಮಾತಾ ಮಾಂಟೀಸೊರಿಯವರ ಕಾಲದಲ್ಲಿ ಪ್ರಾಯೋಗಿಕ ಮಾನಸಶಾಸ್ತ್ರವು ಸಾಕಷ್ಟು ಮುಂದರಿದಿತ್ತು. ಈ ಪ್ರಯೋಗಗಳ ಪ್ರಯೋಜನವನ್ನು ಅವರು ಪೂರ್ಣವಾಗಿ ಪಡೆದುಕೊಂಡರು.

ಇಟಲಿಯಲ್ಲಿ ರಾಜಕೀಯ ಸ್ಥಿತ್ಯಂತರಗಳು ತ್ವರೆಯಿಂದ ಸಾಗಿದ್ದವು. ಅಂಥ ಸಂದರ್ಭದಲ್ಲಿ, ೧೮೭೦ ರಲ್ಲಿ ಮಾಂಟೀಸೋರಿಯವರು ಜನ್ಮವೆತ್ತಿದರು. ಇಟಲಿಯಲ್ಲಿ ಅವರೇ ಡಾಕ್ಟರ ಪದವಿಯನ್ನು ಪಡೆದ ಮೊದಲನೆಯ ಮಹಿಳೆ. ಅಸಹಾಯರಾದ ಬಡವರ

ಗಾಗಿ ರೋಮನಗರದೊಳಗೆ 'ಸದ್ಗೃಹ' ( Good Building ) ವೆಂಬ ಸಂಸ್ಥೆಯಿತ್ತು. 'ಬಾಲ್ಯನಿಕೇತನ' ( The House of Child-hood) ಯೆಂಬುದು ಇದೇ ಸಂಸ್ಥೆಯ ಒಂದು ವಿಭಾಗ. ಇಲ್ಲಿ ದುರ್ಬಲ ಮಿದುಳಿನ ಮಕ್ಕಳಿಗೆ ಶಿಕ್ಷಣವನ್ನು ಕೊಡುವ ಕೆಲಸವನ್ನು ಮಾಂಟೇಸೋರಿಯವರು ಕೈಕೊಂಡರು. ತಮ್ಮ ಪ್ರಯೋಗಗಳಿಂದ ಕಂಡುಹಿಡಿದ ವಿಧಾನಗಳನ್ನು ಇದೇ ವಯಸ್ಸಿನ ಎಲ್ಲ ನಿರೋಗಿಯಾದ ಮಕ್ಕಳ ಶಿಕ್ಷಣದಲ್ಲಿಯೂ ಸಫಲವಾಗಿ ಬಳಿಸಬಹುದೆಂಬುದು ಅವರಿಗೆ ಕಂಡುಬಂದಿತು. ಮಕ್ಕಳ ಶಿಕ್ಷಣದಲ್ಲಿ ತೊಡಗಿದವರಿಗೆ ಮಕ್ಕಳ ಮಾನಸ ಶಾಸ್ತ್ರದ ಸಾಕಷ್ಟು ಪರಿಚಯವು ತೀರ ಅಗತ್ಯವೆಂದು ಅವರು ಹೇಳಿರುವದು ಇದೇ ಕಾರಣಕ್ಕಾಗಿ.

ಆಧುನಿಕ ಶಿಕ್ಷಣದಲ್ಲಿ ಚಿಕ್ಕಮಕ್ಕಳ ಸ್ವಾತಂತ್ರ್ಯವು ಒಂದು ವೈಶಿಷ್ಟ್ಯ; ಸ್ವಾವಲಂಬನವು ಇನ್ನೊಂದು ವೈಶಿಷ್ಟ್ಯ. ಶಿಕ್ಷಣದಲ್ಲಿ ಸ್ವಾವಲಂಬನದ ತತ್ವವನ್ನು ಕ್ರಮಬದ್ಧ ವಿಧಾನವಾಗಿ ಮಾಡಿದವರು ಮಾಂಟೆಸೋರಿಯವರು. ನಿಸರ್ಗನಿರೀಕ್ಷಣೆಯಲ್ಲಿ ಫ್ರೋಬೆಲ್‌ನಿಗೆ ಶಿಕ್ಷಣತತ್ವಗಳು ಹೊಳೆದವು. ದುರ್ಬಲವಾದ ಮಿದುಳಿನ ಪರೀಕ್ಷೆಯಲ್ಲಿ ಮಾಂಟೆಸೋರಿಯವರಿಗೆ ಮಕ್ಕಳ ಮೊದಲು ಶಿಕ್ಷಣದ ಸರಿಯಾದ ರೀತಿಯು ಕಂಡುಬಂದಿತು. ಚಿಕ್ಕಮಕ್ಕಳ ಮನೋವೃತ್ತಿಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರು. ಅವರ ಒಲವು-ಶಕ್ತಿಗಳಲ್ಲಿರುವ ವಿವಿಧತೆಯನ್ನೂ, ಹೆಚ್ಚುಕಡಿಮೆಗಳನ್ನೂ ತಿಳಿದುಕೊಂಡರು. ವರ್ಗಶಿಕ್ಷಣದ ಒಂದೇ ವಿಧವಾದ ಪಡಿಯಚ್ಚಿನಲ್ಲಿ, ವಿಶಿಷ್ಟವಾಗಿರುವ ಒಲವುಗಳನ್ನು ದುರ್ಲಕ್ಷಿಸಿ, ಎಲ್ಲ ಮಕ್ಕಳನ್ನೂ ಒತ್ತಿ ತೆಗೆಯುವದು ಅವರಿಗೆ ಅಸಹ್ಯವೆನಿಸಿತು. ಬುದ್ಧಿ-ಶಕ್ತಿಗಳ ಭೇದಗಳನ್ನು ಗಮನಿಸದೆ, ವರ್ಗದ ವೇಳಾಪತ್ರಿಕೆಯು ಎಲ್ಲ ಮಕ್ಕಳನ್ನೂ ಒಂದೇ ವೇಗದಿಂದ ಮುಂದೆ ನೂಕಿಕೊಂಡು ಹೋಗುವದು ಅವರಿಗೆ ಅನ್ಯಾಯವೆನಿಸಿತು. ಅಂತೆಯೆ ಮಾಂಟೆಸೋರಿಯವರು ಮಕ್ಕಳ ಶಿಕ್ಷಣಪ್ರಪಂಚದಿಂದ ವೇಳಾಪತ್ರಿಕೆಯನ್ನೂ, ಪರೀಕ್ಷೆಗಳನ್ನೂ ಹೊರಗೆ ತಳ್ಳಿರುವರು.

ಮಾಂಟೆಸೋರಿ ಸಂಸ್ಥೆಗಳಲ್ಲಿ ಶಿಕ್ಷಣವಾದರೂ ಕೃತ್ರಿಮವಾದ 'ಕಲಿಸುವಿಕೆ'ಯಾಗಿರುವದಿಲ್ಲ. ಒತ್ತಾಯದ 'ಕಲಿಯುವಿಕೆ'ಯೂ ಇರುವದಿಲ್ಲ. ಮಕ್ಕಳ ಆತ್ಮಶಕ್ತಿಗಳ ಪೂರ್ಣವಾದ ವಿಕಾಸವೇ ಶಿಕ್ಷಣವು. ಅವರ ನೈಸರ್ಗಿಕವಾದ ಕೃತಿ ಪ್ರೇಮ ಹಾಗೂ ರಚನಾ ಪ್ರವೃತ್ತಿಗಳೆ ಅವರನ್ನು ಕಲಿಯಹಚ್ಚುವ ಪ್ರೇರಕ ಶಕ್ತಿಗಳಾಗಿರುವವು. ಸ್ವಯಂ ಪ್ರೇರಿತವಾಗುವಂತೆ ಸರಿಯಾದ ಸನ್ನಿವೇಶಗಳನ್ನು ಹಾಗೂ ಸಲಕರಣೆಗಳನ್ನು ಒದಗಿಸುವದು; ಹಿಂದೆ ನಿಂತುಕೊಂಡು ಅವುಗಳೆಲ್ಲ ಸರಿಯಾಗಿ ನಡೆಯುವಂತೆ ನೋಡಿಕೊಳ್ಳುವದು, ಶಿಕ್ಷಕನ ಕಾರ್ಯವಾಗಿದೆ. ಈ ಪದ್ಧತಿಯಲ್ಲಿ ಶಿಕ್ಷಕನು ಕೇವಲ ಮಾರ್ಗದರ್ಶಿ ಮಾತ್ರ.

ಮಾಂಟೆಸೋರಿ ಪದ್ಧತಿಯಲ್ಲಿ:— ಸ್ವಾವಲಂಬನ; ಇಂದ್ರಿಯ-ಸಂಸ್ಕರಣ; ಹಾಗೂ ಗತಿಶಿಕ್ಷಣ; ಇವು ಮೂರು ಮುಖ್ಯ ಅಂಗಗಳೆಂದು ಹೇಳಬಹುದು. ಮಕ್ಕಳು ನಿರೋಗಿಗಳಾಗಬೇಕು. ಸ್ವಚ್ಛತೆ-ಅಚ್ಚುಕಟ್ಟುತನಗಳ ಬಗ್ಗೆ ಮೊದಲಿನಿಂದಲೆ ಚಿಕ್ಕಮಕ್ಕಳಲ್ಲಿ ಆಸ್ಥೆ-ಆಸಕ್ತಿಗಳು ಉಂಟಾಗುವಂತೆ ಅವರು ಮಾಡುವರು. ಆ ಬಗೆಯ ರೂಢಿಗಳನ್ನು ಹಾಕಿಕೊಡುವರು. ಹಲ್ಲು ಉಜ್ಜಿಕೊಳ್ಳುವದು, ಮುಖ ತೊಳೆದುಕೊಳ್ಳುವದು, ತಮ್ಮ ಆಟದ ಒಡವೆಗಳನ್ನು ಓರಣದಿಂದ ಅವುಗಳ ಸ್ಥಾನದಲ್ಲಿಯೆ ಇಡುವದು—ಇವೇ ಮುಂತಾದ

ನಿತ್ಯ ಜೀವನದ ಕೃತಿಗಳನ್ನು ಚಿಕ್ಕಮಕ್ಕಳ ಕೈಯಿಂದಲೆ ಅವರು ಮಾಡಿಸುವರು. ಇದರಿಂದ ಓರಣ ಹಾಗೂ ಸ್ವಾವಲಂಬನಗಳೆರಡೂ ಅವರಲ್ಲಿ ಬೆಳೆದುಬರುವವು. ಪ್ರೀತಿ, ತಾಳ್ಮೆ, ಸಹಾನುಭೂತಿ ಮುಂತಾದ ಸಾಮಾಜಿಕ ಸದ್ಗುಣಗಳ ವಿಕಾಸಕ್ಕೂ ಇದರಿಂದ ಸಹಾಯ ವಾಗುವದು.

ಬೆಳೆಯುವ ಮಕ್ಕಳ ಸ್ನಾಯುಗಳಿಗೆ ಸಾಕಷ್ಟು ಚಲನವಲನ ದೊರೆತು ಅವು ಗಳನ್ನು ಬಲಿಯುವಂತೆ ಮಾಡುವದು 'ಗತಿಶಿಕ್ಷಣ'ದ ಒಂದು ಉದ್ದೇಶ. ಅವಯವಗಳ ಚಲನವಲನದಲ್ಲಿ ಸರಿಯಾದ 'ತಾಲ-ಲಯ'ಗಳನ್ನು ತಂದು ಕೊಡುವದು ಎರಡನೇ ಉದ್ದೇಶವಾಗಿದೆ. ಇಂದು ನಾವು ಮಕ್ಕಳಿಗೆ 'ಸರಿಯಾಗಿ ಕೂಡು—ಸರಿಯಾಗಿ ನಿಲ್ಲು' ಎಂದು ಹೇಳುವ ಉದ್ದೇಶವಾದರೂ ಇದೇಯಾಗಿದೆ. ಮಾಂಟೆಸೋರಿ ಶಾಲೆಗಳಲ್ಲಿ ಬಳಕೆಯ ಎಲ್ಲ ವಸ್ತುಗಳೆಲ್ಲ 'ಮಕ್ಕಳಿಗಾಗಿಯೆ' ಮಾಡಿದವುಗಳು. ಗೂಟಗಳು, ಮೇಜು, ಖುರ್ಚಿ— ಇವುಗಳೆಲ್ಲ ಅವರ ಶಕ್ತಿ ಹಾಗೂ ಎತ್ತರಕ್ಕೆ ಹಾಳತಾಗಿರುವಂತೆ ನೋಡಿಕೊಳ್ಳಲಾಗುವದು.

ಇಂದ್ರಿಯಗಳ ಸಂಸ್ಕರಣವು ಇದಕ್ಕೂ ಹೆಚ್ಚಿನದಾಗಿದೆ. ಮಾಂಟೆಸೋರಿ ಯವರು ಕಲ್ಪಿಸಿದ ಇಂದ್ರಿಯ ಸಂಸ್ಕರಣರದ ಯೋಜನೆಯು ಜಗತ್ತಿನ ಶಿಕ್ಷಣ ತ ಲಕ್ಷವನ್ನು ಸೆಳೆದಿದೆ. ದುರ್ಬಲವಾದ ಒಂದು ಇಂದ್ರಿಯದ ಕಾರ್ಯವನ್ನು ಮತ್ತೊಂದು ಇಂದ್ರಿಯದಿಂದ ಮಾಡಿಸಬಹುದೆಂದು ಅವರು ಹೇಳಿರುವರು. ಇಂದ್ರಿಯ ಸಂಸ್ಕರಣ ದೊಡನೆ ಬುದ್ಧಿ ವಿಕಾಸವೂ ಸಮನ್ವಿತವಾಗಿ ಸಾಗುವದೆಂದು ಅವರ ಹೇಳಿಕೆ. ಯೋಚಿ ಸುವ ಕೈ (Thinking Hand) ಯೆಂಬುದು ಇಂದು ಸರ್ವಮಾನ್ಯವಾದ ತತ್ವವಾಗಿದೆ. ಅವರು ಕಲ್ಪಿಸಿದ ಇಂದ್ರಿಯ ಸಂಸ್ಕರಣದ ಯೋಜನೆಯು ಶಿಕ್ಷಣ ತಜ್ಞರ ಮೆಚ್ಚುಗೆಗೆ ಪಾತ್ರವಾಗಿದೆ. ಇಂದ್ರಿಯಗಳು ಜ್ಞಾನದ ಮೂಲ ಸಾಧನಗಳು. ಇವುಗಳ ಸರಿ ಯಾದ ಸಂಸ್ಕರಣವೇ ಜ್ಞಾನದ ವಿಕಾಸವು. ಇಂದ್ರಿಯಗಳ ಸರ್ವತೋಮುಖವಾದ ಸಂಸ್ಕರಣಕ್ಕಾಗಿ ಮಾಂಟೆಸೋರಿಯವರು ಒಳ್ಳೇ ಮಾರ್ಮಿಕವಾದ ಸಲಕರಣೆಗಳನ್ನು ಕಲ್ಪಿಸಿರುವರು. ಅವುಗಳಿಗೆ —'ಡಿಡ್ಯಾಕ್ಟಿಕ್ ಮಟೇರಿಯಲ್'— ಸಂಸ್ಕರಣ ಸಾಮಗ್ರಿ ವೆಂದು ಹೇಳುವರು. ಬಣ್ಣಗಳ ಭೇದಪ್ರಭೇದಗಳನ್ನೂ, ಆಕಾರ ಆಕೃತಿಗಳ ಹೆಚ್ಚು ಕಡಿಮೆಗಳನ್ನೂ, ಒಡವೆಗಳ ಒರಟು-ನುಣುಪುಗನ್ನೂ, ಸ್ವರಗಳ ಆಳಮೇಳಗಳನ್ನೂ, ಚಿಕ್ಕಮಕ್ಕಳು ತಾವಾಗಿಯೆ ಆಟದ ಒಂದು ರೀತಿಯಲ್ಲಿ ತಿಳಿದು ಕೊಳ್ಳಲು ಬರುವಂತೆ ಇವರು ವಿವಿಧವಾದ ಆಟದ ಸಾಮಗ್ರಿಯನ್ನು ರಚಿಸಿರುವರು.

ಮಾಂಟೆಸೋರಿ ಪದ್ಧತಿಯಲ್ಲಿ ಶಿಸ್ತು—ಸಂಘಟನೆಗಳ ಕಲ್ಪನೆಯೆ ಭಿನ್ನವಾಗಿದೆ. ಕಾರ್ಯದಲ್ಲಿ ತೊಡಗದ ಮಗು ಹಟಮಾಡಬಹುದು, ಕಿಡಿಗೇಡಿತನಕ್ಕೆಳಸಬಹುದು. ಆದರೆ ಸ್ವಯಂಪ್ರೇರಣೆಯಿಂದ ತಮತಮಗೆ ಆಸಕ್ತಿಯಿರುವ ವಿವಿಧಕಾರ್ಯಗಳಲ್ಲಿ ತೊಡಗುವ ಮಕ್ಕಳು ಅವುಗಳಲ್ಲಿಯೆ ನಿರತರಾಗಿ ಬಿಡುವರು. ಆಸ್ಥೆಯೊಡನೆ ಅವಧಾನ; ಇವುಗಳೊಡನೆ ಆಂತರಿಕವಾದ ಶಿಸ್ತು ತಾನಾಗಿಯೆ ಬೆಳೆದು ಬರುವದು. ಬೆತ್ತ—ಬೆದರಿಕೆ ಗಳಿಂದ 'ಶಿಸ್ತನ್ನು ಕಾಯುವ' ಪರಿಸ್ಥಿತಿಯೆ ಉಂಟಾಗುವದಿಲ್ಲ. ಹೊರಗಿನಿಂದ ನೋಡು ವವರಿಗೆ ಮಾರ್ಗದಲ್ಲಿ — 'ಇದೇನು ಗೊಂದಲ!' ವೆಂದು ಎನಿಸಬಹುದಾದರೂ, ಅಲ್ಲಿ

ನಡೆಯುವ ಕಾರ್ಯಗಳಲ್ಲಿ ಸಹಜವಾದ ಒಂದು 'ಕ್ರಮ', 'ವ್ಯವಸ್ಥೆ' ಇರುವದು. ಶಿಕ್ಷಕನ ಸಹಾಯವಿಲ್ಲದೆ ಮಕ್ಕಳು ತಮ್ಮ ತಪ್ಪುಗಳನ್ನು ತಾವೇ ಕಂಡು ಹಿಡಿಯುವರು. ಅಂತೆಯೆ, ಈ ಪದ್ಧತಿಗೆ 'ಸ್ವಯಂಶಿಕ್ಷಣ' (Auto-education) ವೆಂದು ಹೇಳುವರು. ಕೂಡಿ ಕೆಲಸಮಾಡುವಾಗ್ಗೆ ಸಾಂಘಿಕ ಜೀವನೋಪಯೋಗಿಯಾದ ಸದ್ಗುಣಗಳು ತಾವಾಗಿಯೆ ಅವರಲ್ಲಿ ಅಂಕುರಿಸುವವು. ಈ ವರ್ಗಗಳಲ್ಲಿ ಪರೀಕ್ಷೆಗಳನ್ನು ತೆಗೆದು ಹಾಕಿರುವಂತೆ, ಪಾರಿತೋಷಿಕಗಳಿಗೂ ಎಡೆಯಿಲ್ಲ. ತಮ್ಮ ಪರಿಶ್ರಮದ ಪ್ರತಿಫಲವೆ ಮಕ್ಕಳಿಗೆ ಬಹು ಮೂಲ್ಯವಾದ ಪಾರಿತೋಷಿಕವೆನಿಸುವದು. ತಾವು ಮಾಡಿದ ಪ್ರಗತಿಯಿಂದಲೆ ಅವರಿಗೆ ಪರಮ ಸಂತೋಷ, ಇಂದ್ರಿಯ ಸಂಸ್ಕರಣದ ಸಾಧನಗಳಿಂದ ವಿವಿಧ ವಿಷಯಗಳ ಜ್ಞಾನವನ್ನು ಮಾಂಟಿಸೋರಿಯವರು ಚಿಕ್ಕ ಮಕ್ಕಳಿಗೆ ಮಾಡಿಕೊಡುವರು. ಗಣಿತದ ಹಿರಿಮೆಯಲ್ಲಿ ಅವರಿಗೆ ವಿಶೇಷವಾದ ಶ್ರದ್ಧೆ. ಈ ವರ್ಗದಲ್ಲಿ ಶಿಕ್ಷಣಪಡೆದ ಐದು ವರುಷದ ಚಿಕ್ಕ ಮಗು, ೮-೧೦ ಸಂಖ್ಯೆಗಳ ವರೆಗೆ ಕೂಡಿಸ ಬಲ್ಲದು. ಕಳೆಯ ಬಲ್ಲದು, ಗುಣಿಸಬಲ್ಲದು. ಜಗತ್ತಿನ ರಾಷ್ಟ್ರಧ್ವಜಗಳನ್ನೆಲ್ಲ ಗುರುತಿಸಬಲ್ಲದು. ರಾಜಧಾನಿಗಳ ಹೆಸರನ್ನು ಹೇಳಬಲ್ಲದು. ಈ ಪದ್ಧತಿಯಲ್ಲಿ ಸ್ನಾಯುಗಳ ಕಾರ್ಯವಾದ ಬರೆಹ ಮೊದಲು, ಓದು ಹಿಂದುಗಡೆ. ಚಿತ್ರ ತೆಗೆಯುವದರಿಂದಲೆ ಬರೆಹದ ಪ್ರಾರಂಭ. ಇಂದು ನಮಗೆ ತಿಳಿದುಬಂದಿರುವ ಮಾತೃಭಾಷೆಯ ಮಹತಿಯನ್ನು ಮಾಂಟಿಸೋರಿಯವರು ಮೊದಲೆ ಕಂಡುಹಿಡಿದಿರುವರು.

ಫ್ರೋಬೆಲ್‌ನ 'ಕಾಣಿಕೆ' ಗಳಲ್ಲಿಯ ತಾತ್ವಿಕತೆ ತಿಳಿಯಲಾರದಂತಿದೆ, ಮಾಂಟಿಸೋರಿಯವರ ಶಿಕ್ಷಣ ಸಾಮಗ್ರಿಯಲ್ಲಿ ಕೃತ್ರಿಮತೆ ತೋರಿಬರುತ್ತದೆ. ಜೀವನವನ್ನು ಸುಂದರವಾಗಿ, ಸುಮಧುರವಾಗಿ ಮಾಡುವ ಕಲ್ಪಕತೆಗೆ ಇದರಲ್ಲಿ ಸ್ಥಾನವಿಲ್ಲ. ಕೇವಲ ಇಂದ್ರಿಯ ಸಂಸ್ಕರಣದ ಆಧಾರದ ಮೇಲೆ ರಚಿಸಿದ ಅಭ್ಯಸನ ಮಾನಸಶಾಸ್ತ್ರಕ್ಕೆ ಸಮ್ಮತವಾಗಿಲ್ಲ—ಇತ್ಯಾದಿಯಾಗಿ ಕೆಲವೊಂದು ನ್ಯೂನತೆಗಳ ಈ ಪದ್ಧತಿಯಲ್ಲಿ ಎತ್ತಿತೋರಿಸುವದುಂಟು. ಫ್ರೋಬೆಲ್‌ನ ಹಾಗೂ ಮಾಂಟಿ ಸೋರಿಯವರ ಪದ್ಧತಿಗಳಲ್ಲಿಯ ಗುಣಾಂಶಗಳನ್ನು ಸಮನ್ವಿತ ಗೊಳಿಸಿ ಇಂದಿನ ಶಿಶು-ವಿಹಾರಗಳನ್ನು ನಡೆಸುವದುಂಟು.

'ಶಿಕ್ಷಣದಲ್ಲಿ ಚಟುವಟಿಕೆ'—ಯ ಆಂದೋಲನ— ಡ್ಯೂಯಿಯವರ ವಿಚಾರಗಳು :— ಶಿಕ್ಷಣದಲ್ಲಿ ಇಂದು ನವಯುಗವು ಪ್ರಾರಂಭಿಸಿದೆ. ಶಿಕ್ಷಣದ ರೂಪು-ರೀತಿಗಳನ್ನು ಗೊತ್ತುಪಡಿಸುವವ ಪ್ರಯೋಗವು ಇಂದು ಚಟುವಟಿಕೆಯ ತಳಹದಿಯ ಮೇಲೆ ಸಾಗಿದೆ. ಚಟುವಟಿಕೆಯ ಮುಖಾಂತರ ಮಕ್ಕಳಿಗೆ ದೊರೆಯುವ ಶಿಕ್ಷಣವು ಹೆಚ್ಚು ಸತ್ವಯುತವಾಗುವದೆಂಬ ಅಭಿಪ್ರಾಯಕ್ಕೆ ಶಿಕ್ಷಣ ತಜ್ಞರಿಂದ ಹೆಚ್ಚು ಹೆಚ್ಚಾಗಿ ಮನ್ನಣೆ ದೊರೆಯಹತ್ತಿದೆ. 'ಪಾತ್ರೆಯಿಂದ ಪಾತ್ರೆಯಲ್ಲಿ ನೀರು ತುಂಬುವಂತೆ', ಸಚೇತನವಾದ ಮಗುವಿನ ತಲೆಯಲ್ಲಿ 'ತಮಗೆ ಬೇಕಾದ' ಜ್ಞಾನವನ್ನು ತುಂಬಬಹುದೆಂಬ ಜೊಳ್ಳು ಕಲ್ಪನೆ ಹಾರಿಹೋಗಿದೆ. ಜನಜೀವನಕ್ಕೆ ಶಿಕ್ಷಣವು ತೀರ ಸಮೀಪವಾಗತೊಡಗಿದೆ. ಆಧುನಿಕ ಮಾನಸ-ಶಾಸ್ತ್ರವು ಇದೇ ತತ್ವನ್ನೇ ಪುರಸ್ಕರಿಸುತ್ತಿದೆ. ರೂಢಿ ಬದ್ಧವಾದ ಹಿಂದಿನ ಹಳೆಯಹಾದಿಯನ್ನು ಬಿಟ್ಟುಕೊಟ್ಟು ಇಂದಿನ ಶಿಕ್ಷಣ ಝರಿಯು ಹೊಸ ಹಾದಿಯನ್ನು ಹುಡುಕಿಕೊಂಡಿದೆ. ಹಿಂದಿನದು ಸಾಂಪ್ರದಾಯಿಕ— ಕಟ್ಟಿದ ಕಾಲುವೆಯಲ್ಲಿ ನೀರು ಹರಿಬಿಟ್ಟಂತೆ. ಇಂದಿನದು ನೈಸ

ಗಿಂತ— ಹರಿಯುವ ನೀರು ತನ್ನ ಕಾಲುವೆಯನ್ನು ತಾನೇ ಮಾಡಿಕೊಂಡಿತು. ಚಟು ಜೀವನವನ್ನು ಶಿಕ್ಷಣವು ಹೊಂದಿಕೊಳ್ಳುವದೇ ಅದರ ನೈಸರ್ಗಿಕತೆಯ ಲಕ್ಷಣ. ಹಿಂದಿನ ಶಿಕ್ಷಣದಲ್ಲಿ ಶಾಲೆಯ ಜೀವನಕ್ಕೂ ಹೊರಗಿನ ಜೀವನಕ್ಕೂ ಹೊಂದಿಕೆಯಿರಲಿಲ್ಲ. ಚಟುವಟಿಕೆಯ ಮುಖಾಂತರದ ಶಿಕ್ಷಣವು. (ಇದಕ್ಕೆ ಉದ್ಯಮ ಮೂಲ ಶಿಕ್ಷಣವೆಂತಲೂ ಹೇಳುವರು) ಇವೆರಡನ್ನೂ ಸಮರಸವಾಗಿ ಹೊಂದಿಸಿಕೊಳ್ಳುವದು. ಕೃತಿ ಪ್ರೇಮ ಹಾಗೂ ರಚನಾಪ್ರವೃತ್ತಿ ಮಗುವಿನ ನೈಸರ್ಗಿಕ ಒಲವುಗಳಲ್ಲಿ ಹಿರಿದಾದವುಗಳು. ೯ ವರುಷಗಳವರೆಗೆ ಇವು ಹೆಚ್ಚು ಹೆಚ್ಚಾಗಿ ಜಾಗೃತವಾಗುವವು. ತಿಳಿಯದ ತಾಯಿತಂದೆಗಳು ಇವುಗಳಿಗೆ— 'ಕೈ ಸುಮ್ಮನೆ ಕೂಡುವದಿಲ್ಲ'— 'ಕಿಡಿಗೇಡಿತನ ಮಾಡುತ್ತಾನೆ'— ಎಂದು ಹೇಳುವದುಂಟು.

ಮಕ್ಕಳ ಚಟುವಟಿಕೆಗೆ ಮೇಲೆ ಹೇಳಿದ ಸಹಜ ಪ್ರವೃತ್ತಿಗಳ ಪ್ರಬಲವಾದ ಅಂತಃಪ್ರೇರಣೆಯೆ ಕಾರಣ. 'ಈ ಅಂತಃಪ್ರೇರಣೆಯನ್ನೇ ಶಿಕ್ಷಣದ ಮಾಧ್ಯಮವಾಗಿ ಮಾಡಿಕೊಳ್ಳಬೇಕು. ಚಟುವಟಿಕೆಯ ಮುಖಾಂತರವಾಗಿ ಶಾಲೆಯ ಜೀವನಕ್ಕೂ ಸುತ್ತಲಿನ ನೈಜ ಜೀವನಕ್ಕೂ ನೇರವಾದ, ವಾಸ್ತವವಾದ ಸಂಬಂಧವನ್ನು ತಂದು ಕೊಟ್ಟು ಮಗುವಿನ ಪೂರ್ಣ ವಿಕಾಸವನ್ನು ಸಾಧಿಸಬೇಕು,— ಇದು ಅಮೇರಿಕೆಯ ಶಿಕ್ಷಣ ತಜ್ಞರಾದ ಡ್ಯೂಯಿಯವರು ಅಭಿನವ ಶಿಕ್ಷಣಕ್ಕೆ ನೀಡಿದ ಶ್ರೇಷ್ಠ ಕಾಣಿಕೆಯಾಗಿದೆ. ಒಂದು ವಿಶಿಷ್ಟ ಉದ್ದಿಮೆಯಲ್ಲಿ ಮಗುವನ್ನು ತರಬೇತುಗೊಳಿಸುವದು ಸಾಮಾನ್ಯ ಶಿಕ್ಷಣದ ಉದ್ದೇಶವಾಗಿಲ್ಲ. ಉದ್ದಿಮೆ ಶಿಕ್ಷಣದ ಮಾಧ್ಯಮ ಮಾತ್ರ. ಡ್ಯೂಯಿಯವರು ಹೇಳುವಂತೆ ಈ ಉದ್ದಿಮೆ— 'ಸುತ್ತಲಿನ ಸಮಗ್ರ ಪರಿಸ್ಥಿತಿಯನ್ನು ಬಳಸಿಕೊಂಡು ಆತನ ಚಟುವಟಿಕೆಯನ್ನು ಸಹೇತುಕವಾಗಿ, ಸಾರ್ಥಕವಾಗಿಮಾಡುವದು.' 'ಇಂಥ ಶಾಲೆಗಳಲ್ಲಿ ಕಲಿಯುವ ಮಕ್ಕಳು ಬಡಿಗರಾಗಬೇಕು, ಸಿಂಪಿಗರಾಗಬೇಕು— ಎಂಬುದವರ ಉದ್ದೇಶವಾಗಿಲ್ಲ; ಆದರೆ ಜಗತ್ತಿನಲ್ಲಿ ಉದ್ದಿಮೆ ಹೇಗೆ ನಡೆಯುವದೆಂಬದನ್ನು ಅರಿತುಕೊಳ್ಳಬೇಕು.' 'ಒಂದೇ ವಿಧವಾದ ಶಾರೀರಿಕ ದುಡುಮೆಯಲ್ಲಿ ಮಗುವನ್ನು ದೀರ್ಘಕಾಲ ತೊಡಗಿಸುವದು ಆತನ ಶಾರೀರಿಕ ಹಾಗೂ ಬೌದ್ಧಿಕ ಬೆಳವಣಿಗೆಗೆ ಅಪಾಯಕರವಾದುದು. ಉದ್ದಿಮೆಯಲ್ಲಿ ಸಮಗ್ರ ಶರೀರಕ್ಕೆ ದುಡಿತ ದೊರೆಯಬೇಕು. ಈ ಕೆಲಸದಲ್ಲಿ ಆತನು ಹೊಸ ತೊಡಕುಗಳನ್ನು ಎದುರಿಸಬೇಕು. ಹೊಸ ವಿಷಯಗಳ ತಿಳುವಳಿಕೆಯುಂಟಾಗಬೇಕು, ಆತನ ತರ್ಕ ಹಾಗೂ ನಿರ್ಣಯ ಶಕ್ತಿಗಳ ವಿಕಾಸವಾಗಬೇಕು.'... 'ತನ್ನ ಸುತ್ತಲಿನ ಪರಿಸ್ಥಿತಿಯ ಪ್ರಯೋಜನವನ್ನು ಮಾಡಿಕೊಳ್ಳಲು ಆತನಿಗೆ ತನ್ನ ಶಕ್ತಿಗಳ ಅರಿವು ಉಂಟಾಗಬೇಕು' 'ಉದ್ದಿಮೆಯು ಉತ್ಪಾದಕವಾಗಿರುವದರಿಂದ ಶಿಕ್ಷಣದಲ್ಲಿ ಅದರ ಉಪಯುಕ್ತತೆಯು ಹೆಚ್ಚಿಗಿರುವದು.' 'ಕೃತಿ-ಪೂರ್ಣವಾದ ಜಗತ್ತಿನೊಡನೆ ನಿಕಟ ಸಂಬಂಧ ಉಂಟಾದಾಗ, ವಿಚಾರಗಳ ಪ್ರಪಂಚವು ಅತಿಶಯವಾಗಿ ಮನೋವೇಧಕವಾಗುವದು.' 'ಮಾಡುತ್ತ ಕಲಿ' ಯೆಂಬ ಶಿಕ್ಷಣದಲ್ಲಿ ಮಾನವಜೀವನಕ್ಕೆ ಮಹತ್ವವೆನಿಸಿದ ಒಂದು ಅನುಭವವನ್ನು ಮಗು ಮರಳಿ ಪಡೆದಂತಾಗುತ್ತದೆ— ಚಟುವಟಿಕೆಯ ಮುಖಾಂತರವಾಗಿ ನಡೆಯುವ ಶಿಕ್ಷಣಕ್ಕೆ ಡ್ಯೂಯಿಯವ ಈ ವಿಚಾರಗಳೆ ತಳಹದಿಯಾಗಿವೆ.

ಯೋಜನಾ ಪದ್ಧತಿ (Project Method) :— ಕಲಿಯುವದು ಆಸಕ್ತಿದಾಯಕವಾಗಿದ್ದರೆ, ಆಸ್ಥೆ-ಆದರಗಳು ತಾವಾಗಿಯೇ ಜನಿಸುವವು. ಕಲಿಯುವವರಲ್ಲಿ

ಆನಂದದಷ್ಟೇ ಪ್ರಯೋಜನವೂ ಪ್ರಧಾನವಾಗಿದೆ, ಫಲಕಾರಿಯಾಗಿದೆ. ಪ್ರಯೋಜನದ ತಿಳುವಳಿಕೆಯಿಲ್ಲದೆ ಕಲಿಯುವದೆಲ್ಲವೂ ನಿರರ್ಥಕ—ತಿರುಕನ ಕನಸಿನಂತಾಗುವದು. ಪರೀಕ್ಷೆಗಾಗಿ ಕಲಿಯುವದು ನಿಜವಾದ 'ಪ್ರಯೋಜನ'ವಲ್ಲ. ಅದೊಂದು ಭಯ. ಪ್ರಯೋಜನದಲ್ಲಿ ಒಂದು ಪ್ರಭಾವವಿದೆ. ಮಗುವಿನ ಶಕ್ತಿಗಳನ್ನೆಲ್ಲ ಅದು ಚೇತರಿಸುವದು; ಅಕಲ್ಪಿತವಾದ ಹಂಚಿಕೆಗಳು ಆತನಿಗೆ ಹೊಳೆಯುವವು. ಹುಮ್ಮಸವು ಉಂಟಾಗುವದು. ಯಾವ ಎರಡು ತೊಡಕುಗಳನ್ನೂ ಆತನು ಲೆಕ್ಕಿಸುವದಿಲ್ಲ. ಕೈಕೊಂಡ ಕೆಲಸದ ಪೂರ್ತಿಗಾಗಿ ಅಗತ್ಯವೆನಿಸುವ ಎಲ್ಲ ಸಾಧನ ಸಾಮುಗ್ರಿಯನ್ನೂ ಮಗು ಕಲೆಹಾಕುವದು. 'ಮನಸಿದ್ದಲ್ಲಿ ಮಾರ್ಗವಿರುವದೆಂ'ಬ ನಾನ್ನುಡಿಯು ಇದನ್ನೇ ಸೂಚಿಸುತ್ತಿದೆ

ಶಿಕ್ಷಣದಲ್ಲಿ ಯೋಜನಾಪದ್ಧತಿಯು ಈ ಪ್ರಯೋಜನ ಶಕ್ತಿಯನ್ನೇ ಆಧಾರವಾಗಿಟ್ಟುಕೊಂಡಿದೆ. ವಸ್ತುಸ್ಥಿತಿಗೆ ಆದಷ್ಟು ಸಮಾನವಾದ ಪರಿಸ್ಥಿತಿಯಲ್ಲಿ ಒಂದು ತೊಡಕಿನಕಾರ್ಯವನ್ನು ಸರಿಯಾಗಿ ಪೂರ್ತಿಗೊಳಿಸುವದಕ್ಕೆ ಶಿಕ್ಷಣದಲ್ಲಿ 'ಯೋಜನೆ' (Project) ಯೆನ್ನುವರು. ಇಂಥ ಯೋಜನೆ ಒಂದು ಕೃತಿಯಲ್ಲಿ ಸಜೀವವಾದ ಆಸ್ಥೆಯನ್ನು ಹುಟ್ಟಿಸುವದು. ಆ ಕೃತಿಯು ಹೃತ್ಪೂರ್ವಕವಾಗಿಯೂ ಸಹೇತುಕವಾದ ಚಟುವಟಿಕೆಯಾಗುವದು. ಈ ಬಗೆಯ ಯೋಜನೆಯಲ್ಲಿ ಮೂರು ಅಂಗಗಳಿರುವವು. (೧) ಚಟುವಟಿಕೆಗೆ ಪ್ರಯೋಜನದ ಪ್ರೇರಕಶಕ್ತಿಯನ್ನು ಒದಗಿಸುವದು. (೨) ಕೈಕೊಂಡ ಕೃತಿಯ ವಿವರಗಳನ್ನು ಗೊತ್ತು ಪಡಿಸುವದು (೩) ಕೃತಿಯನ್ನು ಪೂರ್ತಿಗೊಳಿಸುವದು. ಮಕ್ಕಳಿಗಾಗಿ ಕೈಕೊಳ್ಳುವ ಯೋಜನೆಗಳು ಶೈಕ್ಷಣಿಕವಾಗಿರಬೇಕು; ಆತನ ಅಂದಿನ ಜೀವನಕ್ಕೆ ಹಾಗೂ ಸಂಧರ್ಭಕ್ಕೆ ಹೊಂದಿಕೊಂಡಿರಬೇಕು; ಅದಕ್ಕಾಗಿ ಅಗತ್ಯವಿರುವ ವಸ್ತುಗಳು ಸುಲಭವಾಗಿ ದೊರೆಯುವಂತಿರಬೇಕು; ಅದಕ್ಕಾಗಿ ಗೊತ್ತುಪಡಿಸಿದ ಸಮಯವನ್ನು ಮೀರದಂತಿರಬೇಕು. ಉದಾಹರಣೆಗಾಗಿ— ವಿದ್ಯಾರ್ಥಿಗಳು ಒಂದು ಪವನಚಕ್ಕೆಯನ್ನು ಮಾಡಬೇಕಾಗಿದೆ. ಇದು ಅವರು ಕೈಕೊಳ್ಳುವ 'ಯೋಜನೆ'. ಇದಕ್ಕಾಗಿ ಬೇಕಾಗುವ ವಸ್ತುಗಳು ಯಾವವೆಂಬುದನ್ನು ಅವರು ತಿಳಿದುಕೊಳ್ಳಬೇಕು. ಸಂದರ್ಭೋಚಿತವಾಗಿ—'ಈ ವಸ್ತುಗಳು ಯಾವದೇಶದಲ್ಲಿ ಉತ್ಪನ್ನವಾಗುತ್ತಿವೆ ?' ಈ ಬಗೆಯ ಭೂಗೋಲ ವಿಷಯವನ್ನು ಶಿಕ್ಷಕನಿಂದ; ಅದರ ರಚನೆ ಹೇಗಿರಬೇಕು ? ಏಕೆ ? ಎಂಬುದನ್ನು ವಿಜ್ಞಾನ ಶಿಕ್ಷಕನಿಂದ; ಕಟ್ಟಿಗೆಯ ಪ್ರಕಾರಗಳಲ್ಲಿ ಬಿರುಸುಮಿದುವುಗಳನ್ನು ಕೈಗಾರಿಕೆಯ ಶಿಕ್ಷಕನಿಂದ ಅವರು ತಿಳಿದು ಕೊಳ್ಳಬೇಕು. ಒಂದು ಯೋಜನೆಯನ್ನು ಪೂರ್ತಿಗೊಳಿಸಲು ಪ್ರಯೋಜನದ ಒತ್ತಾಯದಿಂದ ಅನೇಕ ಉಪಯುಕ್ತ ವಿಷಯಗಳನ್ನು ಅವರು ಆಸ್ಥೆಯಿಂದ ಸ್ವಪ್ರಯತ್ನಪೂರ್ವಕವಾಗಿ ಸಂಪಾದಿಸುವರು. ದಣಿವಿಲ್ಲದೆ ಪರಿಶ್ರಮವನ್ನೂ ಮಾಡುವರು. ಅವರ ಕೃತಿಗೆ ದೊರೆಯುವ ಯಶಸ್ಸು ಎಲ್ಲ ಆಯಾಸವನ್ನೂ ಮರೆಯಿಸುವದು, ಆನಂದವನ್ನುಂಟುಮಾಡುವದು.

ಶಿಕ್ಷಣದಲ್ಲಿ ಯೋಜನಾ ಪದ್ಧತಿಯಿಂದ ಬರುವ ವಿಷಯ ಜ್ಞಾನವು ಕ್ರಮಬದ್ಧವಾಗಿರುವದಿಲ್ಲ, ತುಣುಕು ತುಣುಕಾಗಿರುವದು. ಅಭ್ಯಾಸ ಪತ್ರಿಕೆಯನ್ನು ಅದು ಪೂರ್ಣವಾಗಿ ವ್ಯಾಪಿಸಲಾರದು. ಯೋಜನೆ ಜೀವನದ ಎಲ್ಲ ಕಾರ್ಯಗಳನ್ನೂ ಪ್ರತಿನಿಧಿಸಲಾರವು.

ಎಂಬುದು ಈ ಪದ್ಧತಿಯ ಬಗ್ಗೆ ಆಕ್ಷೇಪಗಳಾಗಿವೆ. ಆದರೆ ನಮ್ಮ ಮನಸ್ಸಿಗೆ ಒಂದು ಅದ್ಭುತವಾದ ಶಕ್ತಿಯಿದೆ. ಹಳೆಯ ಹಾಗೂ ಹೊಸ ವಿಚಾರಗಳನ್ನು ಹೊಂದಿಸಿಕೊಳ್ಳುವದಲ್ಲದೆ ತಾನೂ ಅವುಗಳಿಗೆ ಹೊಂದಿಕೊಂಡು ಬೆಳೆಯುವದು ಮನಸ್ಸಿನ ಕಾರ್ಯವಾಗಿದೆ. ಪ್ರಯೋಜನೆಯಿಂದ ಪ್ರೇರಿತರಾಗಿ, ಸ್ವಪ್ರಯತ್ನದಿಂದ ಸಂಪಾದಿಸಿದ ವಿಷಯ ಜ್ಞಾನವು ಎಷ್ಟೇ ಚೂರುಚೂರಾಗಿದ್ದರೂ ಕಲಿಯುವವರ ಮನಸ್ಸಿನಲ್ಲಿ ಅದು ಬೆರೆತುಕೊಂಡು ಏಕರೂಪವಾಗುವದು. ವಿದ್ಯಾರ್ಥಿಗಳು ಕೈಕೊಳ್ಳುವ ಯೋಜನೆಗಳು ನಿತ್ಯ ಜೀವನದ ಅನುಕರಣಗಳಾಗಿರುವದರಿಂದ ಯೋಜನಾಪದ್ಧತಿಯಲ್ಲಿ ಜೀವನಕ್ಕೂ ಶಿಕ್ಷಣಕ್ಕೂ ಒಂದು ಬಗೆಯ ಸಾಮೀಪ್ಯವೂ ಸಂಪರ್ಕವೂ ಬರುವದು. ಯೋಜನಾ ಪದ್ಧತಿಯಲ್ಲಿಯ ಮಹತಿಯೂ ಉಪಯುಕ್ತತೆಯೂ ಈ ಸಂಗತಿಯಲ್ಲಿಯೇ ಇರುವದೆನ್ನಬಹುದು.

ಗುರುದೇವ ಟಾಗೋರರು– **ಶಾಂತಿ ನಿಕೇತನ** :—'ತನ್ನ ಒಲವು ಶಕ್ತಿಗಳಿಗನುಗುಣವಾಗಿ ಮಗು 'ಸ್ವತಂತ್ರ'ವಾಗಿ ಬೆಳೆಯಬೇಕು. ಬಾಲ್ಯವು ಆನಂದಮಯವಾಗಿರಬೇಕು. ಮಗು ಬೆಳೆಯುವಂತೆ, ಸುತ್ತಲಿನ ಪ್ರಪಂಚವು ವಿಸ್ತಾರಗೊಳ್ಳುವದು, ಸಮೃದ್ಧವಾಗುವದು. ಸಮೃದ್ಧವಾದ ಸುತ್ತಲಿನ ಸೃಷ್ಟಿಯೊಡನೆ ಮಗು ಸಮರಸವಾಗಬೇಕು. ವಿವಿಧ ಸೃಷ್ಟಿಯಲ್ಲಿ ಅಡಗಿದ ಶಾಶ್ವತ ಸತ್ಯವನ್ನು ಆತನು ಕಾಣುವಂತಾಗಬೇಕು'—ಆಧುನಿಕ ಶಿಕ್ಷಣವನ್ನು ರೂಪಿಸಿದ, ರೂಸೋ ಮುಂತಾದ ಮೇಧಾವಿಗಳು ಕಂಡು ಹಿಡಿದ ಈ ತತ್ವಗಳೆ ರವೀಂದ್ರರ ಶಾಂತಿ–ನಿಕೇತನದಲ್ಲಿ ಮೂರ್ತಸ್ವರೂಪವಾಗಿ ನಿಂತಿವೆ.

ಶಿಕ್ಷಣ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂಬ ವಿಚಾರವು ತಮ್ಮ ಮನಸ್ಸಿನಲ್ಲಿ ಹೇಗೆ ಉದಯವಾಯಿತೆಂಬುದನ್ನು ರವೀಂದ್ರರು ಈ ರೀತಿಯಾಗಿ ವಿವರಿಸಿರುವರು :— 'ಪ್ರಾಚೀನ ಭಾರತದ ಮಹಾಗುರುಗಳೆಲ್ಲ ಆರಣ್ಯವಾಸಿಗಳು. ಪವಿತ್ರವಾದ ನದಿಯ ಇಲ್ಲವೆ ಸರೋವರದ ತೀರದಲ್ಲಿ ಯಜ್ಞವೇದಿಕೆ–ಪರ್ಣಕುಟಿಗಳನ್ನು ಕಟ್ಟಿಕೊಂಡು ಅವರು ವಾಸಿಸುತ್ತಿದ್ದರು. ಗೋಧನ ಅವರ ಸಂಪತ್ತು. ಕಾಡಿನಲ್ಲಿ ಬೆಳೆಯುವ ನೀವಾರ ಹಾಗೂ ಹಣ್ಣು ಹಂಪಲು ಅವರ ಆಹಾರ. ನಿಸರ್ಗದ ಮಡಿಲಿನಲ್ಲಿ ಅವರ ಮಕ್ಕಳು ಬೆಳೆಯುವರು. ವಿಶ್ವದೊಡನೆ, ಅದರ ಆಚೆಗಿರುವ ವಿಶ್ವತತ್ವದೊಡನೆ ತಮ್ಮ ಜೀವನವನ್ನು ಅವರು ಒಂದುಗೂಡಿಸುತ್ತಿದ್ದರು. ಗಹನವಾದ ಆತ್ಮತತ್ವವನ್ನು ಕುರಿತು ಆಲೋಚಿಸುತ್ತಿದ್ದರು; ನಾಲ್ಕೂ ದಿಸೆಗಳಿಂದ ವಿದ್ಯಾರ್ಥಿಗಳು ಆಕರ್ಷಿತರಾಗಿ ಅವರೆಡೆಗೆ ಧಾವಿಸುತ್ತಿದ್ದರು. ಶಾಂತಿ ಸ್ವಾತಂತ್ರ್ಯ ಹಾಗೂ ಆತ್ಮಾನುಭವಗಳಿಂದ ಕೂಡಿದ ಪವಿತ್ರವಾದ ಪರಿಸರಣದಲ್ಲಿ ತಮ್ಮ ಜ್ಞಾನದ ಹಸಿವನ್ನು ತೃಪ್ತಿಪಡಿಸಿಗೊಳ್ಳುತ್ತಿದ್ದರು. ಭಾರತದ ಇತಿಹಾಸದಲ್ಲಿ ಈ ಆಶ್ರಮಗಳ ಕಾಲ ಅತ್ಯಂತ ಉಜ್ವಲವಾದುದು. ಭಾರತದ ಆತ್ಮ ಅಂದು ಜಾಗೃತವಾಗಿತ್ತು. ನಮ್ಮ ಮಹಾ ಕವಿಗಳೆಲ್ಲ ಭಕ್ತಿ ಭಾವನೆಯಿಂದ ಈ ಕಾಲವನ್ನು ಸ್ಮರಿಸಿರುವರು........ಪದ್ಮಾನದಿಯ ಮಳಲುದಂಡೆಗುಂಟ ಅಲೆದಾಡುವಾಗ್ಗೆ ಭಾರತದ ಚೈತನ್ಯ ಪುರುಷನ ಕರೆ ನನಗೆ ಕೇಳ ಬಂದಿತು. .....ಪ್ರಾಚೀನರು ಬಿಟ್ಟುಹೋಗಿರುವ ಈ ಸಂಪತ್ತು ಮರಳಿ ಪಡೆಯಬೇಕು ; ಅದರ ಬಲದಿಂದ ಜಗತ್ತಿನಲ್ಲಿ ನಮ್ಮ ನೈಜವಾದ ಸ್ಥಾನವನ್ನು ಗಳಿಸಿಕೊಳ್ಳಬೇಕು.... ಈ ಕರೆಗೆ ನನ್ನ ಹೃದಯ ಓಗೊಟ್ಟಿತು. ಸರಳಜೀವನ, ಸುಸ್ಪಷ್ಟವಾದ ಆತ್ಮ–ದರ್ಶನ, ವಿಶ್ವದೊಡನೆ ಸಾಮರಸ್ಯ–

ಅದರಲ್ಲಿ ಅಡಗಿದ ಅನಂತ ಪುರುಷನ ಅರಿವು- ಈ ಆದರ್ಶಗಳನ್ನು ನಮ್ಮ ಜೀವನಕ್ಕಾಗಿ, ಅದರ ವಿಶುದ್ಧಿಗಾಗಿ ಮತ್ತೆ ಬಳಕೆಯಲ್ಲಿ ತರಬೇಕೆಂದು ನಾನು ನಿರ್ಧಾರಮಾಡಿದೆನು. ಇದರಿಂದ ನನ್ನ ಸಾಹಿತ್ಯ ಜೀವನ ತನ್ನ ಬಂಧನಗಳನ್ನು ಬಿಸುಟಿತು....ನನ್ನ ತಂದೆ ಕಂಡುಕೊಂಡ ಈ ಶಾಂತಿನಿಕೇತನದ ಸ್ಥಳದಲ್ಲಿ ವಾಸಿಸಲು ನಾನು ಬಂದೆನು. ಕ್ರಮೇಣ ದೂರದ ನಿವಾಸಗಳಿಂದ ಇಲ್ಲಿಯ ಸಾಲವೃಕ್ಷದ ನೆರಳಿನಲ್ಲಿ ವಿದ್ಯಾರ್ಥಿಗಳು ನನ್ನ ಸುತ್ತಲು ನೆರೆದರು.

—ಶಾಂತಿನಿಕೇತನದ ಪ್ರಸ್ಥಾಪನೆಗೆ ಭಾರತೀಯ ಉನ್ನತ ಜೀವನಾದರ್ಶಗಳೇ ಹೇಗೆ ನಾಂದಿಯಾಗಿರುವವೆಂಬುದನ್ನು ಮೇಲಿನ ಅವತರಣಿಕೆಯಿಂದ ತಿಳಿಯಬಹುದು.

ಕಲ್ಕತ್ತೆಯಿಂದ ಸುಮಾರು ನೂರು ಮೈಲುಗಳ ಅಂತರದಲ್ಲಿ, ಬೋಲಪೂರವೆಂಬ ಗ್ರಾಮವಿದೆ. ಅದರ ನೆರೆಯಲ್ಲಿಯೆ ರವೀಂದ್ರರ ‘ ಶಾಂತಿನಿಕೇತನ ಸಂಸ್ಥೆ ನೆಲಿಸಿದೆ. ಈ ಸಂಸ್ಥೆ ನಗರದ ಕೋಲಾಹಲದಿಂದ ಸಾಕಷ್ಟು ದೂರದಲ್ಲಿದೆ. ಆದರೆ ಕಲ್ಕತ್ತೆಯಂಥ ಕೇಂದ್ರದ ವಿವಿಧ ಚಟುವಟಿಕೆಗಳಲ್ಲಿ ಸಹಜವಾಗಿ ಅದು ಭಾಗವಹಿಸುವಷ್ಟು ಸಮೀಪವೂ ಆಗಿದೆ. ಇಲ್ಲಿಯ ಪ್ರಶಾಂತ ವಾತಾವರಣ, ಸಾಂಸ್ಕೃತಿಕ ಚಟುವಟಿಕೆಗಳು, ಸಾಂಪ್ರದಾಯಗಳು ವೈಶಿಷ್ಟ್ಯಪೂರ್ಣವಾಗಿವೆ. ಸಾಲವೃಕ್ಷಗಳ ಸಾಂದ್ರವಾದ ನೆರಳು ಸುತ್ತಲೂ ಪಸರಿಸಿದೆ. ಅಲ್ಲೊಂದು ಇಲ್ಲೊಂದು ತಾಡವೃಕ್ಷಗಳ ಗುಂಪುಗಳು. ಸುತ್ತಲಿನ ದಿಬ್ಬಗಳು, ನಡುವಿನ ವಿಶಾಲವಾದ ಬಯಲು. ಸಮೀಪದಲ್ಲಿಯೇ ಸಂತಾಲರ ಅಚ್ಚುಕಟ್ಟಾದ ಗುಡಿಸಲುಗಳು. ಒಂದೆರಡು ಚಿಕ್ಕಝರಿಗಳು— ನಿಸರ್ಗದ ಸುಂದರವಾದ ಸನ್ನಿವೇಶ ಮನಸ್ಸನ್ನು ಸೆರೆ ಹಿಡಿಯುವಂತಿದೆ.

ರವೀಂದ್ರರು ಅಲ್ಲಿ ನೆಲಿಸುವ ಪೂರ್ವದಲ್ಲಿ ಈ ಪ್ರದೇಶವು ಗಿಡಗಂಟಿಗಳಿಲ್ಲದ ಬಂಜೆ ಭೂಮಿಯಾಗಿತ್ತು. ಡಕಾಯಿತರ ಆಸರಸ್ಥಾನದೆಂದು ಹೆಸರಾಗಿತ್ತು. ರವೀಂದ್ರರ ತಂದೆಯಾದ ಮಹರ್ಷಿ ದೇವೇಂದ್ರನಾಥರಿಗೆ ಅವರ ಪ್ರವಾಸಗಳಲ್ಲಿ ಈ ಪ್ರದೇಶವು ಕಣ್ಣಿಗೆ ಬಿದ್ದಿತು. ಈ ನಿವಾಂತಸ್ಥಳವು ಅವರಿಗೆ ಒಳ್ಳೇ ಆಕರ್ಷಕವೆನಿಸಿತು. ಆ ಕಾಲಕ್ಕೆ ಈ ಭಾಗದಲ್ಲಿ ಮೂರೇ ಗಿಡಗಳಿದ್ದವು. ಈ ಗಿಡಗಳು ಇನ್ನೂ ಅವೆ. ಈ ಗಿಡಗಳ ಕೆಳಗೆ ಅವರು ತಮ್ಮ ಡೇರೆಯನ್ನು ಹೂಡಿದರು. ಆಗಾಗ್ಗೆ ಬಂದು ಅನೇಕವಾರಗಳವರೆಗೆ ಅಲ್ಲಿ ಅವರು ವಾಸಿಸುವರು. ಚಿಂತನೆ—ಪ್ರಾರ್ಥನೆಗಳಲ್ಲಿ ತಲ್ಲೀನರಾಗುವರು. ಅವರ ಸ್ಮೃತಿಗಾಗಿ ಈ ಗಿಡಗಳ ಕೆಳಗೆ ಅವರ ಪ್ರೀತಿಯ ವೇದಮಂತ್ರವನ್ನು ಕೆತ್ತಿದ ಒಂದು ಅಮೃತಶಿಲೆಯಿರುವದು. ಆಶ್ರಮನಿವಾಸಿಗಳು ಈ ಸ್ಥಳದಲ್ಲಿ ಕೆಲ ಪ್ರಸಂಗಗಳಲ್ಲಿ ಸಮ್ಮಿಲಿತರಾಗಿ ಮಹರ್ಷಿಗಳಿಗೆ ತಮ್ಮ ಭಕ್ತಿಯನ್ನು ಸಲ್ಲಿಸುವರು.

ಶಾಂತಿ—ನಿಕೇತನದಲ್ಲಿ ಗುರುಗಳೆಲ್ಲ ಅಲ್ಲಿಯೆ ಮನೆಮಾಡಿಕೊಂಡಿರುವರು. ವಿದ್ಯಾರ್ಥಿಗಳೆಲ್ಲರ ಊಟವಸತಿಗಳೂ ಅಲ್ಲಿಯೆ. ಇದೊಂದು ‘ವಾಸ್ತವ್ಯ-ಪೀಠ—’ ಪ್ರಾಚೀನ ಕಾಲದ ‘ ಅಗ್ರಹಾರ ’ ವನ್ನು ಹೆಚ್ಚಾಗಿ ಹೋಲುತ್ತದೆ. ಆದರಿಂದ ಹದಿನೆಂಟರ ವರೆಗಿನ ವಯೋಮಾನ ವಿದ್ಯಾರ್ಥಿಗಳಿಗೆಲ್ಲ ಪ್ರವೇಶವಿದೆ. ಚಿಕ್ಕವಯಸ್ಸಿನ ವಿದ್ಯಾರ್ಥಿಗಳ ಆರೈಕೆಯನ್ನು ಪ್ರತ್ಯೇಕ ಶಿಕ್ಷಕರು ವಹಿಸಿಕೊಳ್ಳುವರು.— ಹತ್ತು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕ.

ಇದರಿಂದ ಅವರ ಬಗ್ಗೆ ವೈಯಕ್ತಿಕ ಲಕ್ಷವನ್ನು ಪೂರೈಸಲು ಅನುಕೂಲವಾಗುವದು. ಕೆಲವು ಸಂದರ್ಭಗಳಲ್ಲಿ ಶಿಕ್ಷಕರ ಮನೆಯಲ್ಲಿಯೆ ಅವರ ಊಟದ ಏರ್ಪಾಡು ಮಾಡುವರು. ಎಲ್ಲ ಜಾತಿ-ಮತಗಳ ವಿದ್ಯಾರ್ಥಿಗಳನ್ನೂ ಇಲ್ಲಿ ಕಾಣಬಹುದು. ತಿಳುವಳಿಕೆಯು ಪ್ರಬುದ್ಧ ವಯಸ್ಸಿನವರಾದ ಮೇಲೆ, ತಮ್ಮ ಮತ ಪಂಥಗಳಂತೆ ನಡೆದು ಕೊಳ್ಳಲು, ಇಲ್ಲವೆ ಬಿಡಲು ಅವರಿಗೆ ಸ್ವಾತಂತ್ರ್ಯವಿರುವದು.

ಶಾಂತಿ–ನಿಕೇತನದ ಆದರ್ಶಕ್ಕೆ ಅನುಗುಣವಾಗಿ ಇಲ್ಲಿಯ ಕಟ್ಟಡಗಳೂ ನಿರಾಡಂಬರವಾದವು; ವಿದ್ಯಾರ್ಥಿಗಳ ಜೀವನಕ್ರಮವೂ ಸಾತ್ವಿಕ ಹಾಗೂ ಸರಳವಾದುದು. ದುಡಿತ ಹಾಗೂ ಸ್ವಾವಲಂಬನೆಗಳಿಗೆ ಇಲ್ಲಿ ತುಂಬಾ ಪ್ರಾಶಸ್ತ್ಯವಿದೆ. ಸಾದಾ ಜೀವನ, ಉನ್ನತ ವಿಚಾರ– ಶಾಂತಿ ನಿಕೇತನದ ಎಲ್ಲ ಅಂಗಗಳಲ್ಲಿಯೂ ಒಡೆದು ಕಾಣುವಂತಹದು. ವಸತಿಗೃಹದ ಆಡಳಿತವೆಲ್ಲವೂ ವಿದ್ಯಾರ್ಥಿಗಳ ಕೈಯಲ್ಲಿ, ಸಂಸ್ಥೆಯ ವಿವಿಧ ಚಟುವಟಿಕೆಗಳನ್ನು ಸಂಘಟಿಸುವದು, ಅವುಗಳನ್ನು ಸರಿಯಾಗಿ ಸಾಗಿಸಿಕೊಂಡು ಹೋಗುವದು ವಿದ್ಯಾರ್ಥಿಗಳ ಕಾರ್ಯ. ಶಿಕ್ಷಕರು ಮಾರ್ಗದರ್ಶನಮಾಡುವರು.

ಸಾಂಸ್ಕೃತಿಕವಾಗಿ ಒಳ್ಳೆ ಪ್ರಭಾವವನ್ನು ಬೀರುವ ಇಲ್ಲಿಯ ಕೆಲವೊಂದು ವಿಶಿಷ್ಟ ಸತ್‌ಸಂಪ್ರದಾಯಗಳನ್ನು ಹೇಳಿಕೊಡಬಹುದು. ನಸುಕಿನಲ್ಲಿ ಪ್ರಭಾತ ಪೂಜೆ. ರವೀಂದ್ರರ ಗೀತಗಳನ್ನು ಸುಮಧುರವಾಗಿ ಹೇಳುತ್ತ ಆಶ್ರಮದ ಸುತ್ತಲೂ ತಿರುಗಾಡುವರು. ಇದು ಮಂಗಲಗೀತ. ಪ್ರಾತಃಕಾಲದ ಮೌನ ಪ್ರಾರ್ಥನೆ: ಉದಯೋನ್ಮುಖನಾದ ಸೂರ್ಯನನ್ನು ಎದುರಿಸಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಕೆಲ ನಿಮಿಷ ಧ್ಯಾನವನ್ನೂ ನಡೆಸಬೇಕು. ಧ್ಯಾನಕ್ಕೆ ಇಂಥದೊಂದು ಶ್ಲೋಕ–ಮಂತ್ರ ಪಠಿಸಬೇಕೆಂದು ಗೊತ್ತುಮಾಡಿಲ್ಲ. ವಿಮುಕ್ತ ಮನಸ್ಸಿನಿಂದ ಸೂರ್ಯಕಿರಣಗಳೊಡನೆ ಬರುವ ಸುವಿಚಾರಗಳನ್ನು ಅವರು ಸಂಗ್ರಹಿಸಬೇಕು. ಸೂರ್ಯಾಸ್ತದ ಸಮಯದಲ್ಲಿಯೂ ಇದೇ ರೀತಿಯಾಗಿ ನಡೆಯುವದು. ಸಾಯಂಕಾಲದಲ್ಲಿಯೂ ರವೀಂದ್ರರ ಒಂದು ಸುಂದರ ಗೀತದೊಡನೆ 'ಸಂಧ್ಯಾ ಪೂಜೆ' ನಡೆಯುವದು. ಇಲ್ಲಿಯ ವಿದ್ಯಾರ್ಥಿಗಳು ಒಂದು ಸುಮಧುರವಾದ, ಸ್ವರ್ಗೀಯ ಗೀತದೊಡನೆ ದಿನವನ್ನು ಪ್ರಾರಂಭಿಸಿ ಅಂಥ ಗೀತದೊಡನೆಯೆ ದಿನವನ್ನು ಮುಕ್ತಾಯಗೊಳಿಸುವರು. ಋತುಮಾನೋತ್ಸವಗಳು ಇನ್ನೊಂದು ಬಗೆಯ ಸಮಾರಂಭ. ಗುರುದೇವ ಈ ಸಂದರ್ಭಗಳಿಗಾಗಿಯೆ ನೃತ್ಯ–ನಾಟಕೆಗಳನ್ನು ರಚಿಸುತ್ತಿದ್ದರು. ಸ್ವಂತವಾಗಿ ಅವುಗಳಲ್ಲಿ ಪಾತ್ರವಹಿಸುತ್ತಿದ್ದರು. ವಿದ್ಯಾರ್ಥಿಗಳು ಹೂ–ಚಿಗುರುಗಳಿಂದ ರಂಗಸಜ್ಜಿಕೆಯನ್ನು ರಚಿಸುವರು. ಇಲ್ಲಿ ದೇವಾಲಯವಿದೆ, ಆದರೆ ಮೂರ್ತಿ ಪೂಜೆಯಿಲ್ಲ. ಮೂರ್ತಿ ಪೂಜೆ ಹಾಗೂ ಯಾವದೇ ಧರ್ಮದ ನಿಂದೆಯೂ ಈ ಆಶ್ರಮದಲ್ಲಿ ನಡೆಯಬಾರದೆಂದು ದ್ವಿಜೇಂದ್ರನಾಥರು ನಿಷೇಧಿಸಿರುವರು. ಅವ್ಯಕ್ತನೂ, ಅವಿನಾಶಿಯೂ ಆಗಿರುವ ಆದಿತತ್ವದ ಚಿಂತನೆಯೆ ಇಲ್ಲಿಯ ಪೂಜೆ. 'ಓಂ ಶಾಂತಿಃ ಶಾಂತಿಃ ಶಾಂತಿಃ' ಇದೊಂದೇ ಬೀಜ ಮಂತ್ರ. ಭಾರತೀಯ ಅಧ್ಯಾಪನ ಕಲೆಯ ಉನ್ನತ ಸಂಪ್ರದಾಯಗಳನ್ನೂ ಆಧುನಿಕ ಶಿಕ್ಷಣದ ಒಳ್ಳೆ ಅಂಶಗಳನ್ನೂ ಸಮನ್ವಿತಗೊಳಿಸಿದ ಈ ಸಂಸ್ಥೆಯಲ್ಲಿ, ಪೀಯರ್ಸನ್‌ರು ಹೇಳುವಂತೆ–ವಿದ್ಯಾರ್ಥಿಗಳು ಆತ್ಮಸಾತ್ ಮಾಡಿಕೊಳ್ಳುವ ಆದರ್ಶವು ಶ್ರೇಷ್ಠತಮವಾಗಿದೆ.

ಶಾಂತಿ ನಿಕೇತನದಲ್ಲಿ, ವಿದ್ಯಾರ್ಥಿಗಳು ಆತ್ಮಶಕ್ತಿಗಳ ವಿಕಾಸಕ್ಕಾಗಿ ನಡೆಸುವ ಕೆಲವೊಂದು ಚಟುವಟಿಕೆಗಳು ಸಾಂಸ್ಕೃತಿಕ ಚಟುವಟಿಕೆಗಳೆಂಬ ಹೆಸರಿನಿಂದ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲಿಯೂ ಇಂದು ಕಂಡು ಬರುವವು. ಹೊರಗಿನ ನಿಯಂತ್ರಣವು ಎಷ್ಟೇ ಹಿತಕರ ವಾಗಿರಲಿ, ಸ್ವನಿಯಂತ್ರಣವನ್ನು ಸರಿಗಟ್ಟಲಾರದು— ಈ ಸಂಸ್ಥೆಯ ಆಡಳಿತದಲ್ಲಿ ಇದು ಮುಖ್ಯ ಸೂತ್ರವಾಗಿದೆ. ಶಿಸ್ತು ಪಾಲಿಸುವ ಹೊಣೆಗಾರಿಕೆಯನ್ನು ವಿದ್ಯಾರ್ಥಿಗಳೆ ಇಲ್ಲಿ ವಹಿಸುವರು. ತಮ್ಮ ದೇಶದ ನ್ಯಾಯಮಂಡಳ. ಅದರ ತೀರ್ಪಿಗೆ ಎದರು ಮಾತಾಡದೆ ಎಲ್ಲರೂ ತಲೆ ಬಾಗುವರು. ಶಾಲೆಯ ಇನ್ನುಳಿದ ಚಟುವಟಿಕೆಗಳನ್ನು ವಿದ್ಯಾರ್ಥಿಗಳು ತಮ್ಮ ಸಮಿತಿಗಳ ಮುಖಾಂತರ ಸಾಗಿಸುವರು. ಕೈ ಬರೆಹದ ಪತ್ರಿಕೆಗಳು ಇವುಗಳಲ್ಲಿ ಮಹತ್ವವಾದವುಗಳು. ಪ್ರತಿಯೊಂದು ವಿಭಾಗವೂ ತನ್ನದೇ ಪ್ರತಿಕೆಯನ್ನು ಹೊರಡಿ ಸುವದು. ಸಂಸ್ಥೆಯ ಹುಟ್ಟು ಹಬ್ಬದಲ್ಲಿ ಈ ಪತ್ರಿಗಳ ಪ್ರದರ್ಶನವೆ ಜರಗುವದು. ಅಂದಿನ ಸಭೆಗೆ ಅಧಿಪತಿಯಾದ ಶಿಕ್ಷನಿಗೆ ವಿಶೇಷ ಸನ್ಮಾನ-ಹೂಗಳಿಂದ, ಕಮಲಗಳಿಂದ ಆತನನ್ನು ಅಲಂಕರಿಸುವರು. ಗುರುದೇವ ಮಕ್ಕಳ ಬರೆಹಗಳನ್ನು ವಿಮರ್ಶಿಸುತ್ತಿದ್ದರು, ಪುರಸ್ಕರಿಸು ತ್ತಿದ್ದರು. ಈ ಪತ್ರಿಕೆಗಳ ಮುಖಾಂತರ ತಮ್ಮ ಚಿತ್ರಕಲೆಯನ್ನು ಪ್ರಾರಂಭಿಸಿದ ತರುಣ ಕಲಾವಿದರು ಇಂದು ಕೀರ್ತಿಶಾಲಿಗಳಾಗಿರುವರು. ಶೈಕ್ಷಣಿಕ ಪ್ರವಾಸಗಳನ್ನೂ ಆಗಾಗ್ಗೆ ಏರ್ಪಡಿಸುವರು. ಇಡೀದಿನವನ್ನೆಲ್ಲ ಅಂದು ಮಕ್ಕಳು ನಿಸರ್ಗದ ಸಹವಾಸದಲ್ಲಿ ಕಳೆಯು ವರು. ವಿಶೇಷ ಸಂಗತಿಯಂದರೆ— ಮಳೆಯಾಗುವ ದಿನ. ಕಾರ್ಮೋಡಗಳುಕವಿದು, ಗುಡುಗು ಮಿಂಚುಗಳು ತೋರಿಬಂದರೆ, ವಿದ್ಯಾರ್ಥಿಗಳಿಗೆ ಹಿಡಿಸಲಾರದಷ್ಟು ಹಿಗ್ಗು. ಬರಿಮೈಯಿಂದ ಎಲ್ಲರೂ ಗುರುಗಳೊಡನೆ 'ಮಳೆಯ ಸಂಚಾರ'ಕ್ಕೆ ಹೊರಡುವರು. ಪೂರ್ಣ ತೋಯಿಸಿಕೊಂಡು ತಿರುಗಿ ಬರುವರು. ಇದೊಂದು ಬಗೆಯ ನಿಸರ್ಗಪೂಜೆ, ನಿಸರ್ಗೋಪಾಸನೆ.

ಶಾಲೆಮನೆಗಳ ಅಂತರವಿಲ್ಲದ ಜೀವನಕ್ರಮದಲ್ಲಿ, ನಿಸರ್ಗದ ನಿಕಟಸಹವಾಸದಲ್ಲಿ, ಹಿರಿದಾದ ಆದರ್ಶಗಳ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳ-ಕ್ರಮವು ಇಲ್ಲಿ ಸಾಗುವದು. ಇಂಥ ಸನ್ನಿವೇಶದಲ್ಲಿ ಬೆಳೆದ ಅವರ ಮುಖದ ಮೇಲೆ ತೇಜಸ್ಸು, ಮನಸ್ಸಿನಲ್ಲಿ ಶಾಂತಿ, ಹೃದಯ ದಲ್ಲಿ ಪ್ರೀತಿ-ಭಕ್ತಿಗಳು ಸನ್ನಿವೇಶದ ಹಾಗೂ ಸಾಂಸ್ಕೃತಿಕ ಸಂಪ್ರದಾಯಗಳ ಪ್ರಭಾವದಿಂದ ತಾವಾಗಿ ಜನಿಸುವವು. ಗುರುದೇವ ಹೇಳುವಂತೆ— 'ಶಾಲೆ, ಮನೆ ಹಾಗೂ ದೇವಾ ಲಯಗಳನ್ನು ಒಂದೇ ಸಂಸ್ಥೆಯಲ್ಲಿ ಒಂದು ಗೂಡಿಸುವದು ನನ್ನ ಕಲ್ಪನೆ........ ವಿದ್ಯಾರ್ಥಿಗಳು ಈ ಸಂಸ್ಥೆಯಿಂದ ಪಡೆಯುವ ಮೊದಲನೇ ಪ್ರಯೋಜನವೆಂದರೆ—ನಿಸರ್ಗ ಪ್ರೇಮ ಹಾಗೂ ಸಕಲ ಪ್ರಾಣಿಗಳಲ್ಲಿ ಪ್ರೀತಿ ಸಹಾನುಭೂತಿಗಳು........ ನಿಸರ್ಗ ಅಜ್ಞಾತ ವಾಗಿ ಬೀರುವ ಒಳ್ಳೆ ಪ್ರಭಾವದಲ್ಲಿ ಈ ಪ್ರದೇಶದ ಪಾವಿತ್ರ್ಯದಲ್ಲಿ, ಉಪಾಸನೆಗೆ ಸದೃಶವಾದ ಇಲ್ಲಿಯ ನಿತ್ಯ ಜೀವನಕ್ರಮದಲ್ಲಿ ಪ್ರಯತ್ನ ಪೂರ್ವಕವಾಗಿ ಕಲಿಸುವದಕ್ಕಿಂತಲೂ ನಮಗೆ ಹೆಚ್ಚಿಗೆ ನಂಬಿಕೆಯಿದೆ.

**ಗಾಂಧೀಜಿ-ಮೂಲಶಿಕ್ಷಣ (ನಯೀ ತಾಲೀಮ)** :— ಸ್ವತಂತ್ರ ಭಾರತದಲ್ಲಿ ಮೂಲ ಶಿಕ್ಷಣಕ್ಕೆ ಮನ್ನಣೆ ದೊರೆತಿದೆ. ವಾದ ಭೂಮಿಯ ಸೀಮೆಯನ್ನು ದಾಟಿ

ಈ ಯೋಜನೆ ಇಂದು ಸ್ಥಿರವಾಗಿ ನೆಲೆಸಿದೆ. ಪ್ರಯೋಗದ ಪರಿಶೀಲನೆಯಿಂದ ಶಿಕ್ಷಣ ಶಾಸ್ತ್ರಜ್ಞರು ಮೂಲ ಶಿಕ್ಷಣಕ್ಕೆ 'ಪೂರ್ಣತೆ'ಯ ಮುದ್ರೆಯನ್ನೊತ್ತಿದ್ದಾರೆ. ಮೂಲ ಶಿಕ್ಷಣವು ಸಮಗ್ರ ಶಿಕ್ಷಣದ ಪೂರ್ಣವಾದ ಯೋಜನೆ—ಇದೊಂದು ಕಲಿಸುವ ಪದ್ಧತಿ ಮಾತ್ರ ಅಲ್ಲ.

ವಿದೇಶಿ ಶಿಕ್ಷಣ ಪದ್ಧತಿಯ ಹಿನ್ನೆಲೆಯಲ್ಲಿ ಮೂಲ-ಶಿಕ್ಷಣದ ಗುಣಾಂಶಗಳನ್ನು ನಾವು ಕಂಡುಕೊಳ್ಳಬೇಕು. ಹೀನವಾದ ಉದ್ದೇಶ ಸಾಧನೆಗಾಗಿ ಹಿಂದಿನ ಶಿಕ್ಷಣವು ತಪ್ಪು ದಾರಿಯಿಂದ ಸಾಗಿತ್ತು. ಭಾರತದ ಜನತೆಗೆ ಅದರಿಂದ ಹೇಳಲಾರದಷ್ಟು ಹಾನಿಯೊದಗಿತು. ಆ ಶಿಕ್ಷಣವು ಏಕಾಂಗಿಯಾಗಿತ್ತು, ಬುದ್ಧಿವಿಕಾಸಕ್ಕೆ ಮಾತ್ರ ಅದರಲ್ಲಿ ಅಲ್ಪಶಃ ಎಡೆಯಿತ್ತು. ಪರೀಕ್ಷೆಯೆ ಪ್ರಧಾನ-ಉಳಿದುದೆಲ್ಲವೂ ಅದಕ್ಕೆ ಸಾಧನ. ಭಾರತದ ಸಾಹಿತ್ಯ–ಸಂಸ್ಕೃತಿಗಳನ್ನು ಹೀಯಾಳಿಸುವ ಮನೋವೃತ್ತಿಯನ್ನು ಅದು ಹುಟ್ಟಿಸಿತು. ಇಲ್ಲಿಯ ಜನಜೀವನಕ್ಕೆ ಅದು ಹೊಂದಿಕೊಳ್ಳಲಿಲ್ಲ. ಸಮಾಜದ ಒಗ್ಗಟ್ಟನ್ನೂ ಮುರಿದು ಬಿಟ್ಟಿತು. ಹೆಚ್ಚಿನ ದೋಷವೆಂದರೆ—ಆ ಶಿಕ್ಷಣದಲ್ಲಿ ಹೃದಯ ಸಂಸ್ಕಾರಕ್ಕೆ— ಭಾವಗಳ ಸಂಸ್ಕರಣಕ್ಕೆ— ಸ್ಥಾನವೇ ಇರಲಿಲ್ಲ. ಇದರಿಂದ ಸ್ವಾರ್ಥ–ಸ್ಪರ್ಧೆಗಳಂತಹ ಕೀಳು ಭಾವನೆಗಳಿಗೆ ಪುಟದೊರೆಯಿತು.

ಮೂಲ ಶಿಕ್ಷಣವು, ಗಾಂಧೀಜಿಯವರು ರಾಷ್ಟ್ರಕ್ಕೆ ಕೊಟ್ಟಿರುವ ಶ್ರೇಷ್ಠತಮವಾದ ಕಾಣಿಕೆಯಾಗಿದೆ. ಸತ್ಯ, ಅಹಿಂಸೆಗಳಿಂದಲೇ ಈ ಯೋಜನೆ ಪ್ರೇರಿತವಾಗಿದೆ, ಪೂರ್ಣತೆಯನ್ನೂ ಪಡೆಯುತ್ತಿದೆ. ಪ್ರಯೋಗದ ಪರೀಕ್ಷೆಯಿಲ್ಲದೆ ಯಾವ ವಿಚಾರವನ್ನೂ ಜನತೆಯ ಎದುರು ಗಾಂಧೀಜಿಯವರು ಇಡುತ್ತಿರಲಿಲ್ಲ. ದಕ್ಷಿಣ ಆಫ್ರಿಕೆಯ ಸತ್ಯಾಗ್ರಹದಲ್ಲಿ ಅಲ್ಲಿ ನೆಲೆಸಿದ ಅನೇಕ ಭಾರತೀಯರು ಭಾಗವಹಿಸಿದರು. ಸೆರೆಮನೆಯನ್ನು ಸೇರಿದರು. ಅವರೆಲ್ಲರ ಕುಟುಂಬ ಪೋಷಣೆಯ ಭಾರವನ್ನು ಗಾಂಧೀಜಿಯವರು ನೋಡಿಕೊಳ್ಳಬೇಕಾಯಿತು. ಅವರಿಗಾಗಿ ಒಂದು ಆಶ್ರಮವನ್ನು ಗಾಂಧೀಜಿಯವರು ಏರ್ಪಡಿಸಿದರು. ಕೆಲೆನ್ ಬ್ಯಾಕ್‌ಯೆಂಬ ಯಹೂದೀ ಸ್ನೇಹಿತನು ಒಂದು ವಿಶಾಲವಾದ ಭೂಮಿಯನ್ನು ಕಾಣಿಕೆಯಾಗಿ ಕೊಟ್ಟನು. ಅಲ್ಲಿ ನೀರಿನ ಅನುಕೂಲತೆಯಿತ್ತು. ತಾತ್ಪೂರ್ತಿಕ ವಸತಿಗಳನ್ನು ರಚಿಸಲಾಯಿತು. ಇಲ್ಲಿ ನೆಲೆಸಿದ ಕುಟುಂಬಗಳು ಭಾರತದ ವಿವಿಧ ಭಾಗಗಳಿಂದ ಬಂದವರು. ಭಿನ್ನ ಭಾಷೆ, ಭಿನ್ನ ಮತಪಂಥಗಳಿಗೆ ಸೇರಿದವರು. ಈ ಆಶ್ರಮಕ್ಕೆ ಟಾಲಸ್ಟಾಯರ ಹೆಸರನ್ನಿಡಲಾಗಿತ್ತು. ಆಶ್ರಮದಲ್ಲಿ ನೆಲೆಸಿದ ತಮ್ಮ ಅನುಯಾಯಿಗಳ ಮಕ್ಕಳಿಗೆಲ್ಲ ಹಾಗೂ ತಮ್ಮ ಸ್ವಂತ ಮಕ್ಕಳಿಗೆಲ್ಲ ಗಾಂಧೀಜಿಯವರು ಮೂಲ ಶಿಕ್ಷಣದ ತತ್ವಗಳಿಗನುಸಾರವಾಗಿಯೆ ಇಲ್ಲಿ ಶಿಕ್ಷಣಕೊಡುತ್ತಿದ್ದರು. ಮಧ್ಯಾಹ್ನದಲ್ಲಿ ಮಕ್ಕಳಿಗೆ ಸಾಮಾನ್ಯ ಶಿಕ್ಷಣ. ಮುಂಜಾನೆ ಹಾಗೂ ಸಾಯಂಕಾಲ, ಆಶ್ರಮದ ಬಾಲಕರು ತೋಟದಲ್ಲಿ, ಹೊಲದಲ್ಲಿ ಕೆಲಸಮಾಡುವರು. ಚರ್ಮದ ಕೆಲಸಮಾಡುವರು. ಈ ಕೆಲಸಗಳಲ್ಲಿ ತೊಡಗಿದಾಗ್ಗೆ; ಮಕ್ಕಳ ವಿವಿಧ ಚಟುವಟಿಕೆಗಳಿಗೆ ಅಗತ್ಯವೆನಿಸಿದ ಹಾಗೂ ಅನುಬಂಧಿತವಾದ ವಿಷಯ ಜ್ಞಾನವನ್ನು ಅವರಿಗೆ ಮಾಡಿಕೊಡಲಾಗುತ್ತಿತ್ತು. ಉದ್ಯೋಗ ಹಾಗೂ ಬುದ್ಧಿವಿಕಾಸಗಳಲ್ಲಿರುವ ಸ್ವಾಭಾವಿಕವಾದ ಸಮವಾಯ–ಸಮನ್ವಯಗಳನ್ನು ಗಾಂಧೀಜಿಯವರು ಇಲ್ಲಿ ಕಂಡುಹಿಡಿದರು. ಈ ಪ್ರಯೋಗದ ಹಿನ್ನೆಲೆಯಲ್ಲಿಯೆ ಮೂಲ ಶಿಕ್ಷಣವು ಜನ್ಮತಾಳಿದೆ.

ಕೃತಿ ಮುಖಾಂತರವಾಗಿ ಮಕ್ಕಳ ವಿದ್ಯಾಭ್ಯಾಸವನ್ನು ಸಾಗಿಸಬೇಕೆಂಬ ವಿಚಾರವು ಶಿಕ್ಷಣ ಪ್ರಪಂಚದಲ್ಲಿ ತೀರ ಹೊಸದಲ್ಲ. 'ಮಗುವಿನ ಶಿಕ್ಷಣವು ಮಾತಿನಿಂದಲ್ಲ, ಕೃತಿಯಿಂದ ಸಾಗಬೇಕು',—ಎಂದು ರೂಸೋನು ಹೇಳಿರುವನು. ಇದೇ ತತ್ವವನ್ನೇ ಗಾಂಧೀಜಿಯವರು ಹೆಚ್ಚು ವಿಶದವಾಗಿ ಹೇಳಿರುವರು:— 'ಒಂದು ಉತ್ಪಾದಕವೃತ್ತಿ ಶಿಕ್ಷಣ ದಿಂದಲೆ ಮಗುವಿನ ಶಿಕ್ಷಣವನ್ನು ನಾನು ಪ್ರಾರಂಭಿಸಬೇಕೆನ್ನುವನು. ಶಿಕ್ಷಣದ ಪ್ರಾರಂಭ ದಿಂದಲೆ ಆತನು ಗಳಿಸುವಂತವನಾಗಬೇಕು. ಶಿಕ್ಷಣವೆಂದರೆ— ಮಗುವಿನ ಶರೀರ, ಮನಸ್ಸು ಹಾಗೂ ಆತ್ಮ ಈ ಮೂರರಲ್ಲಿರುವ ಉದಾತ್ತವಾದ ಅಂಶಗಳೆಲ್ಲ ಹೊರಗೆ ಬರುವಂತೆ ಮಾಡುವದು.' ೧೯೩೭ ನೆ ಜುಲೈ ತಿಂಗಳಲ್ಲಿ ಗಾಂಧೀಜಿಯವರು ತಮ್ಮ ಅನುಭವದ ಬೆಳಕಿನಲ್ಲಿ, ಅಂತರಂಗದ ಪ್ರೇರಣೆಯಿಂದ ಕಂಡುಕೊಂಡ ಮೂಲ ಶಿಕ್ಷಣದ ರೂಪರೇಷೆಯನ್ನು ಜನತೆಯ ಎದುರು ಈ ರೀತಿಯಾಗಿ ಇಟ್ಟರು— 'ಮಗುವಿನ ಶಿಕ್ಷಣವು ಜೀವನೋಪಯೋಗಿಯಾದ ಕೈಗಾರಿಕೆಯಿಂದ ಪ್ರಾರಂಭವಾಗಬೇಕು. ಮಕ್ಕಳಿಂದ ರಚಿತ ವಾದ ವಸ್ತುಗಳನ್ನು ಸರಕಾರವು ಕೊಂಡರೆ ಶಿಕ್ಷಣವು ಸ್ವಾವಲಂಬಿಯಾಗಬಲ್ಲದು. ಕೇವಲ ಸಾಕ್ಷರತೆಯು ಶಿಕ್ಷಣವಲ್ಲ. ಮಗುವಿನ ಶರೀರ, ಮನಸ್ಸು ಹಾಗೂ ಅಂತಃಕರಣಗಳ ಸಮ ನ್ವಯ ವಿಕಾಸವಾಗಬೇಕು. ಇವುಗಳಲ್ಲಿ ಒಳ್ಳೆಯದಾದುದೆಲ್ಲವನ್ನೂ ಹೊರಗೆ ಬರುವಂತೆ ಮಾಡುವದೆ ಶಿಕ್ಷಣ. ಕೈಗಾರಿಕೆಯನ್ನು ಶಾಸ್ತ್ರೀಯವಾಗಿ— ಏಕೆ, ಹೇಗೆ? ಎಂದು ಪ್ರತಿ ಹೆಜ್ಜೆಗೂ ವಿಮರ್ಶೆಯಿಂದಕೂಡಿ ಕಲಿಸಿದರೆ ಬುದ್ಧಿವಿಕಾಸವು ಸಹಜವಾಗಿ ಆಗುವದು'.

ಗಾಂಧೀಜಿಯವರ ಈ ವಿಚಾರಗಳಿಂದ ಸಾಂಪ್ರದಾಯಿಕ ಶಿಕ್ಷಣ ಪ್ರಪಂಚದಲ್ಲಿ ಸಿಡಿಲು ಎರಗಿದಂತಾಯಿತು. ಈ ಸೂತ್ರರೂಪವಾದ ವಿಚಾರಗಳನ್ನು ವರ್ಧಾದಲ್ಲಿ ಶಿಕ್ಷಣ ತಜ್ಞರು ಪರಿಶೀಲಿಸಿದರು. ಹರಿಪುರದ ಕಾಂಗ್ರೆಸ್ಸು ಈ ಯೋಜನೆಗೆ ಮನ್ನಣೆಯಿತ್ತಿತು. ಪ್ರಯೋ ಗಾನುಭವಗಳಿಂದ ಮೂಲೋದ್ಯೋಗವೇ ಶಿಕ್ಷಣದ ಏಕಮೇವ ಕೇಂದ್ರವಾಗಿ ಉಳಿಯದೆ, ನಿಸರ್ಗ ಹಾಗೂ ಸಮಾಜಗಳೂ ಶಿಕ್ಷಣದ ಕೇಂದ್ರಗಳೆಂದು ಗೊತ್ತಾಯಿತು.

ಗಾಂಧೀಜಿಯವರು ಈ ಯೋಜನೆಗೆ 'ನಯೀ ತಾಲೀಮು'—'ಹೊಸಶಿಕ್ಷಣ' ವೆಂಬ ಹೆಸರನ್ನಿಟ್ಟರು. 'ಬುನಿಯಾದಿ ರಾಷ್ಟ್ರೀಯ ಶಿಕ್ಷಾ,' 'ಬೇಸಿಕ್' ಶಿಕ್ಷಣ; ವರ್ಧಾಶಿಕ್ಷಣ ಮುಂತಾದ ಬೇರೆ ಬೇರೆ ಹೆಸರುಗಳಿಂದಲೂ ಇದನ್ನು ಗುರುತಿಸುವದುಂಟು. 'ಉದ್ಯೋಗ ಮೂಲ ಶಿಕ್ಷಣ' ವೆಂಬುವ ಹೆಸರು ಈ ಹೊಸ ಶಿಕ್ಷಣಕ್ಕೆ ಹೆಚ್ಚಾಗಿ ಹೊಂದಿ ಕೊಳ್ಳುವದು. ಉತ್ಪಾದಕವಾದ ಒಂದು ಉದ್ಯೋಗವು ಶಿಕ್ಷಣದ ಮೂಲಬೇರಿನಂತಾಗ ಬೇಕು. ಗಿಡದ ಬೇರುಗಳು ಅದರ ಬೆಳವಣಿಗೆಗೆ ಬೇಕಾಗುವ ಪೋಷಕ ದ್ರವ್ಯಗಳನ್ನು ಒದಗಿಸುವಂತೆ, ಮೂಲೋದ್ಯೋಗವು ಮಗುವಿನ ಸರ್ವತೋಮುಖವಾದ ವಿಕಾಸಕ್ಕೆ ಸಾಧನವಾಗಬೇಕು. ಜೀವನ ಹಾಗೂ ಶಿಕ್ಷಣಗಳ ಸುಂದರ ಸಮನ್ವಯವು ಇದರಲ್ಲಿ ಕಂಡುಬರುವದರಿಂದ ಇದಕ್ಕೆ ಜೀವನ ಶಿಕ್ಷಣ ಇಲ್ಲವೆ ಸಮವಾಯ ಶಿಕ್ಷಣವೆಂತಲೂ ಹೇಳು ವರು. ಜೀವನ ಶಿಕ್ಷಣ ಶಾಲೆಗಳು ವಾಸ್ತವ ಜೀವನದ 'ರಂಗಭೂಮಿ; ಜೀವನ ಶಿಕ್ಷಣ ಸಾಮಾಜಿಕ ಜೀವನದ 'ರಂಗತಾಲೀಮು'.

ಮೂಲಶಿಕ್ಷಣದ ಕೆಲವೊಂದು ಮುಖ್ಯವಾದ ವೈಶಿಷ್ಟ್ಯಗಳನ್ನು ಇಲ್ಲಿ ತೋರಿಸಿದೆ.

(i) ಇದು ರಾಷ್ಟ್ರೀಯ ಶಿಕ್ಷಣ:—ಭಾರತೀಯ ಅತಿ ಆಕಾಂಕ್ಷೆಗಳ ಪ್ರತೀಕ ವಾಗಿದೆ. ನಮ್ಮ ಸಂಸ್ಕೃತಿಯ ಸತ್ವವೆನಿಸಿದ ಸತ್ಯ ಅಹಿಂಸೆಗಳ ತಳಹದಿಯ ಮೇಲೆ ರಚಿತ ವಾಗಿದೆ. ಇದು ಜನತಾ ಶಿಕ್ಷಣ: ಏಳು ವರುಷಗಳ ಸಾರ್ವತ್ರಿಕ ಕಡ್ಡಾಯದ ಶಿಕ್ಷಣ ಯೋಜನೆ. ರಾಷ್ಟ್ರದಲ್ಲಿ ಪ್ರತಿಯೊಂದು ಮಗುವಿಗೂ ನಾಗರಿಕ ಜೀವನಕ್ಕೆ ಬೇಕಾಗುವ ಬುದ್ಧಿ ವಿಕಾಸ ಹಾಗೂ ಹೃದಯ ಸಂಸ್ಕರಣವು ಇದರಲ್ಲಿ ಲಭಿಸುವವು.

(ii) ಇದು ಸಾಂಸ್ಕೃತಿಕ ಶಿಕ್ಷಣ:-ಭಾವಗಳ ಸಂಸ್ಕರಣದಿಂದ ಶೀಲಸಂವರ್ಧನೆಯನ್ನು ಸಾಧಿಸುವದು; ಎಲ್ಲರೊಡನೆ ಕೂಡಿ ಬಾಳುವ ಕಲೆಯನ್ನು ಕಲಿತು ಎಲ್ಲರ ಹಿತದಲ್ಲಿ ತನ್ನ ಹಿತವನ್ನೂ ಕಾಣುವ ಮನೋವೃತ್ತಿಯನ್ನು ತಂದುಕೊಡುವದು ಇದರ ಉದ್ದೇಶವಾಗಿದೆ.

(iii) ನೂತನ ಸಮಾಜ ರಚನೆ:—ಸ್ವಾರ್ಥ ಸ್ಪರ್ಧೆಗಳ, ಮೇಲುಕೀಳುಗಳ ಭಾವನೆ ಅಳಿದು ಹೋಗಬೇಕು. ಶ್ರಮಜೀವಿಗಳ ಶೋಷಣೆ ನಿಲ್ಲಬೇಕು. ಶಾಂತಿ, ಬಂಧು ಭಾವ, ಸತ್ಯ ಸಹಕಾರಗಳ ತಳಹದಿಯ ಮೇಲೆ ನೂತನ ಸಮಾಜದ ರಚನೆಯಾಗಬೇಕು. ವ್ಯಕ್ತಿಗಳ ಮನೋವೃತ್ತಿಯನ್ನು ಸರಿಯಾಗಿ ಪಲ್ಲಟಿಸುವದರಿಂದಲೆ ಸಮಾಜರಚನೆಯಾಗ ಬೇಕು. ಈಬಗೆಯ ಸಾಮಾಜಿಕ ಕ್ರಾಂತಿಯನ್ನು ಸದ್ದಿಲ್ಲದೆ ಸಾಧಿಸಲು ಮೂಲ ಶಿಕ್ಷಣವು ಕ್ರಿಯಾತ್ಮಕವಾಗಿದೆ. ಕ್ರಿಯಾತ್ಮಕವಾದ ಶಿಕ್ಷಣದಲ್ಲಿ ಸತ್ಯನಿಷ್ಠೆ, ಬಂಧುಭಾವ, ಸಮಾನತೆ, ನ್ಯಾಯ ಬುದ್ಧಿಗಳು ಉದ್ಯೋಗದೊಡನೆ ಬೆರೆತುಕೊಂಡು ಬರುವವು. ಸಮಾಜ ಸೇವೆಯ ಅನೇಕ ಸುಪ್ರಸಂಗಗಳು. ಒದಗುವವು. ಪ್ರತಿಯೊಂದು ಜೀವನ ಶಿಕ್ಷಣ ಶಾಲೆಯು ಸಾಮಾಜಿಕ ಜೀವನದ ಕೇಂದ್ರವಾಗುವದು. ಮೇಲಾಗಿ ಮೂಲಶಿಕ್ಷಣವು ಭಾರತದ ಹೃದಯಗಳೆಂತಿರುವ ಹಳ್ಳಿಗಳಿಗೆ ಎಲ್ಲರೀತಿಗಳಿಂದಲೂ ಅನುಕರಣೀಯವಾಗಿದೆ. ಉತ್ಪಾದಕವಾದ ಹಳ್ಳಿಯ ಕೈಗಾರಿಕೆಯೊಂದನ್ನು ಶಿಕ್ಷಣದ ಮಾಧ್ಯಮವಾಗಿ ಮಾಡಿಕೊಳ್ಳುವದರಿಂದ ಹಳ್ಳಿಯ ಜೀವನದೊಡನೆ ಅದು ಸುಲಭವಾಗಿ ಹೊಂದಿಕೊಳ್ಳುವದು.

(iv) ಇದು ಸ್ವಾವಲಂಬನ ಶಿಕ್ಷಣವು:— ಮೂಲ ಶಿಕ್ಷಣಕ್ಕೆ ತಳಹದಿಯಾಗಿರುವ ತತ್ವಗಳಲ್ಲಿ 'ಸ್ವಾವಲಂಬನ'ವೂ ಒಂದಾಗಿದೆ. ಈ ಶಿಕ್ಷಣದಲ್ಲಿ ಸ್ವಾವಲಂಬನವು ಎರಡು ಮುಖವಾಗಿದೆ. ಅವು ಆರ್ಥಿಕ ಹಾಗೂ ನೈತಿಕ ಎಂದು. ಆರ್ಥಿಕವಾಗಿ ಶಿಕ್ಷಣವು ಅಂಶತಃ ಆದರೂ ಸ್ವಾವಲಂಬಿಯಾಗಬೇಕು. ಶಿಕ್ಷಣಕ್ಕಾಗಿ ಸರಕಾರದ ಆರ್ಥಿಕ ಭಾರವನ್ನು ಕಡಿಮೆಮಾಡಬೇಕು. ಶಿಕ್ಷಕರ ವೇತನದ ಬಹುಭಾಗವನ್ನಾದರೂ ಮಕ್ಕಳ ಮಾಸಿಕ ಗಳಿಕೆಯು ಪೂರೈಸುವಂತಾಗಬೇಕೆಂದು ಮಹಾತ್ಮಾಜೀಯವರ ಮನೀಷೆಯಾಗಿತ್ತು. ಮೂಲೋದ್ಯೋಗಗಳಿಂದ ಮಕ್ಕಳು ಉತ್ಪಾದಿಸುವ ವಸ್ತುಗಳನ್ನು ಸರಕಾರ ಹಾಗೂ ಪಾಲಕರು ಆಸಕ್ತಿಯಿಂದ ತೆಗೆದುಕೊಂಡರೆ ಈ ಉದ್ದೇಶವು ಬಹುಮಟ್ಟಿಗೆ ಸಾಧಿಸುವದು. ನೈತಿಕ ಸ್ವಾವಲಂಬನದ ಪ್ರಯೋಜನವು ಮಕ್ಕಳ ಮನೋವೃತ್ತಿಯನ್ನು ತಿದ್ದುವದಾಗಿದೆ. ದುಡಿದು ಚರಿತಾರ್ಥ ಸಾಗಿಸಬಲ್ಲೆನೆಂಬ ಆತ್ಮವಿಶ್ವಾಸವು ಅವರಲ್ಲಿ ಉಂಟಾಗಬೇಕು. ಯಾವ ದುಡಿತವನ್ನೂ ಕೀಳೆಂದು ಭಾವಿಸದೆ, ಪ್ರಾಮಾಣಿಕತೆಯಿಂದ ಮಾಡುವ ಎಲ್ಲ ದುಡಿತವನ್ನೂ ಗೌರವದಿಂದ ಕಾಣುವ ಭಾವನೆ ಅವರಲ್ಲಿ ಬೆಳೆದುಬರಬೇಕು. ಉದ್ಯೋಗದ ಎಳೆಗಳನ್ನು ವಿವಿಧ

ವಿಷಯಗಳಿಗೆ ಹೊಂದಿಸಿ ವ್ಯಕ್ತಿಯ ಜೀವನಕ್ಕೆ ಸುಂದರವಾದ ಸಂಸ್ಕೃತಿಯನ್ನು ಈ ಯೋಜನೆಯು ಒದಗಿಸುವದು.

ಮೇಲಾಗಿ, ಮೂಲಶಿಕ್ಷಣವು ಮೃತಪ್ರಾಯವಾದ ಹಳ್ಳಿಯ ಕೈಗಾರಿಕೆಗಳಿಗೆ ಮತ್ತೆ ಜೀವದಾನ ಮಾಡುವದು. ಹಳ್ಳಿಗಳಲ್ಲಿ ಬಹುಸಂಖ್ಯಾಕ ಜನರ ಕಾರ್ಯಶಕ್ತಿ ವ್ಯರ್ಥವಾಗಿ ಕಳೆದುಹೋಗುತ್ತಿದೆ. ಇದನ್ನು ತಪ್ಪಿಸಲು ಹಳ್ಳಿಯ ಕೈಗಾರಿಕೆಗಳಿಗೆ ಜೀವಕಳೆ ತುಂಬ ಬೇಕು. ಹಳ್ಳಿಯ ಕೈಗಾರಿಕೆಗಳಿಗೆ ಆತ್ಮಘಾತುಕವಾದ ಸ್ಪರ್ಧೆಯ ಭೀತಿಯಿರುವದಿಲ್ಲ; ಅವು ಪರಸ್ಪರ ಸಹಕಾರದಿಂದ ನಡೆಯುವವು.

(iv) ಇದರಲ್ಲಿ ಮೂಲೋದ್ಯೋಗವು ಶಿಕ್ಷಣದ ಕೇಂದ್ರವಾಗಿದೆ:— ಮೂಲಶಿಕ್ಷಣದ ವೈಶಿಷ್ಟ್ಯವು 'ಮೂಲೋದ್ಯೋಗ'ವಾಗಿದೆ ಪಠ್ಯಪುಸ್ತಕಗಳ ಹಾಗೂ ವೇಳಾಪತ್ರಿಕೆಗಳ ಕೃತ್ರಿಮತೆಯನ್ನು ಅದು ಹೊರದೂಡಿದೆ. ಉದ್ಯೋಗದ ಮುಖಾಂತರ ವಾಗಿಯೆ ಮಗುವಿನ ಶಿಕ್ಷಣವು ಪ್ರಾರಂಭವಾಗಬೇಕು—ಮುಕ್ತಾಯವಾಗಬೇಕು. 'ಕೈಗಾರಿಕೆ ಗಳನ್ನು ಕೇವಲ ಉತ್ಪಾದನಕಾರ್ಯಕ್ಕಾಗಿ ಕಲಿಸಬೇಕಂತಲ್ಲ; ಆದರೆ ಅವುಗಳಿಂದ ವಿದ್ಯಾರ್ಥಿಗಳ ಬುದ್ಧಿ ವಿಕಾಸವಾಗಬೇಕು'—ಎಂದು ಗಾಂಧೀಜಿಯವರು ಸ್ಪಷ್ಟವಾಗಿ ಹೇಳಿರುವರು. 'ಬೀಗದ ಕೈಯಿಂದ ಜೀವನದ ಬಾಗಿಲವನ್ನು ತೆರೆದು, ಜೀವನ ಹಾಗೂ ಜೀವನಕ್ಕೆ ಸಂಬಂಧಿಸಿದ ವಿಷಯಗಳ ಪರಿಚಯವನ್ನು ಮಾಡಿಕೊಡುವದು'— ಮೂಲ ಶಿಕ್ಷಣದ ಉದ್ದೇಶವಾಗಿರುವದೆಂದು ವಿನೋಬಾಜಿಯವರು ಹೇಳಿರುವರು.

ಹೊಸ ಶಿಕ್ಷಣದ ಕೇಂದ್ರವಾದ ಮೂಲೋದ್ಯೋಗವು ಹೇಗಿರಬೇಕು ?

(೧) ಅದು ಜೀವನದ ಪ್ರಾಥಮಿಕ ಬೇಡಿಕೆಗಳಾದ ಆಹಾರ, ಬಟ್ಟೆ, ಆಸರ ಗಳನ್ನು ಒದಗಿಸುವ ಕಲೆಯಾಗಿರಬೇಕು. ಇದು ಸಹೇತುಕವಾದ ಚಟುವಟಿಕೆಯೆನಿಸುವದು. ಇದರಿಂದ ಶಿಕ್ಷಣದಲ್ಲಿ ಸಜೀವತೆಯುಂಟಾಗುವದು; ಜೀವನ ಹಾಗೂ ಶಿಕ್ಷಣಗಳಲ್ಲಿ ಅನ್ಯೋ ನ್ಯತೆಯುಂಟಾಗುವದು.

(೨) ಅದು 'ಉತ್ಪಾದಕ'ವಾಗಿರಬೇಕು. ಉತ್ಪಾದಕ ಉದ್ಯೋಗದಿಂದಲೆ, ಮಗುವಿನ ಸರ್ವಶಕ್ತಿಗಳ ವಿಕಾಸವಾಗುವದು. ಆತನಲ್ಲಿ ಹುದುಗಿದ ನಿಸರ್ಗ-ದತ್ತವಾದ ನಿರ್ಮಾಣಶಕ್ತಿಗೆ ಅನುವುದೊರೆಯುವದು.

(೩) ಅದು 'ಶೈಕ್ಷಣಿಕ'ವಾಗಿರಬೇಕು. ಮಗುವಿನ ದೇಹ-ಮನ-ಆತ್ಮಗಳ ಸರ್ವತೋಮುಖವಾದ ವಿಕಾಸವನ್ನು ಸಾಧಿಸಿದರೆ ಮಾತ್ರ ಅದು ಶೈಕ್ಷಣಿಕವೆನಿಸುವದು. ಮಗುವಿನಲ್ಲಿ ಹುದುಗಿದ ವಿವಿಧ ಶಕ್ತಿಗಳನ್ನು ಬೆಳಕಿಗೆ ತರಬೇಕು, ಬೆಳಸಬೇಕು. ಜೀವನ ಸಂಗ್ರಾಮಕ್ಕಾಗಿ ಆತನನ್ನು ಕಾರ್ಯಕ್ಷಮವಾಗಿ ಮಾಡಬೇಕು. ಪ್ರೀತಿ-ಸಹಕಾರ, ಮುಂತಾದ ಸಾಮಾಜಿಕ ಸದ್ಗುಣಗಳನ್ನು ತಂದುಕೊಡಬೇಕು. ಹೀಗೆ ಶರೀರ-ಮನಸ್ಸು-ಆತ್ಮಗಳ ಸಮನ್ವಯ ವಿಕಾಸ ಮಾಡುವದರಲ್ಲಿಯೆ ಮೂಲೋದ್ಯೋಗದ 'ಶೈಕ್ಷಣಿಕತೆ'ನೆಲೆಸಿದೆ.

(೪) ಏಳು ವರುಷದ ಶಿಕ್ಷಣ ಅವಧಿಯಲ್ಲಿ 'ಮೂಲೋದ್ಯೋಗ'ವು ತರ- ತಮವಾಗಿ, ಕ್ರಮಶಃ ವ್ಯಾಪಿಸುತ್ತಿರಬೇಕು. 'ಸುಲಭತೆಯಿಂದ ಕಠಿಣತೆಯ ಕಡೆಗೆ' ಯೆಂಬ ತತ್ತ್ವದ ಮೇರೆಗೆ, ಕ್ರಮಬದ್ಧವಾಗಿ ಜೋಡಿಸಲು ಬರುವಂತಿರಬೇಕು.

(೫) ಮೂಲೋದ್ಯೋಗವು – 'ಗ್ರಾಮೋದ್ಯೋಗ'ವಿರಬೇಕು. ಕೈಗಾರಿಕೆ ಗಳು ನಿರ್ಜೀವವಾದ ಯಾಂತ್ರಿಕ ಕಾರ್ಯವಲ್ಲ. ಅವುಗಳಲ್ಲಿ ಬುದ್ಧಿವಂತಿಕೆಗೆ, ಹಾಗೂ ಬುದ್ಧಿ ವಿಕಾಸಕ್ಕೆ ತುಂಬಾ ಎಡೆಯಿದೆ. ಇದಲ್ಲದೆ ಮೂಲೋದ್ಯೋಗವು ಸ್ಥಳಿಕ ನೈಸರ್ಗಿಕ ಪರಿ ಸ್ಥಿತಿಗೆ ಅನುರೂಪವಾಗಿರಬೇಕು. ಹತ್ತಿ ಬೆಳೆಯುವ ಪ್ರದೇಶದಲ್ಲಿ ನೂಲುವದು–ನೇಯು ವದು, ಕಾಡುಗಳಿದ್ದಲ್ಲಿ ರಟ್ಟು–ಕಟ್ಟಿಗೆಯ ಕೆಲಸ, ಅನುರೂಪವಾದ ಕೈಗಾರಿಕೆಗಳಾಗುವವು.

ಮೂಲ ಶಿಕ್ಷಣವು ಆಧುನಿಕ ಶೈಕ್ಷಣಿಕ ಮಾನಸ ಶಾಸ್ತ್ರದ ಎಲ್ಲ ತತ್ವಗಳನ್ನು ಒಳಗೊಂಡಿದೆ ಈ ಯೋಜನೆಯಲ್ಲಿಯೂ ಮಗುವೇ ಪ್ರಧಾನ, ಜೀವನ ಮುಖಾಂತರ ವಾಗಿ ಜೀವಿಗೆ ಜೀವನ ಶಿಕ್ಷಣ ವನ್ನು ಕೊಡುವದರಿಂದ 'ಜೀವನ ಶಿಕ್ಷಣ'ವೆಂಬ ಸಾರ್ಥಕ ವಾದ ಹೆಸರೂ ಇದಕ್ಕಿರುವದು. ಇದು ವ್ಯಕ್ತಿಯನ್ನು ಸರಿಯಾದ ಜೀವನಕ್ಕೆ ಅಣಿಗೊಳಿಸು ವದು. 'ಮಾಡುತ್ತ ಕಲಿ' ಎಂಬುದೇ ಇದರಲ್ಲಿ ಶಿಕ್ಷಣದ ಮೂಲ ಸೂತ್ರವಾಗಿದೆ. ಮಕ್ಕಳ ಸಹಜ ಪ್ರವೃತ್ತಿಗಳನ್ನು ವಿಧಾಯಕ, ರಚನಾತ್ಮಕ ಕಾರ್ಯದಲ್ಲಿ ಇದು ತೊಡಗಿಸುವದು. ಅವುಗಳನ್ನು 'ಉಜ್ವಲ'ಗೊಳಿಸುವದು. ಇದರಿಂದ ಜ್ಞಾನ–ಕ್ರಿಯೆಗಳ ಮಧುರವಾದ ಬಾಂಧವ್ಯವು ಜೀವನದಲ್ಲಿ ಸಾಧಿಸುವದು. ಕೃತಿಪ್ರೇಮ ಹಾಗೂ ರಚನಾ ಪ್ರವೃತ್ತಿಗಳ ಎಳೆಗಳಗುಂಟ ಮಗುವಿನ ಶಿಕ್ಷಣವನ್ನು ಸಾಗಿಸುವದರಿಂದ, ಮೂಲ ಶಿಕ್ಷಣಕ್ಕೆ ಮಾನಸ ಶಾಸ್ತ್ರದ ಸಂಪೂರ್ಣ ಬೆಂಬಲವಿದೆ.

(೬) ಮೂಲೋದ್ಯೋಗವು ಮಗುವಿನ ಶಿಕ್ಷಣವನ್ನು ಜೀವನಕ್ಕೆ, ನಿಸರ್ಗಕ್ಕೆ, ಸಮಾಜಕ್ಕೆ ಹೊಂದಿಸಿಕೊಳ್ಳುವದರಿಂದ ಜೀವನಕ್ಕೆ ದುಡಿತವು ಅಗತ್ಯವೆಂಬ ಭಾವನೆಯು ಮಗುವಿನಲ್ಲಿ ಮೊದಲಿನಿಂದಲೂ ಮೂಡುವದು. ಸಮಾಜದೊಡನೆ ಬರುವ ಸಂಪರ್ಕ ಸಹಕಾರಗಳಿಂದ, ಸಮಾಜದ ಒಟ್ಟು ಹಿತಕ್ಕಾಗಿ ತನ್ನ ಅಳಿಲು ಸೇವೆಯನ್ನು ಸಲ್ಲಿಸಬೇಕೆನ್ನುವ ಅರಿವು ಆತನಿಗುಂಟಾಗುವದು. ಪ್ರಾಮಾಣಿಕ ದುಡಿತವೆಲ್ಲವೂ ದೇವರ ಪೂಜೆ. ಗಾಂಧೀಜಿಯವರಿಗೆ ತಕಲಿಯು, ನೂಲಿನ ಎಳೆಯೊಡನೆ ಶ್ರೀರಾಮನನ್ನು ತರು ತ್ತಿತ್ತಂತೆ. ಈ ಬಗೆಯ ಶ್ರಮಗೌರವದ ಕಲ್ಪನೆಯು ಮಕ್ಕಳಲ್ಲಿ ಮೂಡುವದು.

(೭) ಮಗುವಿನ 'ವ್ಯಕ್ತಿತ್ವ' ವೆಂದರೆ, ಆತನ ಶರೀರ–ಮನಸ್ಸು ಆತ್ಮಗಳ ಸಮುಚ್ಚಯ. ಈ ತ್ರಿಕರಣಗಳಲ್ಲಿ ಹುದುಗಿದ ಶಕ್ತಿಗಳನ್ನೆಲ್ಲ ಸ್ಫುಟಗೊಳಿಸಿ, ಅವುಗಳ ಪೂರ್ಣ ವಿಕಾಸವನ್ನು ಸಾಧಿಸುವದೆ ಪೂರ್ಣತೆ. ಜೀವನೋಪಯೋಗಿಯಾದ ಮೂಲೋ ದ್ಯೋಗವು ಈ ಮೂರೂ ಶಕ್ತಿಗಳ ಸಮನ್ವಿತ ವಿಕಾಸವನ್ನು ಮಾಡುವದು. ಮಗುವಿನ ವ್ಯಕ್ತಿತ್ವಕ್ಕೆ ಪೂರ್ಣತೆ, ಹೊಂದಿಕೆಗಳನ್ನು ತಂದುಕೊಡುವದು.

(೮) ಮೂಲ ಶಿಕ್ಷಣದಲ್ಲಿ ಮಾತೃ ಭಾಷೆಗೆ ಅತ್ಯಂತ ಮಹತ್ವದ ಸ್ಥಾನ ವಿದೆ. ಪರಕೀಯ ಆಳಿಕೆಯಲ್ಲಿ ಇಂಗ್ಲೀಷ ಭಾಷೆಯ ಮುಖಾಂತರ ಕೊಡುವ ಶಿಕ್ಷಣದಿಂದ ಕೇವಲ ಮಾತೃಭಾಷೆಗಷ್ಟೇ ಪೆಟ್ಟು ತಗಲಲಿಲ್ಲ. ಆದರಿಂದ ದೇಶದಲ್ಲಿ ಸಾರ್ವತ್ರಿಕವಾದ ನಿರ ಕ್ಷರತೆ ನೆಲೆಸಿತು. ಸ್ವಕೀಯವಾದ ಸಾಹಿತ್ಯ ಹಾಗೂ ಸಂಸ್ಕೃತಿಗಳಿಗೆ ಬಹುಜನ ಸಮಾಜವು ಎರವಾಯಿತು. ಸಮಾಜದಲ್ಲಿ 'ಸುಶಿಕ್ಷಿತ'ರೆಂದು ಹೇಳಿಕೊಳ್ಳುವ ಹೊಸದೊಂದು 'ವರ್ಗ'ವೇ ನಿರ್ಮಾಣವಾಯಿತು. ಈ ಶಿಕ್ಷಣವು ಬಹುಜನ ಸಮಾಜದ

ಶಿಕ್ಷಣಕ್ಕೆಗೂ ಸಾಧನವಾಯಿತು. ವಿಚಾರಮಾಡುವ ಭಾಷೆ ಬೇರೆ, ವಿಷಯ ತಿಳಿದು ಕೊಳ್ಳುವ ಭಾಷೆ ಬೇರೆ. ಶಿಕ್ಷಣದ ದೃಷ್ಟಿಯಿಂದ ಈ ವಿಧಾನವು ಬಹಳೇ ವಿಘಾತುಕ ವಾದುದು. ಭಾರತದ ಬುದ್ಧಿವಂತಿಕೆ ಪ್ರತಿಫಲಿಸಲು ಇದರಿಂದ ಆತಂಕವಾಯಿತು. ಜನತೆ ಯಲ್ಲಿ ಜ್ಞಾನಪ್ರಸಾರವು ಜನರ ಬಳಕೆಯ ಭಾಷೆ–ತಾಯ್ನುಡಿ–ಯಲ್ಲಿಯೇ ಆಗಬೇಕು. ಸಾಹಿತ್ಯವೂ, ಸಂಸ್ಕೃತಿಯೂ ತಾಯ್ನುಡಿಯಲ್ಲಿಯೆ ಹರಿದು ಹೋಗಿ ಅವರ ಹೃದಯವನ್ನು ಮುಟ್ಟಬೇಕು. ಗಾಂಧೀಜಿಯವರ ದೂರದೃಷ್ಟಿಗೆ ಮಾತೃಭಾಷೆಯ ಈ ಮಹಿಮೆಯು ಹೊಳೆಯದಿರಲಿಲ್ಲ. ಮೂಲಶಿಕ್ಷಣದಲ್ಲಿ ಮಗುವಿನ ಶಿಕ್ಷಣವೆಲ್ಲವೂ ಆತನ ಮಾತೃಭಾಷೆಯ ಮುಖಾಂತರವಾಗಿಯೇ ಸಾಗುವದು. ಇದು ಮಾತ್ರವಲ್ಲದೆ, ತನ್ನ ಮಾತೃಭಾಷೆಯ ಯಥಾರ್ಥವಾದ ಜ್ಞಾನವೂ, ತನ್ನ ಭಾಷೆಯಲ್ಲಿರುವ ಸಾಹಿತ್ಯದ ತಕ್ಕಮಟ್ಟಿಗಿನ ಪರಿಚ ಯವೂ, ಹಾಗೂ ತನ್ನ 'ಆತ್ಮ ಪ್ರಕಾಶನ' ವಿಚಾರವಿನಿಮಯಕ್ಕಾಗಿ ತನ್ನ ಭಾಷೆಯ ಮೇಲೆ ಸಾಕಷ್ಟು ಪ್ರಭುತ್ವವೂ ಮಗುವಿಗೆ ಬರುವಂತೆ ಮೂಲ ಶಿಕ್ಷಣವು ಪ್ರಯತ್ನಿಸುವದು.

(೯) ಮೂಲ ಶಿಕ್ಷಣದಲ್ಲಿ 'ಅನುಬಂಧ' – 'ಸಮವಾಯ'ಗಳು :— ಸಮವಾಯದ ವಿಧಾನವು ಶಿಕ್ಷಣದಲ್ಲಿ ತೀರ ನೂತನವಾದುದಲ್ಲ. ಆದರೆ ಜೀವನ ಹಾಗೂ ಶಿಕ್ಷಣಗಳೆರಡನ್ನು ಕೀಲಿಸಲು ಗಾಂಧಿಜೀಯವರ ದೃಷ್ಟಿಯಲ್ಲಿ ಅದು ಬಹಳೇ ಉಪಯುಕ್ತ ಸಾಧನವಾಗಿದೆ. ಸಮವಾಯವೆ ಮೂಲ ಶಿಕ್ಷಣದ ಜೀವಾಳವೆನ್ನಬಹುದು. ಸಮವಾಯದ ಸಿದ್ಧಿಯೆ ಮೂಲಶಿಕ್ಷಣದಗೆಲುವು; ಸಮವಾಯದ ವಿಫಲತೆ–ಮೂಲಶಿಕ್ಷಣದ ದುರ್ಬಲತೆ.

ಸಮವಾಯ–ಅನುಬಂಧ–ವೆಂದರೆ ಹೊಂದಿಕೆ, ಸಂಬಂಧೀಕರಣ. ಮೂಲೋ–ದ್ಯೋಗದ ಪ್ರತಿಯೊಂದು ಮೆಟ್ಟಿಲನ್ನೂ, ವಿಧಾನಗಳನ್ನೂ ಮಗು ಶಾಸ್ತ್ರೀಯವಾಗಿ ತಿಳಿದು ಕೊಳ್ಳಬೇಕು. ಪ್ರತಿಯೊಂದು ಕೃತಿಯ ಹಾಗೂ ಉಪಕೃತಿಗಳ ಬಗ್ಗೆ– 'ಏಕೆ-ಹೇಗೆ?' ಎಂಬ ಕಾರ್ಯಕಾರಣ ಸಂಬಂಧವನ್ನು ತಿಳಿಯಬೇಕು. ಚಟುವಟಿಕೆಯಲ್ಲಿ ತೊಡಗಿದಾಗ್ಗೆ ಆತನಿಗೆ ಅನೇಕ ತಿಳಿಯಲಾರದ ಸಮಸ್ಯೆಗಳು ಒದಗುವವು; ಅಪರಿಚಿತ ವಸ್ತುಗಳ ಉಪ ಯೋಗಮಾಡಬೇಕಾಗುವದು. ಈ ಸಮಯಗಳಲ್ಲಿ ಆತನ ಕುತೂಹಲವು ಸಹಜವಾಗಿಯೆ ಜಾಗೃತವಾಗುವದು. ಈ ಸಂದರ್ಭಗಳೆ 'ಜ್ಞಾನ ಪ್ರಾಪ್ತಿಯ ಸುಪ್ರಸಂಗಗಳು' ಇವು ಗಳಿಂದ ವಿವಿಧವಿಷಯಗಳ ಜ್ಞಾನವನ್ನು ಮೂಲೋದ್ಯೋಗದೊಡನೆ ಸಂಬಂಧಿಸಲು ಬರು ವದು. ಉದ್ಯೋಗದೊಡನೆ ಹೀಗೆ ಸಮರಸವಾಗಿ ಬರುವ ಜ್ಞಾನವೇ ಸಮನ್ವಿತ ಜ್ಞಾನವು. ಕುತೂಹಲದ ತೃಪ್ತಿಗಾಗಿ ಒದಗಿಸುವ ಈ ಜ್ಞಾನವು— ಹಸಿದ ಹೊಟ್ಟೆಯಲ್ಲಿ ಹಾಕಿದ ಪೌಷ್ಟಿಕ ಆಹಾರದಂತೆ–ಮಗುವಿನ ಮನಸ್ಸಿನೊಡನೆ ಏಕರೂಪವಾಗುವದು; ಜೀವನಸ್ಪರ್ಶಿ ಯಾಗುವದು.

ಮೂಲ ಶಿಕ್ಷಣವು ಅಪೇಕ್ಷಿಸುವ ಈ ಸಮವಾಯ ಸಂಬಂಧವು ಸೂಕ್ಷ್ಮವಾಗಿದೆ, ಮಾರ್ಮಿಕವಾಗಿದೆ. ವಿನೋಬಾಜಿಯವರು ಅದನ್ನು ಒಳ್ಳೇ ಸುಲಭವಾಗಿ ಒಂದು ಉದಾ ಹರಣೆಯಿಂದ ವಿಶದ ಪಡಿಸಿರುವರು. ಇದಕ್ಕಾಗಿ ಅವರು ಕೊಡುವ 'ಮಣ್ಣು–ಮಡಿಕೆಗಳ ದೃಷ್ಟಾಂತವು ಮನಸ್ಸಿನಲ್ಲಿ ಬಿಂಬಿಸುವಂತಿದೆ. 'ಮಣ್ಣು ಮಡಿಕೆಯಲ್ಲ; ಮಡಿಕೆ

ಮಣ್ಣಲ್ಲ. ಇಲ್ಲವೆ 'ಮಣ್ಣು+ನೀರು', ಎಂದರೆ ಮಡಿಕೆಯಲ್ಲ. ಹಾಗಾದರೆ ಮಣ್ಣು ಮಡಿಕೆಗಳ ಸಂಬಂಧ ಏಂತಹದು' ಕಲಾವಿದನಾದ ಕುಂಬಾರನು ತನ್ನ ಕಲೆಯನ್ನೂ, ಪ್ರತಿಭೆಯನ್ನೂ ಮಣ್ಣಿನಲ್ಲಿ ತುಂಬಿದರೆ ಮಣ್ಣು ಮಡಿಕೆಯಾಗುವದು. ಮಣ್ಣು ಮಡಿಕೆಗಳಲ್ಲಿರುವ ಈ ಬಗೆಯ ಸಂಬಂಧವು 'ಸಮವಾಯ' ಸಂಬಂಧವು. ಮೂಲೋದ್ಯೋಗ ಮತ್ತು ಮಗುವಿನ ಬುದ್ಧಿವಿಕಾಸಗಳ ಸಂಬಂಧವು ಇದೇ ರೀತಿಯದಾಗಿರುವದು. ಮೂಲೋದ್ಯೋಗದಲ್ಲಿ ಶಿಕ್ಷಕನು ತನ್ನ ಪ್ರತಿಭೆ ಹಾಗೂ ಕುಶಲತೆಗಳಿಂದ ಜೀವಕಳೆಯನ್ನು ತುಂಬಬೇಕು. ಅಂದರೆ ಮಾತ್ರ ಮಗುವಿನ ಸರ್ವತೋಮುಖವಾದ ವಿಕಾಸವಾಗುವದು.

ಮೂಲ ಶಿಕ್ಷಣದಲ್ಲಿ, ಗಾಂಧೀಜಿಯವರ ಆರ್ಷದೃಷ್ಟಿಗೆ ಹೊಳೆದ ಸಮವಾಯ ತತ್ವವು ಕೇವಲ ಸಂಬಂಧೀಕರಣವಲ್ಲ. ಉದ್ಯೋಗ ಹಾಗೂ ವಿಷಯ ಜ್ಞಾನಗಳ ಸಂಕಲನೆ ಮಾಡುವದಲ್ಲ. ಅದು ಒಂದು ಸಜೀವ ಸಸಿಯೊಡನೆ ಮತ್ತೊಂದು ಸಜೀವ ಸಸಿಯ 'ಕಲಮು' ಮಾಡುವಂತಿರುವದು; ಎರಡನ್ನೂ ಏಕಜೀವವಾಗಿ ಮಾಡುವದು. ವಿನೋಬಾಜಿಯವರು ಹೇಳುವಂತೆ, 'ಉದ್ಯೋಗವು ಶಿಕ್ಷಣಕ್ಕೆ ಸಜೀವತೆಯನ್ನು ತಂದು ಕೊಡುವದು; ಶಿಕ್ಷಣಕ್ಕೆ ಉದ್ಯೋಗವನ್ನು ಪ್ರಕಾಶಿತವಾಗಿ ಮಾಡುವದು.

ಮೂಲೋದ್ಯೋಗದ ಜೊತೆಗೆ 'ನಿಸರ್ಗ' ಹಾಗೂ 'ಸಮಾಜ'ಗಳೆಂಬ ಮತ್ತೆರಡು ಕೇಂದ್ರಗಳನ್ನು ಮಗುವಿನ ಶಿಕ್ಷಣಕ್ಕಾಗಿ ತೆಗೆದುಕೊಳ್ಳಲಾಗಿದೆ. ಈ 'ಮೂರು ಸುತ್ತಿನ ಕೋಟೆಯಲ್ಲಿ ನಿಂತುಕೊಂಡು ಮಗು ತನ್ನ ಜೀವನದ ಸಂಗ್ರಾಮವನ್ನು ನಡೆಸುವನು. ಮೂಲೋದ್ಯೋಗದ ಮುಖಾಂತರ ಆತನು ಆರ್ಥಿಕ ಪರಿಸ್ಥಿತಿಯನ್ನು ಎದುರಿಸುವನು. ಅದರಲ್ಲಿ ಮೂಲೋದ್ಯೋಗಕ್ಕೆ ಅಗತ್ಯವಿರುವ ವಸ್ತುಗಳು, ಅವುಗಳ ಉತ್ಪತ್ತಿ, ಬೆಳೆ, ಪ್ರಕಾರಗಳನ್ನು ತಿಳಿದುಕೊಳ್ಳುವನು. ಎರಡನೆಯ ಕೇಂದ್ರವಾದ ನಿಸರ್ಗವು ನೈಸರ್ಗಿಕ ಪರಿಸ್ಥಿತಿಯನ್ನು ಒದಗಿಸುವದು. ಇವರಲ್ಲಿ ಆಕಾಶದ ಅದ್ಭುತ ದೃಶ್ಯಗಳು, ಹವೆ ಮಳೆ, ಗಿರಿ–ನದಿಗಳು, ಪಶು-ಪಕ್ಷಿ–ಮುಂತಾದವುಗಳ ಪರಿಚಯವನ್ನು ಆತನು ಮಾಡಿಕೊಳ್ಳುವನು. ಮೂರನೆಯ ಕೇಂದ್ರವಾದ ಸಮಾಜವು ಸಾಮಾಜಿಕ ಸಂಪರ್ಕವನ್ನು ತಂದು ಕೊಡುವದು. ಸಾಂಘಿಕ ಜೀವನ, ಯಾತ್ರೆ–ಉತ್ಸವಗಳು, ಸಮಾಜ ಸೇವೆಯ ಸುಪ್ರಸಂಗಗಳು, ಸ್ವಚ್ಛತೆ–ಮುಂತಾದವುಗಳನ್ನು ಮಗು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುವನು.

ಸಮವಾಯದ ಸ್ವರೂಪವನ್ನು ಅರಿತುಕೊಂಡರೂ, ಅದನ್ನು ಆಚರಿಸುವಾಗ್ಗೆ ಅತ್ಯಂತ್ಯ ದಕ್ಷತೆ ವಹಿಸಬೇಕಾಗುವದು. ಮಕ್ಕಳ ಚಟುವಟಿಕೆ ಪರಿಸ್ಥಿತಿಯಿಂದ ಪ್ರೇರಿತವಾಗಿರಬೇಕು. ಈ ಸ್ವಯಂಪ್ರೇರಣೆಯಿಲ್ಲದಿದ್ದರೆ ಶಿಕ್ಷಣವು ಯಶಸ್ವಿಯಾಗಲಾರದು. ಶಿಸ್ತು ಸಂಘಟನೆಗಳು ಸಮವಾಯ ಶಿಕ್ಷಣದ ಹೃದಯದಂತಿವೆ. ಚಟುವಟಿಕೆಗೆ ಅಗತ್ಯವಿರುವ ಸಾಧನ-ಸಾಮಗ್ರಿಯನ್ನೆಲ್ಲ ಪೂರ್ವಾಲೋಚನೆಯಿಂದ ಸಿದ್ಧತೆಮಾಡಿಕೊಂಡಿರಬೇಕು. ಚಟುವಟಿಕೆಯ ಒಂದು ಮೆಟ್ಟಲು ಮುಂದಿನ ಮೆಟ್ಟಲಿಗೆ ಸಹಾಯಕವಾಗಿರಬೇಕು. ಕೊನೆಯದಾಗಿ, ಸಮವಾಯವು ಹೇಗೋ ಹಿಡಿದು ತಂದು ಜೋಡಿಸುವಂತೆ ಕೃತ್ರಿಮವಾಗಿರಕೂಡದು.

**ಅಖಂಡ ಶಿಕ್ಷಣ :**— ಸಮವಾಯದ ಅಂತಃಸತ್ವವೇ ಅಖಂಡ ಶಿಕ್ಷಣವಾಗಿದೆ. ಮಗು ಚೈತನ್ಯ ಸ್ವರೂಪಿಯು. ಶಿಕ್ಷಣವು ಆತನ ಸಮಗ್ರ ಚೈತನ್ಯಕ್ಕೆ ಸಂಬಂಧಿಸಿರುವದು. ಚೈತನ್ಯದ ಅಖಂಡತೆಯು ಇಂದಿನ ಅಖಂಡ ಶಿಕ್ಷಣಕ್ಕೆ ( Integrated Education ) ಆಧಾರವಾಗಿದೆ: ಬೆಸುಗೆಯ ಪಾತ್ರೆಯಂತೆ ಬೇರೆ ಬೇರೆ ಶಕ್ತಿಗಳ ಜೋಡಣೆ ಮಗುವಿನ ವ್ಯಕ್ತಿತ್ವವಾಗಿಲ್ಲ. ನಮಗೆ ಬೇರೆ ಬೇರೆಯಾಗಿ ತೋರುವ, ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ಮಗುವಿನ ಮಾನಸಿಕ ಶಕ್ತಿಗಳೆಲ್ಲ ಅರಳಿದ ಒಂದೇ ಆತ್ಮಶಕ್ತಿಯ—ಕ್ರಿಯಾಶಕ್ತಿಯ—ಪಕಳೆಗಳು ಮಾತ್ರ; ಒಂದೇ ಶಕ್ತಿಯ ವಿವಿಧ ಮುಖಗಳು. ಸ್ಮೃತಿ, ಅವಧಾನ, ತರ್ಕ, ಇವೇ ಮುಂತಾದ ಮಾನಸಿಕ ಚಟುವಟಿಕೆಗಳು ಒಂದೊಂದು ಪ್ರತ್ಯೇಕವಾದ ಶಕ್ತಿಯಾದರೆ, ಅವುಗಳ ಸಂಖ್ಯೆಗೆ ಮಿತಿಯಿಲ್ಲದಂತಾಗುವದು. ಹಿಂದಿನ ಕೆಲವು ಮಾನಸಶಾಸ್ತ್ರಜ್ಞರು ಹಾಗೆ ಭಾವಿಸಿದ್ದರು. ಸ್ಮೃತಿಗೆ ಕಂಠಪಾಠ; ತರ್ಕಶಕ್ತಿಗೆಗಣಿತ— ಹೀಗೆ ಅವರ ದೃಷ್ಟಿಯಲ್ಲಿ ಒಂದೊಂದು ಶಕ್ತಿಯನ್ನು ಬಲಗೊಳಿಸಲು ಒಂದೊಂದು ವಿಷಯ 'ಕಸರತ್ತು' ಎನಿಸಿತ್ತು. ಇಂದಿನ ಮಾನಸಶಾಸ್ತ್ರವು ಈ ವಿಚಾರವನ್ನು ಪೂರ್ಣವಾಗಿ ನಿರಾಕರಿಸಿದೆ. ಮಗುವಿನ ಚೈತನ್ಯದಂತೆ, ಜೀವನದ ಚಟುವಟಿಕೆಯಿಂದ ಬರುವ ಜ್ಞಾನವೂ 'ಅಖಂಡ'ವಾಗಿದೆ. ಎಲೆ-ಹೂ-ಕಾಯಿಗಳೆಲ್ಲ ಭಿನ್ನವಾಗಿ ತೋರಿದರೂ, ಅವುಗಳಲ್ಲಿ ಹರಿದಾಡುವ ಜೀವರಸವು ಒಂದೇಯಾಗಿರುವಂತೆ, ಮಗುವಿನ ಚೈತನ್ಯವು ತನ್ನ ವಿಕಾಸದಲ್ಲಿ ವಿವಿಧರೂಪಗಳನ್ನೂ, ವಿವಿಧ ಶಕ್ತಿಗಳನ್ನೂ, ಮೈ-ಮನಗಳಲ್ಲಿ ಪ್ರಕಟಿಸಿದರೂ ಸ್ವರೂಪದಲ್ಲಿ ಅದು ಅಖಂಡವಾಗಿದೆ. ಒಂದೆಡೆಗೆ ಚೈತನ್ಯ— ಮತ್ತೊಂದೆಡೆಗೆ ಇಂದಿನ ಹಾಗೂ ವಿಶಾಲವಾಗುತ್ತಲಿರುವ ಜೀವನ ಇವುಗಳ ಹೊಂದಾಣಿಕೆಯಲ್ಲಿ ಮಗು ವಿವಿಧ ಅನುಭವಗಳನ್ನು ಪಡೆಯುವದು. ಸಾಮಾಜಿಕ, ಭೌಗೋಲಿಕ ಮುಂತಾದ ವಿಷಯ ಜ್ಞಾನಕ್ಕೆ ಈ ಅನುಭವಗಳೆ ವಸ್ತುಗಳು. ಸೂರ್ಯೋದಯ, ಮಳೆಬಿಲ್ಲು ಮುಂತಾದ ನಿಸರ್ಗದ ರಮಣೀಯವಾದ ದೃಶ್ಯಗಳನ್ನು ಮಗು ನೋಡುವನು. ಭೂಗೋಲ ಜ್ಞಾನಕ್ಕೆ ಈ ಅನುಭವವೆ ಪೀಠಿಕೆಯಾಗುವದು. ಮಗು ಇಂದಿನ-ಹಿಂದಿನ ಕಟ್ಟಡಗಳನ್ನು ನೋಡುವನು. ವೇಷಭೂಷಣಗಳಲ್ಲಿ, ವಾಹನಗಳ ರೂಪದಲ್ಲಿ ವ್ಯತ್ಯಾಸಗಳನ್ನು ತಿಳಿದುಕೊಳ್ಳುವನು. ಜನಜೀವನವು ಹೇಗೆ ಬೆಳೆದುಬಂದಿದೆಯೆಂಬುದರ ಪರಿಚಯವು ಆತನಿಗಾಗುವದು. ಈ ಅನುಭವವೆ ಇತಿಹಾಸದ ಪ್ರಥಮ ಪಾಠ. ಬೆಳೆಯುವ ಜೀವನದಲ್ಲಿ, ನೀರಿನ ಅಲೆಗಳಂತೆ ಮಗುವಿನ ಅನುಭವವೂ ವಿಶಾಲವಾಗುವದು. ಅವನ ವಿಷಯಜ್ಞಾನದ ವಿಸ್ತಾರವೂ ಹೆಚ್ಚುವದು. ಹೀಗೆ ನೋಡಿದಲ್ಲಿ, ಜೀವನ ಮುಖ್ಯವಾದುದು. ಅದರೊಡನೆ ಬರುವ ವಿಷಯ ಜ್ಞಾನವು ಆನುಷಂಗಿಕವಾದ 'ದ್ವಿತೀಯ ಪ್ರಾಪ್ತಿ'. ಕಟ್ಟಿಗೆಯಿಂದ ಇದ್ದಲಿ ಮುಖ್ಯ ಹುಟ್ಟುವಳಿ; ಅದರ ತಯಾರಿಕೆಯಲ್ಲಿ ತಾವಾಗಿ ಉತ್ಪನ್ನವಾಗುವ ಡಾಂಬರು, ವಿವಿಧತೈಲಗಳು 'ಉಪಹುಟ್ಟುವಳಿ'ಗಳು. ಜೀವನಕ್ಕೆ ಮಗುವನ್ನು ಅಣಿಗೊಳಿಸುವದೆ ಮುಖ್ಯ ಕಾರ್ಯ; ಜೀವನದೊಡನೆ ಹೊಂದಿಕೊಂಡು ಬರುವ ಉಪಯುಕ್ತವಾದ ವಿಷಯಜ್ಞಾನವೇ—ಅಖಂಡ ಶಿಕ್ಷಣ. ಸಮವಾಯ ಶಿಕ್ಷಣ, ಜೀವನ ಶಿಕ್ಷಣ ಎಂದು ಹೇಳುವದು ಬೇರೆ ಹೆಸರುಗಳು ಮಾತ್ರ. ಮಗುವಿನ ಸರ್ವತೋಮುಖವಾದ ವಿಕಾಸವೂ ಇದರಿಂದಲೆ ಸಿದ್ಧಿಸುವದು.

## ಅಭ್ಯಸನಗಳು

೧. ಉಪನಯನದ ಉದ್ದೇಶವೇನಿತ್ತು ?

೨. ಗುರುಕುಲದ ವೈಶಿಷ್ಟ್ಯವೇನು ? ಅಲ್ಲಿಯ ಜೀವನ ಕ್ರಮವನ್ನು ನಿರೂಪಿಸಿರಿ.

೩. ನೂತನ ಶಿಕ್ಷಣವು ಯಾವ ವಿಚಾರಗಳನ್ನು ಒಳಗೊಂಡಿದೆ ?

೪. ರೂಸೋನಲ್ಲಿ ನಿಸರ್ಗ ಪ್ರೇಮ ಹಾಗೂ ಸ್ವಚ್ಛಂದ ವೃತ್ತಿ ಬೆಳೆಯಲು ಕಾರಣಗಳೇನು ?

೫. 'ಎಮಿಲಿ'ಯಲ್ಲಿ ರೂಸೋ ಶಿಕ್ಷಣದ ಬಗ್ಗೆ ಹೇಳಿರುವ ವಿಚಾರಗಳು ಯಾವುವು ?

೬. 'ನಿಸರ್ಗ-ಶಿಕ್ಷಣ ; ನಿಷೇಧಾತ್ಮಕ ಶಿಕ್ಷಣ'— ಟಿಪ್ಪಣಿ ಬರೆಯಿರಿ.

೭. 'ಪೆಸ್ಟೆಲೋಝಿ ನಿಜವಾದ ಶಿಕ್ಷಕ'— ಸ್ಪಷ್ಟೀಕರಿಸಿರಿ.

೮. 'ಆ್ಯನ್‌ಸಾಂಗ್'—ದ ತತ್ವವನ್ನು ವಿವರಿಸಿರಿ.

೯. ಶಿಕ್ಷಣದಲ್ಲಿ ಗಾಂಧೀಜಿ ಹಾಗೂ ಪೆಸ್ಟೆಲೋಝಿಯವರ ಪ್ರಯೋಗಗಳಲ್ಲಿ ಯಾವ ಹೋಲಿಕೆ ಕಂಡುಬರುವದು ?

೧೦. ಫ್ರೋಬೆಲ್‌ನಲ್ಲಿ ನಿಸರ್ಗ ಪ್ರೇಮವು ಹೇಗೆ ಹುಟ್ಟಿತು ?

೧೧. 'ಬಾಲೋದ್ಯಾನ, ಕಾಣಿಕೆಗಳು'— ಟಿಪ್ಪಣಿ ಬರೆಯಿರಿ.

೧೨. ಫ್ರೋಬೆಲ್‌ನು ಕಂಡುಹಿಡಿದ ಮೂಲತತ್ವವು ಯಾವುದು ?

೧೩. 'ಶಿಕ್ಷಣದಲ್ಲಿ ಸ್ವಾವಲಂಬನ ತತ್ವವನ್ನು ಮಾಂಟಿಸೋರಿಯವರು ಕ್ರಮಬದ್ಧವಾಗಿ ಮಾಡಿದರು'— ಹೇಗೆ ?

೧೪. 'ಇಂದ್ರಿಯ ಸಂಸ್ಕರಣ'; 'ಗತಿ ಶಿಕ್ಷಣ'; 'ಮಾಂಟಿಸೋರಿ ವರ್ಗದಲ್ಲಿಯ ಶಿಸ್ತು'— ಟಿಪ್ಪಣಿ ಬರೆಯಿರಿ.

೧೫. ಚಟುವಟಿಕೆಯ ಶಿಕ್ಷಣವನ್ನು ಮಾನಸ ಶಾಸ್ತ್ರವು ಹೇಗೆ ಸಮರ್ಥಿಸುವದು ?

೧೬. ಶಿಕ್ಷಣದ ವಿಷಯದಲ್ಲಿ ಡ್ಯೂಯಿಯವರ ಕೆಲವು ವಿಚಾರಗಳನ್ನು ಹೇಳಿರಿ.

೧೭. 'ಯೋಜನೆ' ಯೆಂದರೇನು ? ವಿಷಯ ಜ್ಞಾನಸಂಗ್ರಹಕ್ಕೆ ಅದು ಹೇಗೆ ಪ್ರಚೋದಕವಾಗುವದು.

೧೮. ಉಳಿದ ಶಿಕ್ಷಣ ಸಂಸ್ಥೆಗಳಿಗೂ 'ಶಾಂತಿನಿಕೇತನ'ಕ್ಕೂ ಯಾವ ವಿಷಯಗಳಲ್ಲಿ ವ್ಯತ್ಯಾಸವು ಕಂಡುಬರುವದು ?

೧೯. ಶಿಕ್ಷಣಸಂಸ್ಥೆಯೊಂದನ್ನು ಸ್ಥಾಪಿಸುವ ವಿಚಾರವು ಟಾಗೋರರವರಿಗೆ ಹೇಗೆ ಹೊಳೆಯಿತು?

೨೦. ಶಾಂತಿನಿಕೇತನವು ಯಾವ ಆದರ್ಶಗಳ ಜೋಪಾಸನೆ ಮಾಡುತ್ತಿದೆ ?

೨೧. ಇಲ್ಲಿಯ ಕೆಲವು ಸಾಂಸ್ಕೃತಿಕ ಚಟುವಟಿಕೆಗಳನ್ನು ಹೇಳಿರಿ.

೨೨. ಯಾವ ಪ್ರಯೋಗದ ಹಿನ್ನಲೆಯಲ್ಲಿ ಮೂಲಶಿಕ್ಷಣವು ಜನ್ಮತಾಳಿದೆ ?

೨೩. ಗಾಂಧಿಜೀಯವರ ದೃಷ್ಟಿಯಲ್ಲಿ 'ಶಿಕ್ಷಣ' ವೆಂದರೇನು ? ಈ ಹೊಸಯೋಜನೆಗೆ ಯಾವ ಹೆಸರು ಹೆಚ್ಚು ಸಮರ್ಪಕವಾಗಿ ತೋರುವದು ?

೨೪. ಮೂಲ ಶಿಕ್ಷಣದ ಮುಖ್ಯವಾದ ಕೆಲವು ವೈಶಿಷ್ಟ್ಯಗಳನ್ನು ವಿವರಿಸಿ.

೨೫. ಮೂಲೋದ್ಯೋಗವು ಹೇಗಿರಬೇಕು ?

೨೬. 'ಮೂಲ ಶಿಕ್ಷಣವು ಆಧುನಿಕ ಮಾನಸಶಾಸ್ತ್ರದ ತತ್ವಗಳನ್ನೂ ಒಳಗೊಂಡಿದೆ'-ವಿವರಿಸಿರಿ.

೨೭. ಮೂಲ ಶಿಕ್ಷಣದಲ್ಲಿ ಮಾತೃಭಾಷೆಯ ಸ್ಥಾನ, ಸಮವಾಯ.— ಟಿಪ್ಪಣಿ ಬರೆಯಿರಿ.

೨೮. ಶಿಕ್ಷಣದ ಮೂರು ಕೇಂದ್ರಗಳಿಂದ ಮಗುವಿಗೆ ಪ್ರಪಂಚ ಜ್ಞಾನವು ಹೇಗೆ ಉಂಟಾಗುವದು?

೨೯. 'ಸಮವಾಯ'-ವಿಧಾನದ ಬಗ್ಗೆ ಯಾವ ದಕ್ಷತೆಯನ್ನು ವಹಿಸ ಬೇಕು ?

೩೦. ಅಖಂಡ ಶಿಕ್ಷಣದ ತತ್ವ-ವಿಧಾನಗಳನ್ನು ವಿವರಿಸಿರಿ.

## ವಿಭಾಗ ೨ : ಶೈಕ್ಷಣಿಕ ಮಾನಸಶಾಸ್ತ್ರ

### ೧. ಮನವೆಂದರೇನು ?

ರೂಸೋನಿಂದ–ಡ್ಯೂಯಿಯವರೆಗೆ, ಶಿಕ್ಷಣವು ತನ್ನ ನಿಜವಾದ ಧ್ಯೇಯದ ಸಿದ್ಧಿಗಾಗಿ ಬೇರೆ ಬೇರೆ ಶಿಕ್ಷಣತಜ್ಞರಿಂದ ಯಾವ ನೆರವನ್ನು ಪಡೆದಿದೆ ಯೆಂಬುದನ್ನು ಈ ಮೊದಲು ವಿವರಿಸಿದೆ. ಆಧುನಿಕ–ಇಲ್ಲವೆ 'ಹೊಸ ಶಿಕ್ಷಣವು' ಈ ಮುನ್ನಡೆಯ ಪ್ರತಿಫಲವಾಗಿದೆ. ಈ ಹೊಸ ಶಿಕ್ಷಣದ ಹೆಗ್ಗುರುತುಗಳನ್ನು ಸಂಕ್ಷೇಪವಾಗಿ ಇನ್ನೊಮ್ಮೆ ಇಲ್ಲಿ ಜ್ಞಾಪಿಸಿಕೊಳ್ಳಬಹುದು :— 'ಆಧುನಿಕ ಶಿಕ್ಷಣದಲ್ಲಿ ಮಗು ಶಿಕ್ಷಣದ 'ಪ್ರಾಣ'ವಿದ್ದಂತೆ. ನಿರ್ಜೀವವಾದ ಪಾತ್ರೆಯಂತೆ, ತುಂಬುವದನ್ನು ತುಂಬಿದಂತೆ ತೆಗೆದುಕೊಳ್ಳಲಾರದು. ಮಗುವಿಗೆ ಮಿದುಳೊಂದಿರುವಂತೆ, ಮನಸ್ಸೊಂದಿದೆ. ಆದೇಶ ಆಕಾಂಕ್ಷೆಗಳಿವೆ. ಉದ್ವೇಗ, ಉಲ್ಲಾಸಗಳಿವೆ. ಮಗುವಿನ ಶಾರೀರಿಕ ಬೆಳವಣಿಗೆಯೊಡನೆ, ವಯೋನುಗುಣವಾಗಿ ಆತನ ಮನಸ್ಸೂ, ಅಂತರಂಗದ ವಿವಿಧ ಭಾವನೆಗಳೂ ಸರಾಗವಾಗಿ ವಿಕಾಸಹೊಂದುತ್ತಿರುವವು. ಮಗುವಿನ ವ್ಯೈಮನಗಳೆರಡೂ ಭಿನ್ನವಾಗಿಲ್ಲ. ಅವುಗಳೆರಡೂ ಒಂದೇ ತಾಳ ನಿಯಮಗಳನ್ನನುಸರಿಸಿ ಬೆಳೆಯುವವು ಒಂದು ಮಗುವಿನಂತೆ ಮತ್ತೊಂದು ಮಗುವಾಗಿಲ್ಲ. ಅವರಲ್ಲಿಯ ಶಕ್ತಿಯ ಪರಿಮಿತಿ, ಒಲವಿನ ವಿಷಯ ಭಿನ್ನವಾಗಿರುವವು. ಪರಸ್ಪರವಾಗಿ ಪ್ರತ್ಯೇಕವಾಗಿರುವ ಶಕ್ತಿಗಳಿಂದ ಕೂಡಿದ ಮನೆ–'ಮನಸ್ಸು ಎಂಬುದು ತೀರ ತಪ್ಪು. ಮನಸ್ಸಿನಕಾರ್ಯವು ಅನೇಕ ಮುಖವಾಗಿ ಕೊನೆಗಂಡರೂ ಮನಸ್ಸೆಂಬುದು ಅಖಂಡವಾಗಿದೆ....'.

ಮಗು, ಸಚೇತನಪ್ರಾಣಿ :— 'ಮಗು ಅಚೇತನ ಜಡವಸ್ತುವಲ್ಲ–ಸಚೇತನ ಪ್ರಾಣಿಯಾಗಿದೆ', ಎಂಬ ಒಂದೇ ಮಾತಿನಲ್ಲಿ ಮೇಲಿನ ವಿಚಾರಗಳನ್ನೆಲ್ಲ ಸಂಗ್ರಹಿಸಿ ಹೇಳಬಹುದು. ಮಗು ಆತ್ಮ–ಶಕ್ತಿಗಳುಳ್ಳ ಚೈತನ್ಯಸ್ವರೂಪ. ಆತನ ಅಂತರಂಗ–ಬಹಿರಂಗಗಳ ಸಕಾಲಿಕವಾದ ಹಾಗೂ ಸಾಪೇಕ್ಷವಾದ ಬೆಳವಣಿಗೆಯು ಅತ್ಯಂತ ಸೋಜಿಗದ್ದಾಗಿದೆ. ಶರೀರ–ಮನಸ್ಸುಗಳಲ್ಲಿ ನಿತ್ಯವಾದ, ಬಿಡಿಸಲಾರದ ಸಂಬಂಧವಿದೆ. 'ಒಳ್ಳೇ ದೇಹದಲ್ಲಿ ಒಳ್ಳೇ ಮನಸ್ಸು' ಎಂಬ ಉಕ್ತಿಯು ಇದೇ ಸಂಗತಿಯನ್ನೇ ಸೂಚಿಸುವದು. ಶರೀರವು ಮನಸ್ಸಿನ ನಿಯಂತ್ರಣಕ್ಕೆ ಆಧೀನವಾಗಿರುವಂತೆ, ಶರೀರದ ಸಹಕಾರ್ಯವಿಲ್ಲದ ಮನಸ್ಸೂ ಅಸಹಾಯವಾಗಿ ಬಿಡುತ್ತಿದೆ. ಇಂದ್ರಿಯುಗಳು ತಾವೇ ಏನನ್ನೂ ಮಾಡಲಾರವು. ಮನಸ್ಸಿಲ್ಲದಿದ್ದರೆ, ಮನಸ್ಸು ಬೇರೆಡೆಯಲ್ಲಿ ವ್ಯಗ್ರವಾಗಿದ್ದರೆ ಸಮೀಪದ ವಸ್ತು ಕೂಡ ಕಣ್ಣಿಗೆ ಕಾಣಿಸದು. ಮನಸ್ಸಿನ ಪ್ರೇರಣೆಯೆ ಎಲ್ಲ ಇಂದ್ರಿಯುಗಳ ಕ್ರಿಯಾಶಕ್ತಿ.

ಮಾತಿಗೆ ನೂರುಸಲ, ನಾವು 'ಮನಸ್ಸೆಂ'ಬ ಶಬ್ದವನ್ನು ಉಪಯೋಗಿಸುವದುಂಟು. 'ಮನಸ್ಸಿನಲ್ಲಿದೆ', 'ಮನಸ್ಸು ಸರಿಯಾಗಿಲ್ಲ' ಇತ್ಯಾದಿಯಾಗಿ ಎಲ್ಲರೂ ಹೇಳುವದುಂಟು. ಆದರೆ ಈ ಮನಸ್ಸಿನ ಬಗ್ಗೆ ಸರಿಯಾದ ತಿಳುವಳಿಕೆ ಕ್ವಚಿತ್ತಾಗಿ ಕಂಡುಬರುವದು. ಕಣ್ಣು–ಕಿವಿಗಳಂತೆ ಅದು ಕಾಣುವ ವಸ್ತುವಲ್ಲ; ಅಗೋಚರವಾದುದು. ಗಾಳಿ ಅಗೋಚರ. ಆದರೆ ಮೈಗೆ ತಗಲಿದ ಅನುಭವ, ಹಾಗೂ ಗಿಡಗಳನ್ನು ಅಲ್ಲಾಡಿಸುವ ಕಾರ್ಯಗಳಿಂದ 'ಗಾಳಿ'ಯ ಬಗ್ಗೆ ನಾವು ತಿಳಿದುಕೊಳ್ಳುವೆವು. ಅದೇ ರೀತಿಯಾಗಿ ವ್ಯಕ್ತಿಯ ಅನು

ಭಾವ ಹಾಗೂ ಕೃತಿಗಳಲ್ಲಿ ಮನಸ್ಸಿನ ಕಾರ್ಯ ವ್ಯಕ್ತವಾಗುವದು. ಈ ಅಗೋಚರವಾದ ಮನಸ್ಸು ಒಂದು ವಸ್ತುವೆ? ವಿಶಿಷ್ಟವಾದ ಶಕ್ತಿಯೆ? 'ಆತ್ಮ'–'ಮನಸ್ಸು'ಗಳೆರಡೂ ಒಂದೆಯೆ? ಇವುಗಳ ವಿವೇಚನೆ ಗಹನವಾದುದು. ಮನಸ್ಸು ವಸ್ತುವಾಗಿಲ್ಲವೆಂಬುದು ಎಲ್ಲರೂ ಒಪ್ಪಿದ ಮಾತು, ಮನಸ್ಸು ಒಂದು ಶಕ್ತಿಯಾಗಿದೆ. ಚೈತನ್ಯದ ಅನೇಕ ಶಕ್ತಿಗಳಲ್ಲಿ ಇದೇ ಹಿರಿದಾದ ಶಕ್ತಿ. ಅಂತರ್ಯವಾದ ಈ ಶಕ್ತಿಯ ಅಡಳಿತಕ್ಕೆ ಇಂದ್ರಿಯಗಳೆಲ್ಲವೂ ಅಧೀನವಾಗಿರುವವು. ಇಂದ್ರಿಯಗಳು ಮನಸ್ಸಿನ 'ಕರ'ಗಳು, ಸಾಧನಗಳು. 'ಮನಸ್ಸಿನ ಬಾಗಿಲು'ಗಳೆಂತಲೂ ಅವುಗಳಬಗ್ಗೆ ಹೇಳುವದುಂಟು. ಇಂದ್ರಿಯಗಳ ಕಾರ್ಯ ಹೆಚ್ಚಿನದು, ಮನಸ್ಸಿನ ಕಾರ್ಯವು ಅವುಗಳಿಗೂ ಮಿಕ್ಕಿದ್ದು. ಅಂತೆಯೆ–'ಇಂದ್ರಿಯಾಣಿ ಪರಾಣ್ಯಾಹುಃ, ಇಂದ್ರಿಯೇಭ್ಯಃ ಪರಂ ಮನಃ'–ಎಂದು ಗೀತೆಯಲ್ಲಿ ಹೇಳಿದುದುಂಟು.

ಮನಸ್ಸು ಹಾಗೂ ದೇಹಗಳ ಅನ್ಯೋನ್ಯತೆಯನ್ನು ಇಂದಿನ ಮಾನಸ ಶಾಸ್ತ್ರವು ಸಾಧಾರವಾಗಿ ಸಿದ್ಧ ಮಾಡಿಕೊಟ್ಟಿದೆ. ಪ್ರಾಣಿಗಳ ವಿಶಿಷ್ಟವಾದ ಆತ್ಮಶಕ್ತಿಯೆ–ಚೈತನ್ಯವೇ ಅವುಗಳಿಂದಾಗುವ ಎಲ್ಲ ಕಾರ್ಯಗಳನ್ನೂ ಮಾಡಿಸುವದು. ಆತ್ಮ ಶಕ್ತಿಯು ಅಖಂಡವಾಗಿದ್ದರೂ ಅದರ ಕಾರ್ಯವು ಬಹುಮುಖವಾಗಿದೆ. 'ಬೋಧೆ'–ತಿಳುವಳಿಕೆ ಅದರದೊಂದು ಮುಖವಾಗಿದ್ದರೆ, 'ಭಾವ' ಮತ್ತೊಂದು ಮುಖ. ಒಂದೇ ಜೀವ ಶಕ್ತಿಯ ಅನೇಕ ಕಾರ್ಯಗಳಿವು. ಎಲ್ಲ ಸಚೇತನ ಪ್ರಾಣಿಗಳಲ್ಲಿಯೂ ಈ ಜೀವತತ್ವವು ಸ್ವರೂಪದಲ್ಲಿ ಸಮಾನವಾಗಿರುತ್ತದೆ. ಪ್ರಾಣಿಗಳ ತರಗತಿಯ ಮೇರೆಗೆ ಅದರ ಶಕ್ತಿಯ ಪರಿಮಿತಿಯು ಹೆಚ್ಚು ಕಡಿಮೆಯಾಗುವದು. ಸಚೇತನ ಪ್ರಾಣಿಯ ವ್ಯವಹಾರಕ್ಕೂ ನಿರ್ಜೀವ ವಸ್ತುವಿನ ವ್ಯವಹಾರಕ್ಕೂ ಮಹದಂತರವಿದೆ. ಸಚೇತನ ಪ್ರಾಣಿಯ ವ್ಯವಹಾರವೆಲ್ಲವೂ 'ಸಹೇತುಕ' ವಾದುದು. ಸ್ವತಂತ್ರವಾದುದು. ಅತ್ಯಂತ ಕಡಿಮೆ ಮಟ್ಟದ ಪ್ರಾಣಿಯಲ್ಲಿಯೂ ಸಹೇತುಕತೆಯು ಕಂಡು ಬರುವದು. ನಿರ್ಜೀವ–ಜಡವಸ್ತುವಿನ ವ್ಯವಹಾರವೆಲ್ಲವೂ ನಿರ್ಹೇತುಕವಾದುದು; ಕೇವಲ ಯಾಂತ್ರಿಕವಾದುದು; ಪರಾಧೀನವಾದುದು. ಗಾಲಿಯು ಮುಂದೆ ಹೋಗಬೇಕಾದರೆ ಅದನ್ನು ಮತ್ತೊಬ್ಬರು ಉರುಳಿಸ ಬೇಕಾಗುವದು. ಸಚೇತನ ಪ್ರಾಣಿಯಾದ ಬೆಕ್ಕು ಮನೆಯಲ್ಲಿ ಸುಳಿದಾಡಲು, ಹಸಿವೆ ಇಲ್ಲವೆ ಹಾಲಿನ ವಾಸನೆಗಳಿಂದ ಹುಟ್ಟಿದ ಸ್ವಯಂಪ್ರೇರಣೆಯೆ ಕಾರಣವು. ಯಾಂತ್ರಿಕ ಕ್ರಿಯೆಗೂ ಸಚೇತನಕ್ರಿಯೆಗೂ ಇದೇ ಮಹದಂತರವು. ಸಚೇತನ ಕ್ರಿಯೆ ಮನಸ್ಸಿನ ಸಹಕಾರದಿಂದ ನಡೆಯುವ ಒಂದು ನಡವಳಿಕೆ–ವರ್ತನೆ. ಅಚೇತನಕ್ರಿಯೆ ಹೊರಗಿನ ಶಕ್ತಿಯಿಂದ ಚಾಲಿತವಾದ ಒಂದು ಕಾರ್ಯ. ಯಾಂತ್ರಿಕ ಕ್ರಿಯೆಯು ತಾನಾಗಿ ಬದಲಿಸದು. ಕಾರ್ಯ ಸಿದ್ಧಿಗನುಗುಣವಾಗಿ ಸಚೇತನವು ತನ್ನ ಕ್ರಿಯೆಯನ್ನು ಬದಲಿಸುವದು; ಉದ್ದೇಶವು ಪೂರ್ತಿಯಾದೊಡನೆ ಅದನ್ನು ನಿಲ್ಲಿಸುವದು. ಉರುಳುವ ಗಾಲಿ ತೆಗ್ಗು ತೆವರುಗಳನ್ನು ಕಂಡು ತಾನಾಗಿಯೆ ತನ್ನ ಗತಿಯನ್ನೂ ದಿಕ್ಕನ್ನೂ ಬದಲಿಸಲಾರದು. ಹೊರಗಿನಿಂದ ಪ್ರಾಪ್ತವಾಗಿರುವ ಶಕ್ತಿಯು ಕಡಿಮೆಯಾದಂತೆ ಗಾಲಿಯ ವೇಗವು ಕುಂಠಿತವಾಗುವದು, ಕೊನೆಗೆ ನಿಂತು ಬಿಡುವದು. ಹಾಲನ್ನು ಹುಡುಕಿಕೊಂಡು ಬೆಕ್ಕು ಮೂಲೆ ಮೂಲೆಗಳಲ್ಲಿ ಸುತ್ತಾಡುವದು; ಹಾಲು ದೊರೆಯದಿದ್ದರೆ ಬೇರೊಂದು ಕಡೆಗೆ ತಾನಾಗಿ ಹೋಗಿಬಿಡುವದು.

ಸಚೇತನವಾದ ಪ್ರಾಣಿಯಲ್ಲಿ ಇಂದ್ರಿಯಗಳಿವೆ, ಸ್ನಾಯುಗಳಿವೆ, ಮಜ್ಜಾತಂತು ಗಳಿವೆ. ಆದರೆ ಇವೆಲ್ಲವುಗಳು ಹೇಗೋ ಕೂಡಿಕೊಂಡ ಒಂದು ಗುಂಪು ಸಚೇತನಪ್ರಾಣಿ ಯೆನಿಸದು. ಆತನು ಚೇತನೆಯಿಂದ ಕೂಡಿದ, ಆಲೋಚನಾ ಶಕ್ತಿಯುಳ್ಳ ಒಂದು ಜೀವನ. ಸಚೇತನದಲ್ಲಿ ಸುಸಂಘಟಿತವಾದ ಐಕ್ಯವು ಕಂಡುಬರುವದು. ಕಲ್ಲನ್ನು ಒಡೆದರೆ, ಉಂಟಾಗುವ ತುಣುಕುಗಳೂ ಕಲ್ಲುಗಳೆ. ಆದರೆ ಸಚೇತನ ಪ್ರಾಣಿಯ ಅಂಗಾಗವೂ ಸ್ವತಂತ್ರ ಸಜೇತನ ಪ್ರಾಣಿ ಯಾಗಲಾರದು. ಆತನ ಅವಯವಗಳ ಒಂದು ಗೂಡುವಿಕೆ ಯಲ್ಲಿ ಒಂದು ಕ್ರಮವಿದೆ, ಸಂಘಟನೆಯಿದೆ. ಒಂದು ಅವಯವ ಮತ್ತೊಂದು ಅವಯವ ದೊಡನೆ ಸಹಕರಿಸುತ್ತಿದೆ. ಸಮಗ್ರ ಸಚೇತನವು ಪ್ರತಿ–ಅವಯವದ ಕಾರ್ಯಕ್ಕಾಗಿ ಅಗತ್ಯವಾಗಿದೆ. ಯಂತ್ರದ ಭಾಗಗಳಲ್ಲಿಯೂ ಸಹಕಾರ–ಸಂಘಟನೆಗಳಿರಬಹುದು. ಆದರೆ ಆ ಸಂಘಟನೆ ಸ್ವಾಯತ್ತವಾದುದಲ್ಲ; 'ಯಂತ್ರರಚಿಸಿದವನ ಕುಶಲತೆಯಿಂದ ಬಂದುದು. ಸಚೇತನದಕಾರ್ಯದಲ್ಲಿರುವ ಯೋಜಕತೆ ಸ್ವಕೀಯವಾದುದು, ಸ್ವಾಧೀನ ವಾದುದು.

ಅಚೇತನ ವಸ್ತುವಿಗೆ ಬೆಳವಣಿಗೆಯಿಲ್ಲ, ಸಚೇತನಕ್ಕೆ ಬೆಳವಣಿಗೆಯುಂಟು. ಆಹಾರವನ್ನು ಸಂಪಾದಿಸಿ, ಅರಗಿಸಿಕೊಂಡು ಅದು ಬೆಳೆಯಬಲ್ಲದು. ಈ ಬೆಳವಣಿಗೆ-- ಪ್ರಗತಿಯು–ಚೈತನ್ಯದ ಕುರುಹು. ಸಚೇತನವಾದ ಸಸಿಯೂ ಬೇರುಗಳಿಂದ ಆಹಾರ ದೊರಕಿಸಿಕೊಂಡು ಬೆಳೆಯುವದು. ಆತ್ಮವಿಕಾಸ, ಆತ್ಮಾನುಸಂಧಾನ, (ಪರಿಸ್ಥಿತಿಗೆ ತನ್ನನ್ನು ಹೊಂದಿಸಿಕೊಳ್ಳುವದು) ಹಾಗೂ ಆತ್ಮರಕ್ಷಣೆ– ಇವು ಮೂರು ಸಂಗತಿಗಳು ಸಚೇತನದ ವೈಶಿಷ್ಟ್ಯಗಳಾಗಿವೆ. ಇವುಗಳ ಜೊತೆಗೆ ಸ್ವಕೀಯ ವರ್ಗವನ್ನು ಉತ್ಪಾದಿಸಿ ಮುಂದರಿಸುವದೂ ಸಚೇತನದ ಇನ್ನೊಂದು ಮಹತ್ವದ ಕಾರ್ಯವಾಗಿದೆ. ಈ ಉತ್ಪಾದನೆ ಯಲ್ಲಿ ಕೃತ್ರಿಮವಾದ ಎಲ್ಲ ಆತಂಕಗಳನ್ನು ಎದುರಿಸಿ ಸಚೇತನವು ತನ್ನ 'ಪಡಿಯಚ್ಚು'ನ್ನು –ಪ್ರತಿಕೃತಿಯನ್ನು ಉಳಿಸಿಕೊಳ್ಳುವದು. ನಿಸರ್ಗದಿಂದ ತನಗೆ ಬೇಕಾದ ವಸ್ತುಗಳನ್ನೇ ಆಯ್ದುಕೊಳ್ಳುವದು.

ಮನಸ್ಸು ಮಾನವನು ಪಡೆದು ಕೊಂಡಿರುವ ಹಿರಿದಾದ ಕಾಣಿಕೆ. ಇದೇ ಮಾನವನ ಮುಖ್ಯ ಲಕ್ಷಣ. ಉಳಿದ ಸಚೇತನ ಜೀವಿಗಳಿಂದ ಮಾನವನ್ನು ವಿಂಗಡಿಸುವ ವಿಶಿಷ್ಟ ಶಕ್ತಿ. ಉತ್ಕ್ರಾಂತಿಯಲ್ಲಿ ಮನಸ್ಸು ಸಾಧಿಸಿದ ಪ್ರಗತಿಯು ಸೋಜಿಗವಾಗಿದೆ. ಮನೋವಿಕಾಸವೆ ಮಂಗನನ್ನು ಮಾನವನನ್ನಾಗಿ ಮಾಡಿತು. ಕಾಡು ನಾಡಾಯಿತು. ಪಶು ಜೀವನದಿಂದ ಪೌರುಷದ ಪರಾಕಾಷ್ಠತೆಗೆ ಮಾನವನನ್ನು ತಂದು ನಿಲ್ಲಿಸಿದೆ. ಈ ಶಕ್ತಿ ಯಿಂದಲೆ ಮಾನವನು ತನ್ನನ್ನು ತಾನೇ ತಿಳಿದುಕೊಳ್ಳಬಲ್ಲನು; ದೇವನನ್ನು ತಿಳಿಯಲು ಹವಣಿಸುವನು. ಈ ಶಕ್ತಿಯಿಂದ ಕೂಡಿದ ಮಾನವನನ್ನು ಸೃಜಿಸಿ ದೇವನೂ ಸಂತೋಷ ಪಟ್ಟನಂತೆ. ಮನೋವ್ಯಾಪಾರವು ಮೂರು ಬಗೆಗಳಲ್ಲಿ ನಡೆಯುವದು. ಅವುಗಳ ಸ್ಥೂಲ ಪರಿಚಯವು ಶಿಕ್ಷಣಕಾರ್ಯದಲ್ಲಿ ಸಹಾಯಕವಾಗಿದೆ.

**ಅನುಭವಗಳ ಜತನ :—** ಗಾಯ ಮಾಯ್ದು ಹೋದರೂ, ಕಲೆ ಹಿಂದೆ ಉಳಿ ಯುವದಿಲ್ಲವೆ? ಇದೇ ಮೇರೆಗೆ ಜೀವನದಲ್ಲಿ ಒದಗುವ ಪ್ರತಿಯೊಂದು ಅನುಭವವೂ

ಮನಸ್ಸಿನ ಮೇಲೆ ತನ್ನ ಪರಿಣಾಮವನ್ನು ಮಾಡುವದು. ಬಾನುಲಿಯಲ್ಲಿ ಗೀತಗಳ ಇಲ್ಲವೆ ಭಾಷಣಗಳ 'ಧ್ವನಿ ಮುದ್ರಿಕೆ' ತೆಗೆದುಕೊಳ್ಳುವರು. ಮನಸ್ಸೂ ಎಲ್ಲ ಅನುಭವಗಳ 'ಮುದ್ರಿಕೆ'ಯನ್ನು ತೆಗೆದುಕೊಳ್ಳುವದು. ಮುದ್ರಿಕೆಗಳಿಂದ ಅನುಭವಗಳನ್ನು ಜತನ ಮಾಡುವ ಸಹಜ ಶಕ್ತಿಯು ಮನಸ್ಸಿಗಿರುವದು, ಈ ಅನುಭವಗಳ ಅವಶೇಷಗಳು ಬಿಡಿ ಬಿಡಿಯಾಗಿ-ಅಸ್ತವ್ಯಸ್ತವಾಗಿ-ಮನಸ್ಸಿನ ಮೂಲೆ ಮೂಲೆಗಳಲ್ಲಿ ಬಿದ್ದುಕೊಂಡಿರುವದಿಲ್ಲ. ಸಜಾತೀಯವಾದ, ಸದೃಶವಾದ ಅನುಭವಗಳು ಕೂಡಿಕೊಳ್ಳುವವು. ಹೀಗೆ ಸಂಘಟಿಸಿದ ಅನುಭವಗಳ 'ಗುಂಪು'ಗಳೆ ನಮ್ಮ ಸ್ಮೃತಿಗೆ ಆಧಾರವಾಗಿವೆ. ಈ ಅವಶೇಷಗಳು ಪ್ರತ್ಯಕ್ಷ ಅನುಭವಗಳಷ್ಟೇ ಸ್ಪಷ್ಟವಾಗಿರುವದಿಲ್ಲ. 'ಎಂದೋ-ಎಲ್ಲಿಯೋ'ನೋಡಿದಂತೆ-ಕೇಳಿದಂತೆ, ಅಸ್ಪಷ್ಟವಾದ ಪರಿಚಯವು ನಮಗಾಗುವದು. ಅನುಭವದ ಶೇಷಗಳು ಹೀಗೆ ಒಂದುಗೂಡುವದಕ್ಕೆ- 'ಸಂಸಕ್ತಿ'ಇಲ್ಲವೆ 'ಸಂಬಂಧೀಕರಣ'ಎನ್ನುವರು. ಈ ಕ್ರಿಯೆಗೆ ಕೆಲವೊಂದು ಸಮಯ ಹಿಡಿಯುವದು. ಅಂತೆಯೆ ಒಂದು ವಿಷಯ ಕೂಡಲೆ ಸ್ಮರಣೆಗೆ ಬಾರದೆ, ಕೆಲ ಕಾಲದ ನಂತರ ಆಕಸ್ಮಿಕವಾಗಿ ಸ್ಮೃತಿ ಪಟಲದಲ್ಲಿ ಕಾಣಿಸಿಕೊಳ್ಳುವದು. ಇದೇ ಮೇರೆಗೆ ಒಂದು ಸಂಗತಿಯು ನೆನಪಾದರೆ ಅದಕ್ಕೆ ಸಂಬಂಧಿಸಿರುವ ಅನೇಕ ಸಂಗತಿಗಳೂ ಸ್ಮರಣೆಗೆ ಬರುವವು.

ಸಚೇತನದ ಮನೋವ್ಯಾಪಾರದಲ್ಲಿ ಚೈತನ್ಯವು ಇನ್ನೊಂದು ಶ್ರೇಷ್ಠ ಶಕ್ತಿಯಾಗಿದೆ. ಇದೇ ಶಕ್ತಿಗೆ-ಆತ್ಮಶಕ್ತಿ, ಪ್ರಾಣಶಕ್ತಿ, ಜೀವಿತಾಶೆ ಮುಂತಾದ ಬೇರೆ ಹೆಸರುಗಳಿಂದಲೂ ಕರೆಯುವರು. ಸರ್ವ ಬಗೆಯ ಪ್ರಗತಿಗೆ ಇದೇ 'ಮೂಲತತ್ವ'. ಏಕಾಣು ಜೀವಿಯಲ್ಲಿಯ ಚೈತನ್ಯವೂ, ದೇವನ ಶ್ರೇಷ್ಠ ಕಲಾಕೃತಿಯೆನಿಸಿದ ಮಾನವನಲ್ಲಿರುವ ಚೈತನ್ಯವೂ ಸ್ವರೂಪತಃ ಒಂದೇಯಾಗಿರುವದು. ಸಚೇತನದ ಮೇಲು ಮೇಲಿನ ಮೆಟ್ಟಿಲುಗಳಲ್ಲಿ ಅದೇ ಚೈತನ್ಯದ ಕಾರ್ಯವು ಹೆಚ್ಚುಹೆಚ್ಚು ಉನ್ನತವಾಗಿರುವದು. ಪಚನಕ್ರಿಯೆ, ರುಧಿರಾಭಿಸರಣ ಮುಂತಾದ ಸರ್ವಸಚೇತನಗಳಲ್ಲಿ ಕಂಡುಬರುವ ಶಾರೀರಿಕಕ್ರಿಯೆ ಇವು ಚೈತನ್ಯದ ಚಟುವಟಿಕೆಗಳೆ. ಟೊಂಗೆ ನೆಟ್ಟರೂ ಕೆಲವು ಗಿಡಗಳು ಮತ್ತೆ ಚಿಗುರಿ ಬೆಳೆಯುವವು. ಕತ್ತರಿಸಿದ ಕೆಲವೊಂದು ಅವಯವವನ್ನು ಪ್ರಾಣಿಗಳು ಮತ್ತೆ ಪಡೆಯುವವು— ಇದೂ ಚೈತನ್ಯದ ಕಾರ್ಯವು. ಇದೇ ಮೇರೆಗೆ ಮಾನವನು ಬೆಳೆಸಿಕೊಂಡು ಬಂದಿರುವ ಜ್ಞಾನ-ವಿಜ್ಞಾನಗಳು, ಕಲೆ-ಶಾಸ್ತ್ರಗಳೂ ಚೈತನ್ಯದ ಚಟುವಟಿಕೆಯ ಉನ್ನತಸ್ವರೂಪಗಳೆ ಆಗಿವೆ.

ಇವುಗಳ ಜೊತೆಗೆ ಶಿಕ್ಷಣಕಾರ್ಯದಲ್ಲಿ ಸಹಕರಿಸುವ ಇನ್ನೂ ಕೆಲವು ಮಾನಸಿಕ ಶಕ್ತಿಗಳಿರುವವು. ಅನುಮಾನ, ಅನುಕರಣ, ಕಲ್ಪಕತೆ— ಇವುಗಳಲ್ಲಿ ಪ್ರಮುಖವಾದವುಗಳು. ದಿನದಿನದ ಶಿಕ್ಷಣದಲ್ಲಿ ಇವುಗಳ ಸಹಕಾರವು ಹೆಚ್ಚೆಹೆಚ್ಚಿಗೂ ಬೇಕಾಗುವದು. ಅನುಮಾನವು ಊಹಾಶಕ್ತಿಯ ಪ್ರತಿಫಲ. ಕಾರ್ಯಗಳ ಸಂಬಂಧವನ್ನು ಜೋಡಿಸುವ ಒಂದು ಬಗೆಯ ವಿಧಾನ. ವಿವಿಧ ವಸ್ತುಗಳಲ್ಲಿಯ ಗುಣಸಾಮ್ಯತೆ, ರೂಪಸಾಮ್ಯತೆಗಳನ್ನು ನಿರೀಕ್ಷಿಸುವದು, ಸಾಮಾನ್ಯತೆಯನ್ನು ಕಂಡುಹಿಡಿದು ವಸ್ತುಗಳನ್ನು ವರ್ಗೀಕರಿಸುವದು, ವಿವಿಧತೆಯಲ್ಲಿ ಏಕರೂಪತೆಯನ್ನು ಕಾಣುವದು, ಅವುಗಳಿಗೆ ಸಾಮಾನ್ಯತೆಯ ಸಂಬಂಧವನ್ನು ಜೋಡಿಸುವದು — ಮಾನಸಿಕ ಶಕ್ತಿಗಳಲ್ಲಿ ಮುಖ್ಯವಾದುದು. ಅನುಮಾನ ಸಾಧನೆಗೆ

ಇದೇ ಆಧಾರವಾದುದು. ಸಾಮಾನ್ಯತೆಯ ಕಲ್ಪನೆಯಾಗಬೇಕಾದರೆ ಅನುಭವಗಳನ್ನು ತೂಗಿ ನೋಡಬೇಕು. ವಿಭಜನ-ಸಂಯೋಜನಾತ್ಮಕವಾದ ಈ ಕಾರ್ಯವು ಒಂದೇ ಮನೋವ್ಯಾಪಾರದ ಎರಡು ಮುಖಗಳಿದ್ದಂತೆ. ಅನುಮಾನವು ಈ ಕ್ರಿಯೆಯನ್ನೇ ಮುಂದುವರಿಸುತ್ತಿದೆ. ಸಾಮಾನ್ಯ ತತ್ವವನ್ನು ಬಿಡಿ ವಸ್ತುವಿಗೆ ಸಮನ್ವಯಿಸುವದು. ಅನುಮಾನದ ಒಂದು ಸ್ವರೂಪ. ಭಿನ್ನವಾದ ವಸ್ತುಗಳ ಸೂಕ್ಷ್ಮ ನಿರೀಕ್ಷಣೆಯಿಂದ ಅವುಗಳಲ್ಲಿರುವ ಸಾಮಾನ್ಯ ತತ್ವವನ್ನು ಕಾಣುವದು, ಎರಡನೆಯ ಸ್ವರೂಪ. ಎರಡನೆಯ ಪ್ರಕಾರದ ಅನುಮಾನವೆ ವಿಜ್ಞಾನದ ಅಡಿಗಲ್ಲಾಗಿದೆ. ಶಿಕ್ಷಣ ಶಾಸ್ತ್ರವೂ ಅದನ್ನೇ ತನ್ನದಾಗಿ ಮಾಡಿಕೊಂಡಿದೆ.

ಒಬ್ಬನ ಸಂಸ್ಕಾರಗಳು ಮತ್ತೊಬ್ಬನಲ್ಲಿ ಹರಿದು ಬಂದು ಸೇರುವದಕ್ಕೆ 'ಅನುಕರಣ'ವೆಂದು ಹೆಸರು. ಅನುಕರಣವು ಮೂರು ವಿಧವಾಗಿದೆ. 'ಒಬ್ಬರ ಭಾವವು ಹಲವರ ಭಾವ'ವಾಗುವದು-ಭಾವಾನುಕರಣ. ಒಬ್ಬರ ವಿಚಾರವು ಹಲವರ ವಿಚಾರವಾಗುವದು-ವಿಚಾರಾನುಕರಣ. ಒಬ್ಬರು ಮಾಡಿದಂತೆ ಬೇರೆಯವರು ಮಾಡುವದು-ಕೃತಿಯ ಅನುಕರಣ. ಇದು ಎಲ್ಲರಿಗೂ ಚಿರಪರಿಚಿತವಾದುದು. ಅನುಕರಣವನ್ನು ಸಹಜ ಪ್ರವೃತ್ತಿ (ಹುಟ್ಟು ಗುಣ)ಗಳಲ್ಲಿ ಒಂದಾಗಿ ಭಾವಿಸುವವರೂ ಕೆಲವರುಂಟು. ಎಳೆಯತನದಲ್ಲಿ ತೋರಿ ಬರುವ ಅವಲೋಕನ-ಅನುಕರಣಗಳು ಚಿಕ್ಕ ಮಕ್ಕಳ ದೇಹ ಬುದ್ಧಿಗಳ ವಿಕಾಸಕ್ಕೆ ನಿಸರ್ಗವು ಒದಗಿಸುವ ಪ್ರಬಲ ಸಾಧನೆಗಳಾಗಿವೆ. ' ಹೀಗೆ ಮಾಡಬೇಕು ' ಇಲ್ಲವೆ ' ಹೀಗೆ-ಇರುವಂತೆ-ಆಗಬೇಕು ' ಎನ್ನುವದು ಸಹೇತುಕವಾದ ಅನುಕರಣವು. ಒಂದು ಉದ್ದೇಶದ ಪೂರ್ತಿಗಾಗಿ ಮಾಡುವ ಅನುಕರಣಕ್ಕೆ-ಧ್ಯೇಯ ಸಾಧನೆ, ಯೆಂದು ಹೇಳುವೆವು. ವ್ಯಕ್ತಿಗಳಲ್ಲಿ ತೋರಿಬರುವಂತೆ ರಾಷ್ಟ್ರಗಳೂ ಈ ಬಗೆಯ ಅನುಕರಣವನ್ನು ಅನುಸರಿಸುವವು. ತುರ್ಕಸ್ತಾನವು ಯುರೋಪದ ವೇಷ-ರೀತಿ-ನಡವಳಿಕೆಯನ್ನು ಎತ್ತಿಕೊಂಡಿತು. ಆಧುನಿಕ ಜಪಾನವು ಅನುಕರಣದಿಂದಲೆ ಮುಂದೆ ಬಂದಿದೆ. ಮಾಡಿದ್ದನ್ನೇ ಮಾಡುವದೂ ನಮ್ಮ ಮಾನಸಿಕ ಒಲವುಗಳಲ್ಲಿ ಒಳ್ಳೇ ಮಹತ್ವದ್ದಾಗಿದೆ. ಚಿಕ್ಕ ಮಕ್ಕಳಿಗೆ ಅದು ಹೆಚ್ಚಾಗಿ ಸೇರುವದು ಒಂದೇ ಕಥೆಯನ್ನು ಎಷ್ಟು ಸಲ ಕೇಳಿದರೂ ಅವರಿಗೆ ಬೇಸರವಿಲ್ಲ. ಮಾಡಿದ್ದನ್ನೆ ಮಾಡುತ್ತ ಹೋದಂತೆ, ಮುಂದೆ ಆ ಕ್ರಿಯೆಯು 'ರೂಢಿ' ಯಾಗುವದು. ಸ್ಥಿರತೆಯನ್ನು ಹೊಂದಿದ ಕೃತಿಗಳೆ ರೂಢಿಗಳು. ನಮ್ಮ ನಿತ್ಯ ಜೀವನದ ಮುಕ್ಕಾಲುಪಾಲು ಕೃತಿಗಳು ರೂಢಿಗಳಾಗಿಯೆ ಪರಿಣಮಿಸಿರುವವು. ಅನುಕರಣವು ಸ್ವತಂತ್ರ ವಿಚಾರ ಹಾಗೂ ಕೃತಿಗಳಿಗೆ ಆತಂಕವಾಗಬಾರದು. ಯಾವುದೇ ಸ್ವತಂತ್ರ ಕೃತಿಯಾದರೂ ಅನುಕರಣದಿಂದಲೇ ಮೊದಲಾಗುವದು. ವ್ಯಕ್ತಿಯು ತನ್ನ ಪ್ರತಿಭೆಯಿಂದ ಅದನ್ನು ಉನ್ನತಗೊಳಿಸುವನು. ಆದರೆ, ತಿಳಿಗೆಟ್ಟ ಅನುಕರಣವಾಗಲಿ, ಇಲ್ಲವೆ ಅನುಕರಣದ ಅತಿರೇಕವಾಗಲಿ, ವ್ಯಕ್ತಿವಿಕಾಸಕ್ಕೆ ವಿಘಾತುಕವೆಂದು ಮಾತ್ರ ಹೇಳಬಹುದು.

## ಅಭ್ಯಸನಗಳು

೧. ಮನಸ್ಸಿನ ಸ್ವರೂಪವೇನು ? ಅದು ಹೇಗೆ ಗೋಚರವಾಗುವದು ?

೨. ಸಚೇತನ ಕ್ರಿಯೆಗೂ ಯಾಂತ್ರಿಕ ಕ್ರಿಯೆಗೂ ಇರುವ ವ್ಯತ್ಯಾಸಗಳೇನು ?

೩. ಸಚೇತನ ಪ್ರಾಣಿಯ ಮುಖ್ಯ ಲಕ್ಷಣಗಳೇನು ?

೪. ಮಗು ಸಚೇತನ ಮೂರ್ತಿಯಾಗಿರುವದರಿಂದ, ಆತನ ಶಿಕ್ಷಣದಲ್ಲಿ ಯಾವ ಅಂಶಗಳಿಗೆ ನಾವು ಗಮನವನ್ನು ಕೊಡಬೇಕಾಗುವದು ?

೫. ಸಂಸಕ್ತಿ, ಅನುಕರಣ, ಅನುಮಾನ—ಇವುಗಳ ಬಗ್ಗೆ ಟಿಪ್ಪಣಿ ಬರೆಯಿರಿ.

# ೨. ಕೆಲವು ಮಾನಸಿಕ ಶಕ್ತಿಗಳು

(ಅ) ಮಾನಸಿಕ ಶಕ್ತಿಗಳು :— ಮಗು ಚೈತನ್ಯ ಸ್ವರೂಪ. ಚೈತನ್ಯದ ಕ್ರಿಯೆಗೂ ಯಾಂತ್ರಿಕ ಕ್ರಿಯೆಗೂ ಮಹದಂತರವಿದೆ. ತನ್ನ ಪ್ರತಿಯೊಂದು ಕ್ರಿಯೆಯಲ್ಲಿಯೂ ಸಮಗ್ರ ಚೈತನ್ಯವು ಸಹಕರಿಸುತ್ತಿದೆ. ಮನಸ್ಸು ಚೈತನ್ಯದ ಹಿರಿದಾದ ಶಕ್ತಿ. ಇಂದ್ರಿಯಗಳು ಮನಸ್ಸಿನ ಬಾಗಿಲುಗಳು– ಸಾಧನಗಳು. ಮನಸ್ಸಿನ ಕ್ರಿಯೆಯು ಬಹುಮುಖವಾಗಿ ನಡೆಯುವದು. ಅವುಗಳಲ್ಲಿ ಸಂಸಕ್ತಿ, ಅನುಮಾನ ಮುಂತಾದ ಸಾಮಾನ್ಯ ಮನೋವ್ಯಾಪಾರಗಳ ಬಗ್ಗೆ ಇಲ್ಲಿ ತಿಳಿದು ಕೊಳ್ಳಬಹುದು.

(೧) ಪ್ರತ್ಯಕ್ಷ ಜ್ಞಾನ:—ವಸ್ತು ಹಾಗು ಇಂದ್ರಿಯಗಳ ಸನ್ನಿಕರ್ಷ–ಸಂಬಧಗಳಿಂದುಂಟಾಗುವ ಜ್ಞಾನವು ಪ್ರತ್ಯಕ್ಷ ಜ್ಞಾನವು. ಆದೇ ಜನಿಸಿದ ಮಗುವಿಗೆ ಜಗತ್ತಿನಲ್ಲಿ ಎಲ್ಲವೂ ಹೊಸದು; ಗೊಂದಲಮಯವಾದುದು. ಕೂತೂಹಲ ಪ್ರವೃತ್ತಿಯನ್ನು ಮಗು ಹುಟ್ಟಿನಿಂದಲೇ ಪಡೆದು ಕೊಂಡು ಬಂದಿರುವದು. ಇದೇ ಕುತೂಹಲವು ‘ ಜಗತ್ತಿನ ಬೌದ್ಧಿಕ ದಿಗ್ವಿಜಯ ’ ಕ್ಕಾಗಿ ಮಗುವನ್ನು ಪ್ರಚೋದಿಸುವದು. ಇಂದ್ರಿಯಗಳೆ ಆತನಿಗೆ ಸಾಧನಗಳು. ಪ್ರಯೋಗದಿಂದ ಮಗು ತನ್ನ ಎಲ್ಲ ಇಂದ್ರಿಯಗಳನ್ನು ಅಳವಡಿಸಿಕೊಳ್ಳುವದು. ಜೀವನದ ಹೋರಾಟಕ್ಕಾಗಿ ತನ್ನನ್ನು ಅಣಿಗೊಳಿಸುವದು. ಹೀಗೆ ಮಾಡುವದರಲ್ಲಿಯೆ ತನ್ನ ಮೈ–ಮನಗಳ ವಿಕಾಸವನ್ನೂ ಜೊತೆಜೊತೆಯಾಗಿ ಸಾಧಿಸುವದು. ಕಣ್ಣಿನಿಂದ ನೋಡಿ, ಕಿವಿಯಿಂದ ಕೇಳಿ, ಕೈಯಿಂದ ಮುಟ್ಟಿ–ಹೀಗೆ ಸಕಲ ಇಂದ್ರಿಯಗಳನ್ನೂ ಪ್ರಯೋಗಿಸಿ ಮಗು ವಿವಿಧ ವಸ್ತುಗಳ ಪರಿಚಯವನ್ನು ಮಾಡಿಕೊಳ್ಳುವದು. ಮಗುವಿನ ಮೊದಲು ಜ್ಞಾನವೆಲ್ಲವೂ ಪ್ರತ್ಯಕ್ಷಜ್ಞಾನವೆ. ಇಂದ್ರಿಯಜನ್ಯವಾದ ಅನುಭವಗಳನ್ನು ಒಂದು ವಸ್ತುವಿನ ಸ್ವರೂಪ ನಿರ್ಣಯದಲ್ಲಿ ಹೊಂದಿಸಿಕೊಳ್ಳುವದು– ಸಂಯೋಜನೆ. ಬೇರೆ ವಸ್ತುಗಳಿಂದ ಅವುಗಳನ್ನು ಬೇರ್ಪಡಿಸುವದು ವಿಭಜನೆ. ಸಂಯೋಜನೆ ಹಾಗೂ ವಿಭಜನೆ–ಇವೆರಡೂ ಪ್ರತ್ಯಕ್ಷ ಜ್ಞಾನದಲ್ಲಿ ಒಂದೇ ಮನೋವ್ಯಾಪಾರದ ಎರಡು ಮುಖಗಳು.

ಪ್ರತ್ಯಕ್ಷ ಜ್ಞಾನದಲ್ಲಿ ವಸ್ತು ಹಾಗೂ ಅದರ ಬೋಧನೆಗೆ ಅನುಗುಣವಾದ ಇಂದ್ರಿಯ— ಇವುಗಳಲ್ಲಿ ಸಾಮೀಪ್ಯ ಹಾಗೂ ಸಂಪರ್ಕಗಳು ಅಗತ್ಯವಾಗಿವೆ. ನೋಡುವ ವಸ್ತು ಕಣ್ಣಿನ ಅಳವಿನಲ್ಲಿರಬೇಕು ಹಾಗೂ ಕಣ್ಣಿಗೂ ಆ ವಸ್ತುವಿಗೂ ಸಂಪರ್ಕ ಉಂಟಾಗಬೇಕು. ಇದೇ ರೀತಿಯಾಗಿ ಉಳಿದ ಇಂದ್ರಿಯಗಳಿಗೂ ಅವುಗಳ ವಸ್ತುಗಳಿಗೂ ಪರಸ್ಪರ

ಸಂಪರ್ಕ ಹಾಗೂ ಸಂಬಂಧಗಳು ಅಗತ್ಯವಾಗಿವೆ. ಇವುಗಳ ಜೊತೆಗೆ ಮನಸ್ಸಿನ ಸಹಕಾರವೂ ಬೇಕು. ಮನಸ್ಸು ವ್ಯಗ್ರವಾಗಿದ್ದರೆ, ಬೇರೆ ಸಂಗತಿಯ ಕಡೆಗೆ ಬಲವಾಗಿ ಸೆಳೆಯಲ್ಪಟ್ಟಿದ್ದರೆ, ಎದುರಿಗಿನ ವಸ್ತು ಕಾಣುವದಿಲ್ಲ, ಸಮೀಪದ ಶಬ್ದ ಕೇಳಬರುವದಿಲ್ಲ. ಪ್ರತ್ಯಕ್ಷಜ್ಞಾನದಲ್ಲಿ ಮನಸ್ಸು ಹಾಗೂ ಇಂದ್ರಿಯಗಳ ಪರಸ್ಪರ ಅವಲಂಬನವಿರುವದು.

ಇಂದ್ರಿಯಗಳ ಮುಖಾಂತರ ಸುತ್ತಲಿನ ಪ್ರಪಂಚದೊಡನೆ ಬರುವ ಸಂಪರ್ಕದಿಂದ ಒದಗುವ ಅನುಭವವೆ ನಮ್ಮ ಜ್ಞಾನದ ಮೂಲಧನ. ಆದರೆ ಈ ಸಂಪರ್ಕವು ನೇರವಾಗಿಲ್ಲ, ಸರಳವೂ ಆಗಿಲ್ಲ. ಈ ಸಂಪರ್ಕದಲ್ಲಿ ಎರಡು ಅಂಶಗಳಿವೆ—ಸಂವೇದನೆ ಹಾಗೂ ಪ್ರತ್ಯಕ್ಷಾನುಭವ. ಸಂಪರ್ಕದ ಗಳಿಗೆಯಲ್ಲಿ ನಮಗೆ ಆಗುವ ನೈಜವಾದ ಅನುಭವವೆ ಸಂವೇದನೆ. ತಾತ್ಕಾಲಿಕವಾದ ಆ ಅನುಭವವನ್ನು ಹಿಂದಿನ ಅನುಭವದ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳುವದೆ–ಪ್ರತ್ಯಕ್ಷಾನುಭವ. ಬೇರೆಬೇರೆ ಇಂದ್ರಿಯಗಳಿಂದ ಒದಗಿದ ಅನುಭವಗಳನ್ನು ನಾವು ಚಲ್ಲಿ ಕೊಟ್ಟಿರುವದಿಲ್ಲ, ಮರೆತುಬಿಡುವದಿಲ್ಲ, ಇವೆಲ್ಲ ಅನುಭವಗಳು ಕೂಡಿಕೊಂಡು ಇಂದಿನ ಅನುಭವದ ಅರ್ಥವನ್ನು ಗೊತ್ತುಪಡಿಸುವವು. ಸಂವೇದನೆಯು ಗಳಿಗೆಗಳಿಗೆಗೂ ಜಗತ್ತು ನಮಗೆ ಹೊಸಹೊಸದಾಗಿ ತೋರುವದು. ಇಂದ್ರಿಯಗಳಲ್ಲಿ, ಮಿದುಳಿನಲ್ಲಿ ಆಗುವ ಒಂದು ಚಿಕ್ಕ ವ್ಯತ್ಯಾಸವೂ ಜಗತ್ತನ್ನು ಬದಲಿಸಿ ಬಿಡುವದು. ಬಣ್ಣ ಗುರುಡರು ಜಗತ್ತಿನಲ್ಲಿ ಚೆಲುವನ್ನೆ ಕಾಣರು. ಹುಟ್ಟು ಕಿವುಡರು ನಾದ ಮಾಧುರ್ಯವಿಲ್ಲದ ಜಗತ್ತಿನಲ್ಲಿ ವಾಸಿಸುವರು. ಇಂದ್ರಿಯಗಳ ಶಕ್ತಿ ವ್ಯತ್ಯಾಸದಿಂದ ವ್ಯಕ್ತಿವ್ಯಕ್ತಿಗೂ ಜಗತ್ತು ಬೇರೆಯಾಗಿರುವದು. ಅದೇ ವಸ್ತು, ಅದೇ ಸಂವೇದನೆ; ಆದರೆ ಅವರವರು ತಮ್ಮ ತಮ್ಮ ಇಂದ್ರಿಯಗಳಿಗನುಗುಣವಾಗಿ ಅದರ ಅರ್ಥಮಾಡಿಕೊಳ್ಳುವರು.

ವಿವಿಧ ಇಂದ್ರಿಯಗಳು ತಂದು ಕೊಡುವ ಸಂವೇದನೆಗಳನ್ನು ನಾವು ಒಂದುಗೂಡಿಸುವೆವು. ಅನುಭವದಿಂದ ಪರಿಚಿತವಾದ ಯಾವುದೇ ವಸ್ತುವನ್ನು ಉದಾಹರಣೆಗಾಗಿ ತೆಗೆದು ಕೊಳ್ಳಬಹುದು. ಬೇರೆ ಬೇರೆ ಇಂದ್ರಿಯಗಳಿಂದ ಪಡೆದ ಅನುಭವಗಳ ನೆನಪು ಅದರಲ್ಲಿ ಹೆಣೆದು ಕೊಂಡಿರುವದು. ಗುಲಾಬಿ ಹುವಿನ ಬಣ್ಣ ನೋಡಿದಾಗ್ಗೆ ಅದರ ವಾಸನೆ ಪಕಳೆಗಳ ಮಾರ್ದವ, ಬೆರಳಿಗೆ ಮುಳ್ಳು ಚುಚ್ಚಿದ ನೋವು—ಇವೆಲ್ಲ ಅನುಭವಗಳ ನೆನಪುಗಳು ಜೊತೆಜೊತೆಯಾಗಿಯೇ ಬರುವವು. ಪ್ರತ್ಯಕ್ಷಾನುಭವದಲ್ಲಿ ಇದೂ ಒಂದು ವಿಶೇಷ ಸಂಗತಿಯಾಗಿದೆ. ಪ್ರತ್ಯಕ್ಷಾನುಭವದ ಪ್ರಯೋಜನವು ಶಿಕ್ಷಣದಲ್ಲಿ ಹೆಚ್ಚಿಗಿರುವದು. ಅದು ವಸ್ತು-ನಿಷ್ಠ ಮಾನಸಿಕ ಕ್ರಿಯೆ. ಶಿಕ್ಷಣವು ವಸ್ತುನಿಷ್ಠವಾಗಬೇಕೆಂಬುವದು ಆಧುನಿಕ ಶಿಕ್ಷಣದ ತತ್ವಗಳಲ್ಲಿ ಒಂದಾಗಿದೆ. ಸಾವಿರ ಶಬ್ದಗಳಿಂದಾಗದ ಪರಿಣಾಮವು ಪ್ರತ್ಯಕ್ಷ ವಸ್ತು ದರುಶನದಿಂದ ಮಕ್ಕಳ ಮನಸ್ಸಿನ ಮೇಲಾಗುವದು. ತಮ್ಮ ಸುತ್ತಲಿನ ವಸ್ತುಗಳನ್ನು ಮಕ್ಕಳು ಪ್ರತ್ಯಕ್ಷವಾಗಿ ಕಾಣಬೇಕು, ಕೇಳಬೇಕು, ಕೈಯಿಂದ ಮುಟ್ಟಿ ನೋಡಬೇಕು. ಫ್ರೋಬೆಲ್‌ನ ಕಾಣಿಕೆಗಳು ಇದೇ ಉದ್ದೇಶದಿಂದ ಪ್ರೇರಿತವಾದವುಗಳು. ಮಾಂಟೆಸೋರಿಯವರ ಇಂದ್ರಿಯ ಸಂಸ್ಕರಣಗಳ ಸಾಧನಗಳೂ ಇದೇ ಉದ್ದೇಶಕ್ಕಾಗಿ ರಚಿತವಾದವುಗಳು. ವಸ್ತುಗಳ ವರ್ಣ ಭೇದ, ರೂಪು–ಗಾತ್ರ–ಎತ್ತರಗಳಲ್ಲಿಯ ವ್ಯತ್ಯಾಸಗಳನ್ನು ಮಗು ಆಟಿಗೆಗಳಂತಿರುವ ಆ ವಸ್ತುಗಳ ಪ್ರತ್ಯಕ್ಷಾನುಭವದಿಂದಲೆ ತಿಳಿದುಕೊಳ್ಳುವದು,

ಪ್ರತ್ಯಕ್ಷಾನುಭವದ ಮುಂದಿನ ಹೆಜ್ಜೆ—ಸಂಕಲಿತ ಪ್ರತ್ಯಕ್ಷಾನುಭವ. ಇದು ಬೋಧವೆಂತಲೂ ಇದಕ್ಕೆ ಹೇಳುವರು. ಇದು ಹರ್ಬಾಟನು ಕಂಡು ಹಿಡಿದ ಮನೋವ್ಯಾಪಾರ. (apperception) ಹೊರಗಿನ ವಸ್ತುಗಳ ಸಂಪರ್ಕ—ಸಂಬಂಧಗಳಿಂದ ಮನಸ್ಸಿಗೆ ಇಂದ್ರಿಯ ಸಂಸ್ಕಾರಗಳು ದೊರಕುವವು. ಪ್ರಜ್ಞೆಯ ಮೂಲ ವಸ್ತುಗಳಿವು. ಹರ್ಬಾಟನು ಇವುಗಳಿಗೆ 'ಕಲ್ಪನೆ'ಗಳೆಂದು ಹೇಳುವನು. ಸದೃಶವಾದ ಕಲ್ಪನೆಗಳನ್ನು ಒಂದುಗೂಡಿಸುವದು, ವಿಲಕ್ಷಣವಾದವುಗಳನ್ನು ವ್ಯತ್ಯಾಸಗೊಳಿಸುವದು, ವಿರುದ್ಧವಾದವುಗಳನ್ನು ನಿರಾಕರಿಸುವದು—ಮನಸ್ಸಿನ ವ್ಯಾಪಾರವಾಗಿದೆ. ಈ ರೀತಿಯಾಗಿ 'ಇರುವ' ಕಲ್ಪನೆಗಳೊಡನೆ 'ಬರುವ' ಕಲ್ಪನೆಗಳು ಕೂಡಿಕೊಳ್ಳುವದಕ್ಕೆ 'ಕಲ್ಪನೆಗಳ ಸಂಕಲನ'ವೆಂದು ಹೇಳುವರು. ಏಕರೂಪವಾಗಿ ಕೂಡಿಕೊಂಡ ಕಲ್ಪನೆಗಳ ಸಂಕಲನದ ಶಕ್ತಿಯು ಅಧಿಕವಾಗುವದು. ನಮಗೆ ಕೇವಲ ಗೆರೆಗಳೆಂದು ತೋರುವದು ಚಿತ್ರಕಾರನಿಗೆ ಕಲಾಕೃತಿಯಾಗುವದು. ನಿರರ್ಥಕ ಕೈಕಾಲುಗಳು ಚಲ್ಲಾಟವೆನ್ನುವದು ನರ್ತಕನಿಗೆ ಭಾವಪೂರ್ಣವಾಗಿರುವದು. ಕೇವಲ ಇಂಪಾದ ಸ್ವರವೆನ್ನುವದು ಸಂಗೀತಜ್ಞನಿಗೆ ತಾಳಮೇಳಗಳ ಸಮ್ಮೇಳನವಾಗಿ ತೋರುವದು. ಇದೆಲ್ಲವೂ ಸಂಕಲನದ ಕಾರ್ಯ. ಸದೃಶವಾದ ಬೇರೆ ಕಲ್ಪನೆಗಳನ್ನು ಅದು ಆಕರ್ಷಿಸುವದು. ಹೊಸ ಕಲ್ಪನೆಗಳನ್ನು ಮನಸ್ಸಿನಲ್ಲಿ ಬರಮಾಡಿಕೊಳ್ಳುವದು ಇಲ್ಲವೆ ಬಿಟ್ಟುಕೊಡುವದು ಈ ಸಂಕಲನದ ಸ್ವರೂಪವನ್ನೇ ಅವಲಂಬಿಸಿದೆ. ಶಿಕ್ಷಣವು ಈ ಬಗೆಯ ಕಲ್ಪನೆಗಳ ಸಂಕಲನ ಮುಖಾಂತರವೆ ಸಾಗುತ್ತಿದೆ. ಕಲಿಸುವ ವಿಷಯಕ್ಕೆ ಸದೃಶವಾದ ಕಲ್ಪನೆಗಳನ್ನು ಮಗುವಿನ ಮನಸ್ಸಿನಲ್ಲಿ ಮೊದಲು ಜಾಗೃತಗೊಳಿಸಿದರೆ ಶಿಕ್ಷಣದ ಕಾರ್ಯವು ಸುಗಮವಾಗುವದು, ಸಫಲವಾಗುವದು. 'ಗೊತ್ತಿದ್ದುದರೊಡನೆ ಗೊತ್ತಿಲ್ಲದ್ದನ್ನು' ಇದರಿಂದ ಸಮರಸವಾಗುವಂತೆ ಬೆರೆಸಲು ಬರುವದು; ಎರಡನ್ನೂ 'ಕಲಮು' ಮಾಡಿದಂತಾಗುವದು. ಶಿಕ್ಷಣ ಕ್ರಮದಲ್ಲಿ ಹರ್ಬಾರ್ಟನು ಯೋಚಿಸಿರುವ 'ಪಂಚಪದಿ' ಗೆ ಇದೇ ತತ್ವವೆ ಆಧಾರವಾಗಿದೆ.

ಆಸ್ಥೆ-ಅವಧಾನ:—ಶಿಕ್ಷಣದ ವಿವೇಚನೆಯಲ್ಲಿ ಇವೆರಡು ಮಾನಸಿಕ ಕ್ರಿಯೆಗಳನ್ನು ನಾವು ಮರೆಯುವಂತಿಲ್ಲ. ಪರಂಪರೆಯ ಶಿಕ್ಷಣದಲ್ಲಿ ಆಸ್ಥೆಯ ಪ್ರಶ್ನೆಯೆ ಇರಲಿಲ್ಲ. ತಮಗೆ ಬೇಕಾದ ವಿಷಯಗಳನ್ನು ಮಗುವಿಗೆ ಒತ್ತಾಯದಿಂದ ಕಲಿಸುವದೆ ಅಂದಿನ ರೀತಿಯಾಗಿತ್ತು. ಇಂದಿನ ಶಿಕ್ಷಣವು ಈ ದೃಷ್ಟಿಯನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿದೆ. ಕಲಿಯುವದರಲ್ಲಿ ಆಸ್ಥೆ—ಆನಂದಗಳಿರಬೇಕು. ಕಲಿಯುವದು ಕ್ರೀಡೆಯಂತೆ ಸ್ವಯಂಪ್ರೇರಣೆಯ, ಸಂತೋಷಪ್ರದವಾದ ಅನುಭವವಾಗಬೇಕು. ಆಸ್ಥೆಯಿದ್ದರೆ ಮಾತ್ರ ಇದು ಸಾಧ್ಯ. ಈ ಆಸ್ಥೆಯ ಉಗಮವನ್ನು ಅನೇಕ ಬಗೆಯಾಗಿ ನಾವು ಕಾಣಬಹುದು. ಸಹಜಪ್ರವೃತ್ತಿಗಳ ಪ್ರಭಾವವನ್ನು ಎಷ್ಟೇ ಒಪ್ಪಿದರೂ, ಮಕ್ಕಳ ಇಡೀ ಜೀವನವನ್ನೇ ಅವುಗಳಿಗೆ ಬಿಟ್ಟುಕೊಡುವಂತಿಲ್ಲ. ಮುಂದಿನ ಹಿತದ ದೃಷ್ಟಿಯಿಂದ ಸದ್ಯಕ್ಕೆ ನೀರಸವೆಂದು ತೋರುವ ಎಷ್ಟೋ ವಿಷಯಗಳಲ್ಲಿಯೂ ಅವರು ಆಸ್ಥೆವಹಿಸಬೇಕಾಗುವದು.

ಹೊರಗಿನ ವಿಷಯಗಳಿಗೆ ಸಂಬಂಧಿಸಿದುದು ಒಂದು ಬಗೆಯ ಆಸ್ಥೆ; ಆತ್ಮಿಕವಾದುದು ಇನ್ನೊಂದು ವಿಧ. ನೂತನ ಪ್ರವೃತ್ತಿಗಳು ವಯೋಮಾನಗಳಿಗೆ ಅನುಗುಣವಾಗಿ

ಪ್ರಕಟವಾದಂತೆ, ಆಸ್ಥೆಯು ವಿಷಯಾಸಕ್ತಿ ಬಹಳಿಸುವವು. ಕಲಿಯುವ ಕಾರ್ಯದಲ್ಲಿ ಆಸ್ಥೆಯನ್ನು ಹುಟ್ಟಿಸುವದು ಅಗತ್ಯವಾಗಿದೆ. ಇದಕ್ಕಾಗಿ ಶಕ್ಯವಿರುವಷ್ಟು ಸಹಜ ಪ್ರವೃತ್ತಿಗಳ ಸಹಕಾರವನ್ನು ಶಿಕ್ಷಕನು ದೊರಕಿಸಬೇಕು. ಆಸ್ಥೆಗೂ ಶರೀರ ಸ್ವಾಸ್ಥ್ಯಕ್ಕೂ ಸಂಬಂಧವಿರುವದು. ಹೊಟ್ಟೆಗೆ ಸಾಕಷ್ಟು ಆಹಾರವು ಕೂಡ ದೊರೆಯದ ಮಗು ಯಾವ ವಿಷಯದಲ್ಲಿಯೂ ಆಸ್ಥೆ ವಹಿಸಲಾರನು. ಶಿಕ್ಷಕನಿಗೇ ಸಂಬಂಧಿಸಿದ ಕೆಲವು ಸಂಗತಿಗಳಿರುವವು. ಉಳಿದೆಲ್ಲ ಸಂಗತಿಗಳು ಸಮರ್ಪಕವಾಗಿರಬಹುದು. ಆದರೆ ಶಿಕ್ಷಕನು ಕಲಿಸುವ ರೀತಿಯು ಸರಿಯಾಗಿರದಿದ್ದರೆ ಆಸ್ಥೆಯು ಎಂದೂ ಬಾರದು. ಮಕ್ಕಳಲ್ಲಿ ಪ್ರೇಮವಿಲ್ಲದ, ಶಿಕ್ಷಣಕಾರ್ಯದಲ್ಲಿ ಆಸ್ಥೆ ಆದರಗಳಿಲ್ಲದ ಶಿಕ್ಷಕನು ಮಕ್ಕಳ ಮನಸ್ಸನ್ನು ವಶಪಡಿಸಿಕೊಳ್ಳಲಾರನು. ಆಸ್ಥೆಯಿಂದಲೆ ಆಸ್ಥೆ ಹುಟ್ಟುವದು. ತನ್ನ ಕಾರ್ಯದಲ್ಲಿ ಆಸ್ಥೆ ವಹಿಸದ ಶಿಕ್ಷಕನು ಮಕ್ಕಳ ಮನಸ್ಸಿನಲ್ಲಿ ಆಸ್ಥೆ ಹುಟ್ಟಿಸಲಾರನು.

ಆಸ್ಥೆಗೆ ಬಂಧುವಿನಂತಿರುವದು ಅವಧಾನವು. ಆಸ್ಥೆ ಅವಧಾನಗಳೆರಡೂ ಅವಳಿಜವಳಿಗಳಿದ್ದಂತೆ. ಆಸ್ಥೆಯಿರುವಲ್ಲಿ ಅವಧಾನವು ತಾನಾಗಿಯೆ ಹುಟ್ಟುವದೆಂದು ಹೇಳಬಹುದು. ಆದರೆ ಅವಧಾನವಿದ್ದಲ್ಲೆಲ್ಲ ಆಸ್ಥೆಯಿದ್ದೇ ತೀರುವದೆಂದು ಹೇಳಿದರೆ ತಪ್ಪಾಗುವದು. ಆಸ್ಥೆ ಹರಿದಾಡುವ ಹವೆಯಂತೆ, ಅವಧಾನ ಗಾಳಿಯಂತೆ. ಕಾರ್ಯಾಸಕ್ತವಾದ ಆಸ್ಥೆಯೆ ಅವಧಾನ. ಅವಧಾನವೆಂದರೆ ಲಕ್ಷ್ಯಗೊಡುವದು; ಮನಸ್ಸಿನ ಏಕಾಗ್ರತೆ; ಇಷ್ಟವಾದ ವಸ್ತುವಿನಲ್ಲಿ ಇಲ್ಲವೆ ಸಂಗತಿಯಲ್ಲಿ ಮನಸ್ಸನ್ನು ಹಿಡಿದು ನಿಲ್ಲಿಸುವದು. ಈ ಬಗೆಯ ಅವಧಾನಕ್ಕೆ 'ಐಚ್ಛಿಕ' ಅವಧಾನವೆನ್ನುವರು. ಈ ಅವಧಾನವು ಪ್ರಯತ್ನಸಾಧ್ಯವಾದುದು. ಇದಕ್ಕೆ ತಿಳುವಳಿಕೆ–ಪರಿಶ್ರಮಗಳು ಬೇಕು ಐಚ್ಛಿಕ ಅವಧಾನದ ಉನ್ನತಸ್ವರೂಪವೆ ಇಚ್ಛಾಶಕ್ತಿಯಾಗಿದೆ.

ಇನ್ನೊಂದು ವಿಧವಾದ ಅವಧಾನವು 'ಅನೈಚ್ಛಿಕ'ವಾದುದು. ಬುದ್ಧಿ-ಪೂರ್ವಕವಾದ, ಹಾಗೂ ತನ್ನಿಂದ ತಾನೇ ಜನಿಸುವ ಈ ಬಗೆಯ ಅವಧಾನವು ಸ್ವಯಂಪ್ರೇರಿತವಾದುದು. ಸಹಜ ಪ್ರವೃತ್ತಿಗಳೊಡನೆ ನಿಕಟವಾದ ಸಂಬಂಧವಿರುವ ಈ ಬಗೆಯ ಅವಧಾನವು ಅತ್ಯಂತ ಸ್ವಾಭಾವಿಕವಾದುದು. ಯಾಂತ್ರಿಕವಾಗಿ ತೋರಿದರೂ, ಐಚ್ಛಿಕ ಅವಧಾನಕ್ಕಿಂತ ಹೆಚ್ಚು ಪ್ರಭಾವಯುತವಾದುದು. ಈ ಬಗೆಯ ಅವಧಾನಕ್ಕೆ ನೋವು-ನಲಿವುಗಳ ಭಾವಶಕ್ತಿಯು ಕೂಡಿಕೊಂಡಿರುವದು. ಅಂತೆಯೆ ಇದು ಅನಿವಾರ್ಯವಾಗುವದು. ಪಶುಪಕ್ಷಿಗಳ ಹಾಗೂ ಶೈಶವದಲ್ಲಿ ಚಿಕ್ಕಮಕ್ಕಳು ತೋರುವ ಅವಧಾನವು ಇದೇ ಮಾದರಿಯದು.

ಚಿಕ್ಕ ಮಕ್ಕಳ ಅವಧಾನವನ್ನು ಬಲಿಸುವದೂ, ಬೆಳೆಸುವದೂ ಶಿಕ್ಷಕನ ಕರ್ತವ್ಯಗಳಲ್ಲಿ ಒಂದಾಗಿದೆ. ಇದಕ್ಕಾಗಿ ಶಿಕ್ಷಕನು ಅನೇಕ ಹಂಚಿಕೆಗಳನ್ನು ಮಾಡಬೇಕಾಗುವದು. ಸರಿಯಾದ ಸನ್ನಿವೇಶವನ್ನು ತಂದುಕೊಡಬೇಕು. ತನ್ನ ಕಾರ್ಯದಲ್ಲಿ ಆಸ್ಥೆ–ಆತ್ಮವಿಶ್ವಾಸಗಳನ್ನು ವಹಿಸಬೇಕು. ಆತನ ನಡೆಯಲ್ಲಿ, ನುಡಿಯಲ್ಲಿ ಉಲ್ಲಾಸ ತುಂಬಿರಬೇಕು. ಕಲಿಸುವ ವಿಷಯದಲ್ಲಿ, ವಿಧಾನದಲ್ಲಿ, ವಿವರಣೆಯಲ್ಲಿ ಮಕ್ಕಳಿಗೆ ಸಂತೋಷವನಿಸಬೇಕು. ಕಲಿಯುವದು ಒಂದು ಅನುಭವ ಪರಂಪರೆ. ಆನಂದಮಯವಾದ ಅನುಭವಗಳ ಕಡೆಗೆ ಮಕ್ಕಳ ಮನಸ್ಸು ತಾನಾಗಿ ಹರಿಯುವದು. ವಿಷಯ ಹಾಗೂ ವಿಧಾನಗಳು ಅವರ ಒಲವು–ಶಕ್ತಿ

ಗಳಿಗೆ ಅನುರೂಪವಾಗಿರಬೇಕು. ಕಲಿಸುವ ವಿಷಯವನ್ನು ಮಕ್ಕಳ ನಿತ್ಯ ಜೀವನಕ್ಕೆ ಹೊಂದಿಕೆಯಾಗುವಂತೆ–ಜೀವನ ಸ್ವೀಕಾರ್ಯವಾಗುವಂತೆ–ಎಲ್ಲ ಬಗೆಯಿಂದಲೂ ಯತ್ನಿಸಬೇಕು. ಆಸ್ಥೆ–ಅವಧಾನಗಳನ್ನು ಸಂಪಾದಿಸಲು ಕಲಿಯುವದರಲ್ಲಿ ಚಿಕ್ಕ ಮಕ್ಕಳ ಸಹಕಾರವು ಇನ್ನೊಂದು ಮಹತ್ವದ ಸಾಧನವಾಗಿದೆ. ಈ ಬಗೆಯ ಸಹಕಾರವಿರುವ ಶಿಕ್ಷಣವು ಚಿಕ್ಕ ಮಕ್ಕಳ ಸುಪ್ತ-ಶಕ್ತಿಗಳನ್ನೆಲ್ಲ ಚೇತರಿಸುವದು. ತಾವು ಬೆಳೆಸಿದ ಗಿಡದ ಹಣ್ಣನ್ನು ತಾನೇ ತಿಂದರೆ ಆಗುವ ಸಂತೋಷವು ಮಗುವಿಗೆ ತನ್ನ ಸಹಕಾರದ ಫಲವಾಗಿ ದೊರೆತ ಜ್ಞಾನದಿಂದ ಆಗುವದು. ಹೆಚ್ಚುಹೆಚ್ಚಾಗಿ ತಿಳಿದುಕೊಳ್ಳುವ ಹಂಬಲ–ಹವ್ಯಾಸಗಳು ಅದರಲ್ಲಿ ಜನಿಸುವವು. ಹಿಂದೆ ತಾನು ಗಳಿಸಿದ ಜ್ಞಾನದ ಬಗ್ಗೆ ಅಭಿಮಾನವೂ, ಮುಂದೆ ಹೆಚ್ಚಿಗೆ ಗಳಿಸಬೇಕೆಂಬ ಆತುರತೆಯೂ ಮಗುವಿನ ಪ್ರಗತಿಗೆ ನಿಶ್ಚಿತವಾದ ಸಾಧನಗಳಾಗುವವು. ಕಲಿಯುವದರಲ್ಲಿ, ಕಲಿಸುವದರಲ್ಲಿ, ಆಸ್ಥೆ–ಅವಧಾನಗಳ ಅವಶ್ಯಕತೆಯು ಶಿಕ್ಷಕನಿಗೆ ಹೆಚ್ಚೆಹೆಚ್ಚಿಗೆ ಅನಿಸುವದು. ಇವು ಸ್ವಯಂಪ್ರೇರಿತವಾಗಿ ದೊರೆಯದಿದ್ದರೆ, ಅವುಗಳ ಪ್ರಾಪ್ತಿಗಾಗಿ ಶಿಕ್ಷಕನ ಮುಕ್ಕಾಲುಪಾಲು ಶಕ್ತಿ–ಉತ್ಸಾಹಗಳು ನಿರರ್ಥಕವಾಗಿ ವೆಚ್ಚವಾಗುವವು. ಅನೇಕ ಹಾದಿಗಳಿಂದ, ಹಂಚಿಕೆಗಳಿಂದ ತನ್ನ ಕಾರ್ಯದಲ್ಲಿ ಇವೆರಡೂ ಶಕ್ತಿಗಳ ಸಹಕಾರವು ದೊರೆಯುವಂತೆ ಶಿಕ್ಷಕನು ಯತ್ನಿಸಬೇಕು.

ಸ್ಮರಣ ಶಕ್ತಿ:— ಮನಸ್ಸು ತನ್ನ ಕಾರ್ಯದಿಂದಲೆ ಸಂಪಾದಿಸಿದ 'ಕಲ್ಪನೆ' (ಬಿಂಬ)ಗಳನ್ನು ತನ್ನಲ್ಲಿ ಉಲ್ಲೇಖಿಸಿಕೊಳ್ಳುವದು, ಉಳಿಸಿಕೊಳ್ಳುವದು, ಮತ್ತೆ ಉತ್ಪಾದಿಸುವದು— ಈ ಮೂರ್ಪರಿಯ ಕಾರ್ಯಕ್ಕೆ ಸ್ಮರಣ ಶಕ್ತಿ ಇಲ್ಲವೆ ಜ್ಞಾಪಕ ಶಕ್ತಿಯೆನ್ನುವರು. ಇದರಿಂದ ಸ್ಮರಣಕ್ರಿಯೆಯಲ್ಲಿ ಮೂರು ಸ್ಪಷ್ಟವಾದ ಮೆಟ್ಟಲುಗಳಿರುವವೆಂಬುದು ಕಂಡು ಬರುವದು: ( i ) ಗ್ರಹಣ:— ಒಂದು 'ಕಲ್ಪನೆ' ಇಲ್ಲವೆ ಅನುಭವವನ್ನು ಮನಸ್ಸು ಗ್ರಹಿಸುವದು; ತನ್ನಲ್ಲಿ ಅದನ್ನು ಮೂಡಿಸಿಕೊಳ್ಳುವದು. ( ii ) ಧಾರಣ:—ಹೀಗೆ ಗ್ರಹಿಸಿದ್ದನ್ನು ಕಾಯ್ದುಕೊಳ್ಳುವದು. ( iii ) ಸ್ಮರಣ:— ಮತ್ತೆ ಅದನ್ನು ಉತ್ಪಾದಿಸುವದು, ಸ್ಮರಣೆಗೆ ತಂದು ಕೊಳ್ಳುವದು. ಗ್ರಹಣ ಶಕ್ತಿ, ಧಾರಣ ಶಕ್ತಿ ಹಾಗೂ ಸ್ಮರಣ ಶಕ್ತಿ—ಇವು ಮೂರು ಒಂದೇ ಮನೋವ್ಯಾಪಾರದ ಅಂಗಗಳಾಗಿರುವವು. ಆದರೆ ವ್ಯಕ್ತಿ–ವ್ಯಕ್ತಿಯಲ್ಲಿ ಈ ಶಕ್ತಿಗಳ ಪರಿಮಿತಿಯು ಹೆಚ್ಚು ಕಡಿಮೆಯಾಗಿರುವದು ಕಂಡು ಬರುವದು. ಕೆಲವರಿಗೆ ಧಾರಣ ಶಕ್ತಿ ಹೆಚ್ಚು–ದೀರ್ಘಕಾಲ ಅವರು ಒಂದು ವಿಷಯವನ್ನು ನೆನಪಿನಲ್ಲಿ ಇಟ್ಟುಕೊಳ್ಳುವರು. ಕೆಲವರು ಅಂಕಿ ಸಂಖ್ಯೆಗಳನ್ನು, ಕೆಲವರು ಹೆಸರುಗಳನ್ನು, ಕೆಲವರು ವಿವರಗಳನ್ನು ಹೆಚ್ಚಾಗಿ ನೆನಪಿನಲ್ಲಿ ಇಡಬಲ್ಲರು. ನಮಗೆ ಆಸಕ್ತಿಯುಳ್ಳ ಸಂಗತಿಯು ಮನಸ್ಸಿನಲ್ಲಿ ಹೆಚ್ಚು ಆಳವಾಗಿ ಮುದ್ರಿತವಾಗುತ್ತದೆ. 'ಮೂರು ವರುಷದ ಬುದ್ಧಿ ನೂರು ವರುಷದ ವರೆಗೆ' ಎಂಬ ಮಾತು, ಆ ವಯೋಮಾನದಲ್ಲಿ ಮಕ್ಕಳ ಧಾರಣಾಶಕ್ತಿಯು ಹೆಚ್ಚು ಸಮರ್ಥವಾಗಿರುವದನ್ನು ಸೂಚಿಸುವದು. ನಮ್ಮ ಭಾವನೆಗಳನ್ನು ಬಲವಾಗಿ ಕದಡಿದ ಸಂಗತಿಗಳು ಮನದಲ್ಲಿ ಸ್ಥಿರವಾಗಿ ಉಳಿಯುವವು. ನಮಗೆ ಹಿತಕರವಾದ ಅಗತ್ಯವಾದ ಸಂಗತಿಯನ್ನು ಮನಸ್ಸು ಚನ್ನಾಗಿ ಗ್ರಹಿಸುವದು, ಸ್ಮೃತಿಪಟಲದಲ್ಲಿಯೂ ಅದು ಸ್ಥಿರವಾಗಿ ಉಳಿಯುವದು. ಮನಸ್ಸು ಗ್ರಹಿಸಿ ತನ್ನಲ್ಲಿಟ್ಟುಕೊಳ್ಳುವ ಮುದ್ರಿಕೆಗಳು ಅದು

ಬಿಡಿಯಾಗಿ ಉಳಿಯುವದಿಲ್ಲ. ಒಂದು ಅನುಭವಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳು ಒಂದಕ್ಕೊಂದು ಸರಪಣಿಯ ಕಡಿಗಳಂತೆ ಕೀಲಿಸಿಕೊಂಡಿರುವವು. 'ಕೈಯಾನೆಳೆದರೆ ಮೈಯ್ಯತಾನೆ ಬಪ್ಪಂತೆ'—ಅವುಗಳಲ್ಲಿ ಒಂದನ್ನು ಜ್ಞಾಪಕಕ್ಕೆ ತಂದುಕೊಟ್ಟಾಗ್ಗೆ ಉಳಿದವುಗಳೂ ಸ್ಮರಣೆಗೆ ಬರುವವು. ನೆನಪಿನಲ್ಲಿರದಿದ್ದರೂ, ವಸ್ತು-ವ್ಯಕ್ತಿಗಳನ್ನು ಪ್ರತ್ಯಕ್ಷವಾಗಿ ಕಂಡಾಗ್ಗೆ ಗುರುತಿಸುವದೂ ಒಂದು ಬಗೆಯ ಸ್ಮರಣೆಯಾಗಿದೆ.

ಮಾನವನು ಸಾಧಿಸಿದ ಅನೇಕ ಮುಖವಾದ ಪ್ರಗತಿಗೆ ಸ್ಮರಣ ಶಕ್ತಿಯೆ ಅಡಿಗಲ್ಲಾಗಿದೆ. ಅನುಭವಗಳನ್ನು ಜತನಮಾಡುವದೆ ಸ್ಮರಣವೆಂದು ಸ್ಥೂಲವಾಗಿ ಹೇಳಬಹುದು. ಹಿಂದಿನ ಅನುಭವಗಳು ಇಂದಿನ ಕೃತಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರುವವು. ಅನುಭವಗಳ ಜತನವಾಗದಿದ್ದರೆ ವಿಕಾಸ ಅಭಿವೃದ್ಧಿಗಳ ಮಾತನ್ನೇ ಎತ್ತುವಂತಿಲ್ಲ. ಸಂಗ್ರಹಿಸಿದ ಅನುಭವಗಳ ಬೆಳಕಿನಲ್ಲಿಯೆ ನಾವು ಜಗತ್ತನ್ನು ನೋಡುತ್ತೇವೆ, ಜೀವನಕ್ಕೆ ಹೊಂದಿಕೊಳ್ಳುತೇವೆ, ಪ್ರಗತಿಯ ದಾರಿಯಲ್ಲಿ ಮುಂದರಿಯುತ್ತೇವೆ. ಅಂತೆಯೇ ಅನುಭವಗಳನ್ನು ಜತನಮಾಡುವ ಸ್ಮರಣಕ್ರಿಯೆಯು ಒಳ್ಳೇ ಉಪಯುಕ್ತವಾದ ಮನೋವ್ಯಾಪಾರವಾಗಿದೆ.

ಸ್ಮರಣ ಶಕ್ತಿಯು ಐದು ವಿಧವಾಗಿರುವದು : ( i ) ತಾತ್ಕಾಲಿಕವಾದುದು—ಇದು ಅಲ್ಪಕಾಲ ಉಪಯುಕ್ತವಾಗಿದೆ. ( ii ) ಶಾಶ್ವತವಾದುದು— ಇದು ಚಿರಕಾಲ ಉಳಿಯುವದು. ಚಿಕ್ಕ ಮಕ್ಕಳಲ್ಲಿ ಇದು ಹೆಚ್ಚಾಗಿ ಕಂಡುಬರುವದು. ( iii ) ಉದ್ದೇಶ ರಹಿತವಾದುದು-ಧಾರಣ ಶಕ್ತಿಯು ಪ್ರಬಲವಾಗಿರುವಲ್ಲಿ ಅನೇಕ ಸಂಗತಿಗಳ ಆಗಂತುಕವಾಗಿ ಮನಸ್ಸಿನಲ್ಲಿ ಉಳಿಯುವವು. ಅವುಗಳಲ್ಲಿ ಯಾವ ಹೊಂದಿಕೆಯೂ ಇರುವದಿಲ್ಲ. (iv) ಯಾಂತ್ರಿಕ-'ಪುನರಪಿ' ಪಠಣದಿಂದ ಅರ್ಥ ತಿಳಿಯದೆಯೆ ಶಬ್ದಗಳು ಸ್ಮರಣದಲ್ಲಿ ಉಳಿಯುವವು. ಅಮರಕೋಶ ಇಲ್ಲವೆ ಸ್ತೋತ್ರಗಳನ್ನು ಈ ರೀತಿಯಾಗಿ ಪಾಠ ಮಾಡಿಸುವದುಂಟು. (v) ತರ್ಕಬದ್ಧವಾದುದು—ಅರ್ಥ ತಿಳಿದುಕೊಂಡಾಗಲಿ, ವಿಚಾರಗಳನ್ನು ಸುಸಂಗತವಾಗಿ ಕೀಲಿಸುವದರಿಂದಾಗಲಿ—ಸ್ಮರಣೆಗೆ ತಂದುಕೊಳ್ಳುವದು ಸುಲಭವಾಗುವದು.

ಶಿಕ್ಷಣದಲ್ಲಿ ಸ್ಮರಣ ಶಕ್ತಿಯು ಕಾರ್ಯವನ್ನು ಸುಗಮವಾಗಿ ಮಾಡಲು ಕೆಲವೊಂದು ವಿಧಾನಗಳು ಸಹಾಯಕವಾಗಿವೆ :— (i) ಕಲಿಯುವ ವಿಷಯದಲ್ಲಿ ಆಸ್ಥೆ-ಅಭಿರುಚಿಯನ್ನು ಹುಟ್ಟಿಸಬೇಕು. ( ii ) ಪ್ರಾರಂಭವು ಪರಿಣಾಮಕಾರಿಯಾಗಬೇಕು. ಅಂದರೆ, ಪಾಠಕ್ರಮದಲ್ಲಿ ಅರ್ಥಗೆಲುವು ಆಗಲೆ ದೊರೆತಂತಾಗುವದು. ( iii ) ಔಚಿತ್ಯ ಮರಿತು 'ಪುನರಪಿ' ಹೇಳಬೇಕು (iv) ವಿಷಯ ಪ್ರತಿಪಾದನೆಯ ಮೆಟ್ಟಲುಗಳಲ್ಲಿ ಹೊಂದಿಕೆ-ಸಂಬಂಧಗಳಿರಬೇಕು. ( v ) ವಿಷಯುವು ಅರ್ಥಪೂರ್ಣವಾಗಿರಬೇಕು, ಮಕ್ಕಳ ಅಂದಿನ ಜೀವನವನ್ನು ಸ್ಪರ್ಶಿಸುವಂತಿರಬೇಕು, ಮುಂದಿನ ಉಪಯುಕ್ತತೆಯ ಬಗ್ಗೆ ಅವರಿಗೆ ಮನವರಿಕೆಯಾಗಬೇಕು. ( vi ) ಕಂಠಪಾಠಕ್ಕೆ ಆಗಾಗ್ಗೆ ಅವಕಾಶ ಕೊಡಬೇಕು. ( vii ) ಸ್ಮರಣವು ಮಾನಸಿಕಕ್ರಿಯೆಯಾದರೂ, ದೇಹಾರೋಗ್ಯವು ಅದಕ್ಕೂ ಅಗತ್ಯವಾಗಿದೆ.

ಮರೆವು :— ಮರೆವು ಮನಸ್ಸಿನ ಒಂದು ದೋಷ ಇಲ್ಲವೆ ದೌರ್ಬಲ್ಯವಾಗಿಲ್ಲ. ಅದೂ ಒಂದು ಅಗತ್ಯವಾದ ಮನೋವ್ಯಾಪಾರವಾಗಿದೆ. ಬೇಸಗೆಯಲ್ಲಿ ಇದ್ದ ಬಿದ್ದ ಆರ್ದ್ರತೆಯನ್ನು ಕಾಯ್ದುಕೊಳ್ಳಲು ಕೆಲವು ಗಿಡಗಳು ಎಲೆಗಳನ್ನು ಉದುರಿಸುವವು. ಹೂ ಬಿಟ್ಟಿದ್ದೆಲ್ಲ ಕಾಯಿಗಳಾದರೆ, ಗಿಡವು ಅವುಗಳ ಭಾರವನ್ನು ತಡೆದುಕೊಳ್ಳಲಾರದು. ಮುಕ್ಕಾಲು ಪಾಲು ಹೂಗಳು ಉದುರಿ ಹೋಗುವವು. ಇವೆಲ್ಲ ಗಿಡಗಳ ಹಿತಕ್ಕಾಗಿ ನಿಸರ್ಗದ ಹಂಚಿಕೆಗಳು. ಮಾನವನ ಹಿತಕ್ಕಾಗಿಯೂ ನಿಸರ್ಗವು ಯೋಜನೆ ಮಾಡಿದೆ. ಮರೆವು ನಿಸರ್ಗದ ಇಂಥದೊಂದು ಯೋಜನೆಯಾಗಿದೆ. ನಿತ್ಯ ಜೀವನದ ಗಣನೆಯಿಲ್ಲದ ಅನುಭವಗಳನ್ನು ಮನಸ್ಸು ಜತನಮಾಡುತ್ತ ಹೋದರೆ ಅವುಗಳ ಭಾರದಿಂದ ಅದು ಕುಸಿದು ಹೋಗಬಹುದು. ಅವುಗಳಲ್ಲಿ ಅನವಶ್ಯವಾದವುಗಳನ್ನೂ, ಅನಪೇಕ್ಷಿತವಾದವುಗಳನ್ನು ಮರೆತು ಬಿಡುವದೇ ಮನಸ್ಸಿಗೆ ಕ್ಷೇಮಕರವಾಗಿದೆ. ಅಂತೆಯೆ, 'ವಿವೇಕಯುತವಾದ ಮರೆವು ಸರಿಯಾದ ಅಧ್ಯಯನ' ವೆಂದು ಡಾ. ಆಡ್ಯಾಮರವರು ಹೇಳಿರುವರು. ಸಾಮಾನ್ಯವಾಗಿ ಮರೆವಿಗೆ—ವಿಸ್ಮರಣಕ್ಕೆ—ಎರಡು ಕಾರಣಗಳು. ಬಹುಕಾಲ ಸಂಪರ್ಕವಿಲ್ಲದ್ದರಿಂದ ಮರೆಯುವದು; ಇದು ಎಲ್ಲರ ಅನುಭವ. ನಮಗೆ ಬೇಡವಾದುದನ್ನು ಮರೆಯುವದು ಮತ್ತೊಂದು. ಮಂದಿಗೆ ಹಣ ಕೊಡಬೇಕಾದದ್ದು ಮರೆತುಬಿಡುತ್ತದೆ. ಅದು ಈ ಬಗೆಯ ಮರೆವು. ಅರ್ಧ ಮರೆತದ್ದು ಮತ್ತೊಂದು ಸಲ ನೋಡಿಕೊಳ್ಳುವದರಿಂದ ಸುಲಭವಾಗಿ ನೆನಪಿಗೆ ಬರುತ್ತದೆ. ನೆನಪಿನಲ್ಲಿಡಬೇಕಾದ್ದನ್ನು ಶಿಕ್ಷಕರು ವಿದ್ಯಾರ್ಥಿಗಳ ಗಮನಕ್ಕೆ ಆಗಾಗ್ಗೆ ತಂದು ಕೊಡಬೇಕು. ಯಾವದು ಪ್ರಧಾನ-ಅಪ್ರಧಾನ, ಅವಶ್ಯ-ಅನವಶ್ಯವೆಂಬುದನ್ನು ಅವರಿಗೆ ತೋರಿಸಿ ಕೊಡಬೇಕು. ಹಿಂದೆ ಹೇಳಿದಂತೆ ವಿಷಯದಲ್ಲಿ ಆಸ್ಥೆ-ಅಭಿರುಚಿಗಳನ್ನು ಹುಟ್ಟಿಸುವದು, ಜೀವನಸ್ಪರ್ಶಿಯನ್ನಾಗಿ ಮಾಡುವದು ಮರೆವನ್ನು ಕಡಿಮೆಮಾಡಲು ಒಳ್ಳೇ ಸಾಧನಗಳಾಗಿವೆ.

ಕಲ್ಪಕತೆ :— 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ

.... .... .... .... ....

ಗಾಳಿ ಯೊಡನೆ ತೆಳ್ಳಿಯಾಡುತಾಡುತದರ ಓಟಾ
ದಿಕ್ತಟಗಳ ಹಾಯುತಿತ್ತು ಅದರ ಬಿದಿಗೆ ನೋಟಾ
ನಕ್ಕುನಗುವ ಚಿಕ್ಕೆಯೊಡನೆ ಬೆಳೆಸುತಿತ್ತು ಕೂಟಾ

— ಅಂಬಿಕಾತನಯದತ್ತ.

................ The poet's Pen
Turns them to shapes, and gives to airy nothings
A local habitation and a name. —Shakespeare.

ಮಾನಸಿಕ ಶಕ್ತಿಗಳಲ್ಲಿ ನಾವು ನಿತ್ಯವೂ ಹೆಚ್ಚಾಗಿ ಬಳಸುವದು ಕಲ್ಪನಾಶಕ್ತಿ. ಕಲ್ಪಕತೆಗೆ, ಕಲ್ಪಕತೆಯೆಂದು ಮಾರ್ಮಿಕವಾಗಿ ಹೇಳುವದುಂಟು. ಕಲ್ಪಕತೆ ಬಯಸಿದುದನ್ನು ನಿಜವಾಗಿಯೂ ನೀಡುತ್ತದೆ. ಕಲ್ಪಕತೆಯ ರೆಕ್ಕೆಗಳನ್ನೇರಿ ಬಯಕೆಯ ರಾಜ್ಯದಲ್ಲಿ ನಾವು ವಿಹರಿಸುತ್ತೇವೆ; ನಿತ್ಯಜೀವನದ ಕೆಲಕಾಲ ನಿಷ್ಠುರತೆಯನ್ನು ಮರೆತುಬಿಡುತ್ತೇವೆ.

ಇಂದ್ರಿಯಗಳ ಸಹಾಯದಿಂದ ಮನಸ್ಸು ಅನೇಕ ಸಂವೇದನೆಗಳನ್ನು ಸಂಗ್ರಹಿಸುತ್ತದೆ. ಸ್ಮರಣಶಕ್ತಿಯು ಇವುಗಳನ್ನು ಜತನಮಾಡುವದು. ಆದರೆ ವ್ಯಕ್ತಿವಿಕಾಸಕ್ಕೆ ಇಂದ್ರಿಯಗಳಿಂದ ಬಂದ ಜ್ಞಾನವಷ್ಟೇ ಸಾಲದು. ಈ ಜ್ಞಾನವನ್ನೇ ಆಧಾರವಾಗಿಟ್ಟುಕೊಂಡು ಮನಸ್ಸು ನೂತನವಾದ ಜ್ಞಾನಸೃಷ್ಟಿಯನ್ನು ನಿರ್ಮಿಸಲು ಸಮರ್ಥವಾಗಿದೆ. ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ಗೋಚರವಾಗದಿರುವ ಆಕೃತಿಗಳನ್ನು ಮನಸ್ಸಿನಲ್ಲಿ ತರುವದು ಕಲ್ಪನೆಯೆಂದು ಹೇಳಬಹುದು. ಹೊರಗಿನ ವಸ್ತು ಇಲ್ಲದಿದ್ದರೂ ಮನಸ್ಸಿನ ಪಟಲದ ಮೇಲೆ ಆ ವಸ್ತುವಿನ ಪ್ರತಿಕೃತಿ-ಪಡಿಯಚ್ಚನ್ನು ಮೂಡಿಸುವ ಕಾರ್ಯವು ಕಲ್ಪನಾ ಶಕ್ತಿಯದು. ಆಕಸ್ಮಿಕ ಅಡಚಣೆಗಳಿಗಾಗಿ ಒಂದು ಸಮಾರಂಭಕ್ಕೆ ನಮಗೆ ಹೋಗುವದಾಗದಿದ್ದರೆ, ಅಲ್ಲಿನಡೆಯುವದನ್ನೆಲ್ಲ ಕಲ್ಪನೆಯ ಕಣ್ಣಿನಿಂದ ಕಾಣಬಹುದು. ಒಮ್ಮೆ ನೋಡಿದ ಸಮಾರಂಭವಿದ್ದರೆ, ಅದನ್ನೆ ಮತ್ತೆ ಮನಸಿನಲ್ಲಿ ತರುವದು ನೆನಹಿನ ಕಾರ್ಯ. ಇಂದ್ರಿಯಗಳಿಗೆ ಕಾಣದ್ದನ್ನು ಕಣ್ಣೆದುರಿಗೆ /ತರುವದು ಕಲ್ಪನಾ ಶಕ್ತಿಯ ಕಾರ್ಯ. ಈ ದೃಷ್ಟಿಯಿಂದ ನೋಡಿದರೆ ನೆನಹೂ ಒಂದು ಬಗೆಯ ಕಲ್ಪನಾ ಶಕ್ತಿಯೇ. ಕಲ್ಪನೆಗಳು ವ್ಯವಹಾರ್ಯವಸ್ತುಗಳಾಗಬೇಕಾದರೆ, ಅವುಗಳಿಗೆ ಭಾಷೆಯ ನೆರವು ಬೇಕು.

ಕಲ್ಪನಾಶಕ್ತಿಯ ಕಾರ್ಯ ಬಹುಮುಖವಾಗಿ ನಡೆಯುತ್ತಿದೆ. ಮೊದಲು ಪ್ರತ್ಯಕ್ಷವಾಗಿ ಕಂಡ ವಸ್ತು ಎದುರಿನಲ್ಲಿ ಇಲ್ಲದಾಗ್ಗೆ ಮನಸ್ಸಿನಲ್ಲಿ ಅದರ ಪಡಿನೆಳಲು-ಬಿಂಬ-ಪ್ರತಿಮೆ ಮೂಡುವದು. 'ಬಿಂಬ ಇಲ್ಲವೆ ಪ್ರತಿಮಾ ಕಲ್ಪನೆಯಾಗಿದೆ. ಹೋಲಿಕೆ ಹಾಗೂ ವ್ಯತ್ಯಾಸಗಳ ಸಹಾಯದಿಂದ ಸಜಾತೀಯ ವಸ್ತುಗಳಲ್ಲಿರುವ ಸಾಮಾನ್ಯತೆ ಕಂಡು ಹಿಡಿಯುವದು-ಸಾಮಾನ್ಯತೆಯ ಕಲ್ಪನೆ. ಬಣ್ಣ-ರೂಪುಗಳಲ್ಲಿ ಭೇದಗಳೇನು ಇದ್ದರೂ-'ಹೂ' ಎಂಬ ಸಾಮಾನ್ಯತೆಯನ್ನು ಮಗು ಇದೇ ರೀತಿಯಾಗಿ ಕಂಡುಕೊಳ್ಳುವದು. ಕೈಕೊಂಡ ಕಾರ್ಯವನ್ನು ಈಡೇರಿಸಬೇಕಾದರೆ- ಏನು ಮಾಡಬೇಕು ? ಹೇಗೆ ಮಾಡಬೇಕು ? ಸಾಧನಗಳೇನು, ಅಡೆತಡೆಗಳೇನು ? ಎಂಬುದನ್ನು ಮೊದಲೆ ಕಲ್ಪನೆಯಿಂದ ಕಂಡುಕೊಳ್ಳುವದು ವಾಸ್ತವ-ವ್ಯಾವಹಾರಿಕ ಕಲ್ಪನೆ. ಈ ಕಲ್ಪನೆಯಲ್ಲಿ ಮುನ್ನೋಟವಿರುವದು, ಅದು ಭೂತಕಾಲಕ್ಕೆ ಸಂಬಂಧಿಸಿದುದು. ಕವಿಯಾಗಲಿ, ಕಲಾವಿದನಾಗಲಿ, ಕಲ್ಪನೆಯಿಂದ ಮನಸ್ಸಿನಲ್ಲಿ ಮೂಡಿದ್ದಕ್ಕೆ ಶಬ್ದಗಳಲ್ಲಿ, ಕಲಾಕೃತಿಗಳಲ್ಲಿ ರೂಪುಕೊಡುವದು. ಇದು ಕಲಾತ್ಮಕ ಕಲ್ಪನೆ. ಒಬ್ಬರ ಭಾವವು ಹಲವರಭಾವವಾಗಬೇಕು-ಕಲ್ಪನಾಶಕ್ತಿಯೆ ಈ ಕಾರ್ಯವನ್ನು ಮಾಡುವದು. ಸಹೃದಯತೆಯನ್ನು ತಂದುಕೊಡುವದು. ಅನ್ಯರ ತೊಂದರೆಗಳನ್ನು ತನ್ನವುಗಳಾಗಿ ತಿಳಿದುಕೊಳ್ಳುವದು, ಅನ್ಯರ ಸುಖದುಃಖಗಳಲ್ಲಿ ತಾನು ಭಾಗಿಯಾಗುವುದು-ಇದು ಭಾವನಾತ್ಮಕ ಕಲ್ಪನಾ ಶಕ್ತಿ. ಇದೇ ನೀತಿಯ ನೆಲೆಗಟ್ಟು. ಅಂತೆಯೆ, ಇದಕ್ಕೆ ನೈತಿಕ ಕಲ್ಪನಾ ಶಕ್ತಿಯೆಂತಲೂ ಹೇಳುವರು.

ವಿಶಿಷ್ಟವಾದ ಭಾವನೆಯೊಡನೆ ಬೆರೆಯದೆ ಕೇವಲ ವಿನೋದಕ್ಕಾಗಿ ಒದಗುವ ಕಲ್ಪನಾಶಕ್ತಿಯು ಮಕ್ಕಳ ಶೈಶವದ ಆಟಗಳಲ್ಲಿ ಕಂಡುಬರುವದು. ಇದೊಂದು ಮರುಳಾಟ (make-believe). ಈ ಬಗೆಯ ಕ್ರೀಡಾತ್ಮಕ ಕಲ್ಪನೆಯು ವಿವಿಧ ರೂಪಗಳನ್ನು ತಾಳೆ

ಬಹುದು. ಆಟಗಳಲ್ಲಿ ಅಜ್ಜನ ಕೋಲು ಕುದುರೆಯಾಗಬಹುದು. ತೂಗುವ ಮಂಚ ಉಗಿಬಂಡಿಯಾಗಬಲ್ಲದು. ಕಾಗದ ಚೂರುಗಳಿಗೆ 'ಕರನ್ಸಿ' ನೋಟುಗಳ ಬೆಲೆಬರಬಹುದು ಆದರೆ ಈ ಕಲ್ಪನೆಗಳೆಲ್ಲವೂ ಕೇವಲ ವಿನೋದಕ್ಕಾಗಿ, ಸ್ವಂತದ ಸಂತೋಷಕ್ಕಾಗಿ.

ಕಲ್ಪನಾಶಕ್ತಿಯು ಕೆಲವರಲ್ಲಿ ಹಗಲುಗನಸುಗಳಾಗಿ ರೂಪುಗೊಳ್ಳಬಹುದು. ಸುರಸಕಥೆಗಳಲ್ಲಿಯ ಅರಬ್ಬೀರಾಜಕುಮಾರನಂತೆ, ಹಾರುವ ರತ್ನಗಂಬಳಿಯನ್ನೇರಿಸಿ ಚೀನಾದಲ್ಲಿಗೆ ಸಂಚರಿಸುವಂತೆ ಮಾಡಬಹುದು. ಶೇಖ ಮಹ್ಮದನಂತೆ ಸಿರಿವಂತಿಕೆಯಲ್ಲಿ ಸಂಸಾರಿಗನನ್ನಾಗಿ ಮಾಡಬಹದು. ಕಲ್ಪನಾ ರಾಜ್ಯದ ಈ ವಿಹಾರ ಜೀವನದ ಜಂಜಾಟದಿಂದ ಬಿಡುಗಡೆ ಮಾಡಬಹುದು. ಆದರೆ ನಿತ್ಯಜೀವನಕ್ಕೆ ಅಲ್ಲಿಂದ ಮರಳಿ ಬಂದಮೇಲೆ ಮನಸ್ಸು ತುಂಬಾ ಉದ್ವಿಗ್ನವಾಗುವದು. ಚಿಕ್ಕ ಮಕ್ಕಳಿಗೆ ಹಾಕುವ ಕಲ್ಪನೆಯ ಹೆದರಿಕೆ ಅವರನ್ನು ಹೇಡಿಗಳನ್ನಾಗಿ ಮಾಡುವದು. ಈ ಹಾನಿಯನ್ನು ತಪ್ಪಿಸಲು ಹಗಲುಗನಸುಗಳಿಗೆ ಹೊಸ ಹಾದಿಯನ್ನು ಹಾಕಿಕೊಡಬಹುದು. ಯಕ್ಷ–ಯಕ್ಷಿಣಿಯರ ಕಥೆಗಳು ಈ ಕಾರ್ಯದಲ್ಲಿ ಸಹಾಯವಾಗಿವೆ. ಇಲ್ಲವೆ, ' ನಾನು ಲಕ್ಷಾಧೀಶನಾಗಿದ್ದರೆ '— 'ಮುಖ್ಯ ಮಂತ್ರಿಯಾಗಿದ್ದರೆ' ಎಂಬ ವಾಸ್ತವ ಜೀವನದ ಸಮಸ್ಯೆಗಳಲ್ಲಿ ಈ ಹಗಲುಗನಸುಗಳ ಪ್ರವೃತ್ತಿಯನ್ನು ತೊಡಗಿಸಬಹುದು.

ಕಲ್ಪನೆಯ ಕಣ್ಣಿಗೆ ಯಾವ ತಡೆಯೂ ಇಲ್ಲ. ಅದು ಹಿಂದಿನದನ್ನು ಇಂದಿನದಾಗಿ ಮಾಡಬಲ್ಲದು. ಮುಂದೆ ಒದಗುವದನ್ನು ಇಂದೆಯೇ ಊಹಿಸಬಲ್ಲದು. 'ರವಿ ಕಾಣದ್ದನ್ನು ಕವಿ ಕಾಣುವನು', ಎಂಬ ಮಾತು ಕಲ್ಪನೆಯ ಮಹಿಮೆಯನ್ನೇ ಸಾರುವದು. ತಾನು ಸೃಷ್ಟಿಸಿದ ವ್ಯಕ್ತಿಗಳ ಸುಖದುಃಖಗಳಲ್ಲಿ ಸಾಹಿತಿಯು ತಾನೂ ತನ್ಮಯನಾಗುವನು; ಭಾವನಾತ್ಮಕ ಕಲ್ಪನೆಯಿಂದ ಓದುಗರನ್ನೂ ತನ್ಮಯರನ್ನಾಗಿ ಮಾಡುವನು. ಭಾವ ಹಾಗೂ ಕಲ್ಪನೆಗಳ ಬಂಧುರವಾದ ಈ ಜೋಡು ಜೀವನಪಥದಲ್ಲಿ ಕಾಲಿಡುತ್ತಿರುವ ಚಿಕ್ಕಮಕ್ಕಳಿಗೆ ದೊರೆಯುವಂತೆ ಶಿಕ್ಷಕನು ಯತ್ನಿಸಬೇಕು. ಹಿಂದಿನ ಹಾಗೂ ಇಂದಿನ ಸಾಹಿತ್ಯದಲ್ಲಿ ತೋರಿ ಬರುವ ಉಜ್ವಲ ಜೀವನ ಚರಿತ್ರೆಗಳನ್ನು ಭಾವಗೀತಗಳನ್ನೂ ಸಮಯವರಿತು ಅವರ ಗಮನಕ್ಕೆ ತರಬೇಕು. ಕಲ್ಪನಾಶಕ್ತಿಯನ್ನು ಕಟ್ಟುವದರಲ್ಲಿ ಅಭಿನಯವೂ ಪ್ರಬಲವಾದ ಸಾಧನೆಯಾಗಿದೆ. ತನ್ನ ಪಾತ್ರದೊಡನೆ ನಟನು ಸಮರಸನಾಗಿ ತನ್ನನ್ನು ತಾನೆ ಮರೆಯುವನು. ಅಂತೆಯೇ ಶಿಕ್ಷಣದ ಕ್ರೀಡಾಪದ್ಧತಿಯಲ್ಲಿ ಅಭಿನಯಕ್ಕೆ ಸಾಕಷ್ಟು ಸಂದರ್ಭಗಳಿವೆ. ಗುಪ್ತಗಾಮಿನಿಯಾಗಿ ಹರಿಯುವ ಭಾವಪ್ರವಾಹವನ್ನು ಕಲ್ಪನಾಶಕ್ತಿಯು ಅಭಿನಯದ ಸಹಾಯದಿಂದ ಬೆಳಕಿಗೆ ತರುವದು.

(ಬ—ಕ) :— ಪ್ರಾಥಮಿಕ ಮೆಟ್ಟಲಿನಲ್ಲಿಯ ಮಹತ್ವದ ಸಹಜ ಪ್ರವೃತ್ತಿಗಳು—ಭಾವನೆಗಳು; ಉಜ್ವಲೀಕರಣ. ಸಹಜ ಪ್ರವೃತ್ತಿಗಳಿಗೆ ಸ್ವಾಭಾವಿಕ ಒಲವು ಇಲ್ಲವೆ ಹುಟ್ಟುಗುಣಗಳೆಂತಲೂ ಹೇಳುವರು. ಶಿಕ್ಷಣಕಾರ್ಯದಲ್ಲಿ ಇವುಗಳ ಜ್ಞಾನವು ಅವಶ್ಯವಾದುದು. ಶಿಕ್ಷಣದ ಆದಿ ಹಾಗೂ ಪ್ರಗತಿ ಇವುಗಳಿಂದಲೆ ನಡೆಯುವದು. ಎಲ್ಲ ಸಹಜಪ್ರವೃತ್ತಿಗಳೂ ಸರ್ವಕಾಲೀನವಾಗಿಲ್ಲ. ಒಮ್ಮೆ ಕಳಚಿ ಹೋದ ಸಹಜ ಪ್ರವೃತ್ತಿಯು ಮತ್ತೆ ಉದಯಿಸಲಾರದು. ಆದುದರಿಂದ ಅವುಗಳಿಗೆ ಉಚಿತವಾದ ಸಂಸ್ಕಾರವನ್ನು ಯೋಗ್ಯ

ಸಮಯದಲ್ಲಿಯೆ ಕೊಡಬೇಕಾಗುವದು. ' ಮನುಷ್ಯನ ಸ್ವಾಭಾವಿಕ ಒಲವುಗಳೆಲ್ಲವೂ ಕೀಳು; ಅವುಗಳನ್ನು ಬಿಗಿ ಹಿಡಿಯುವಂತೆ ಮಾಡುವದೆ ಶಿಕ್ಷಣಕಾರ್ಯವೆಂದು—ಹಿಂದಿನ ಅಭಿಪ್ರಾಯವಾಗಿತ್ತು. ಇಂದು ಈ ದೃಷ್ಟಿಯು ಬದಲಿಸಿದೆ. ನಮ್ಮ ಉನ್ನತ ವಿಚಾರಗಳಿಗೂ, ಬೆರಗುಗೊಳಿಸುವ ಬೌದ್ಧಿಕ ಚಟುವಟಿಕೆಗಳಿಗೂ ಈ ಸಹಜ ಪ್ರವೃತ್ತಿಗಳೆ ಅದೃಶ್ಯವಾಗಿ ಆಧಾರವಾಗಿವೆಯೆಂಬುದನ್ನು ಇಂದಿನ ಮಾನಸ ಶಾಸ್ತ್ರವು ಸಿದ್ಧಮಾಡಿಕೊಟ್ಟಿದೆ.

ಈ ಸಹಜ ಪ್ರವೃತ್ತಿಗಳನ್ನು ಸಂಪೂರ್ಣವಾಗಿ–ಶಾಸ್ತ್ರೀಯವಾಗಿ ವಿವೇಚಿಸಿದವರು ಮ್ಯಾಕ್‌ಡೂಗಲ್ ಎಂಬ ಮಾನಸಶಾಸ್ತ್ರಜ್ಞರು. ಇವರು ಹೇಳುವಂತೆ ಈ ವೃತ್ತಿಗಳು 'ಸಹಜ' ವಾಗಿವೆ; ಹುಟ್ಟುಗುಣಗಳಾಗಿವೆ, ಇಲ್ಲವೆ ಆನುವಂಶಿಕವಾಗಿವೆ. ಇವು ಕಲಿಕೆಯಿಂದ ಬಾರವು; ಆದರೆ ಕಲಿಯುವದರ ಮೂಲ ದ್ರವ್ಯಗಳಾಗಿವೆ. ಹುಟ್ಟುಗುಣಗಳಾದರೂ ಹುಟ್ಟಿದಂದಿನಿಂದಲೆ ಎಲ್ಲವೂ ಹೊರಗೆ ಕಾಣವು. ಸರಿಯಾದ ಸಮಯ–ಸಂದರ್ಭಗಳಲ್ಲಿ ತಾವಾಗಿಯೆ ತಿಲೆದೋರುವವು. ಇಂಥ ಸನ್ನಿವೇಶಗಳಲ್ಲಿ ಪ್ರಾಣಿಗಳೆಲ್ಲವೂ ಸಜಾತೀಯವಾದ ಒಂದು ವಿಶಿಷ್ಟರೀತಿ ನಡೆದು ಕೊಳ್ಳುವವು. ಈ ಕಾರ್ಯವು ವಿಚಾರದ ಫಲವಲ್ಲ, ಅನುಭವದ ಪರಿಣಾಮವಲ್ಲ. ಇದು 'ಪ್ರತಿಕ್ಷಿಪ್ತಕ್ರಿಯೆ'ಯೂ (reflexaction) ಆಗಿಲ್ಲ. 'ಬೆಳಕಿಗೆ ಕಣ್ಣು ಮುಚ್ಚಿಕೊಳ್ಳುವದು ಪ್ರತಿಕ್ಷಿಪ್ತಕ್ರಿಯೆ. ಇದರಲ್ಲಿ ಒಂದೇ ಅವಯವವು ಭಾಗವಹಿಸುವದು. ಸಹಜ ಪ್ರವೃತ್ತಿಯಲ್ಲಿ ಸಂಪೂರ್ಣ ಚೈತನ್ಯವೇ ಸಹಕರಿಸುವದು. ಬುದ್ಧಿಯೂ ಸಹಕರಿಸುವದು. ಪ್ರಾಣಿಗಳ ತರಗತಿಯು ಹೆಚ್ಚಾದಂತೆ ಬುದ್ಧಿಯು ಈ ಸಹಕಾರವೂ ಹೆಚ್ಚುವದು. ಶಿಕ್ಷಣದಿಂದಲೂ, ಅನುಭವದಿಂದಲೂ, ಸಹಜ ಪ್ರವೃತ್ತಿಗಳನ್ನು ತಿದ್ದಲು ಬರುವದು. ಅಂತೆಯೆ ಇವುಗಳಿಗೆ ಶಿಕ್ಷಣದ ಮೂಲಗಳು' ಎಂತಲೂ ಹೇಳುವರು.

ಪ್ರತಿಯೊಂದು ಸಹಜ ಪ್ರವೃತ್ತಿಯಲ್ಲಿಯೂ ಮೂರು ಅಂಶಗಳಿರುವದು ಕಂಡು ಬರುವದು. (೧) ಸನ್ನಿವೇಶದ ಜ್ಞಾನ—ತನ್ನೆಡೆಗೆ ಲಕ್ಷವನ್ನು ಸೆಳೆಯುವ ಒಂದು ವಿಶಿಷ್ಟವಸ್ತುವಿನ ಅರಿವು. (೨) ಆ ಸನ್ನಿವೇಶದಲ್ಲಿ ಅನುಸರಿಸುವ ಒಂದು ನಿರ್ದಿಷ್ಟ ಕಾರ್ಯಾಚರಣೆ. (೩) ಈ ನಡತೆಗೆ ಅನುರೂಪವಾಗಿರುವ ಒಂದು ಭಾವ. ಈ ಮೂರು ಸಂಗತಿಗಳು ಏಕಕಾಲಕ್ಕೆ ಕೂಡಿಯೆ ನಡೆಯುವವು. ಸಹಜ ಪ್ರವೃತ್ತಿಗಳ ಸಂಖ್ಯೆಯ ಬಗ್ಗೆ ಶಾಸ್ತ್ರಜ್ಞರಲ್ಲಿ ಏಕವಾಕ್ಯತೆಯಿಲ್ಲ. ಹತ್ತರಿಂದ ನೂರರವರೆಗೆ ಇವುಗಳ ಸಂಖ್ಯೆಯನ್ನು ಹೆಚ್ಚುಕಡಿಮೆಯಾಗಿ ಹೇಳಿರುವರು. ಸಾಮಾನ್ಯವಾಗಿ ಇವುಗಳಲ್ಲಿ ಮೂರು ವರ್ಗಗಳನ್ನು ಮಾಡುವರು. ವ್ಯಕ್ತಿಗೆ ಸಂಬಂಧಿಸಿದವು :—

(೧) ಆಹಾರ ಸಂಪಾದನೆ:— ಇದು ಶಾರೀರಿಕ ಕ್ರಿಯೆಯಾದ 'ಹಸಿವೆ' ಗಿಂತಲೂ ಭಿನ್ನವಾಗಿರುವದು; ಎಲ್ಲ ಸಜೀವ ಪ್ರಾಣಿಗಳಲ್ಲಿ ಸಮಾನವಾಗಿ ಕಂಡುಬರುವದು.

(೨) ಯುಯುತ್ಸಾ ಪ್ರವೃತ್ತಿ:— ಹೋರಾಟದ ಒಲವು, ಆತ್ಮರಕ್ಷಣೆಯೆ ಈ ಹೋರಾಟದ ಉದ್ದೇಶ. ಹೊರಾಟವೆಂದರೆ ಕೇವಲ ಹೊಡೆದಾಟವಲ್ಲ. ವಿಚಾರಗಳ ತಾಕಲಾಟ, ಆದರ್ಶಗಳ ಅಂತಃಕಲಹ, ಇದರಲ್ಲಿಯೆ ಸಮಾವೇಸವಾಗುವದು.

(೩) ಜಿಜ್ಞಾಸಾ:— ಅರಿತುಕೊಳ್ಳುವ ಪ್ರವೃತ್ತಿ, ಲವಲವಿಕೆ. ಇದನ್ನೇ ಕುತೂಹಲವೆಂತಲೂ ಹೇಳುವರು. ಶಿಕ್ಷಣಕ್ಕೆ ಈ ಪ್ರವೃತ್ತಿಯೆ ಪ್ರೇರಕಶಕ್ತಿ. ಇದೇ ಮನೋವಿಕಾಸದ ಅಳತೆಗೋಲು. ಚಿಕ್ಕಮಕ್ಕಳಲ್ಲಿ ಇದು ಹೆಚ್ಚು ಜಾಗೃತವಾಗಿರುವದು.

(೪) ಪಲಾಯನ ಪ್ರವೃತ್ತಿ:— ಆತ್ಮರಕ್ಷಣೆಯೆ ಇದರ ಪ್ರಯೋಜನವು; ಭಯವೇ ಪ್ರೇರಕ ಶಕ್ತಿ. ಜೀವನದ ಯೋಜನೆಯಲ್ಲಿ ಭಯಕ್ಕೆ ಒಂದು ಸ್ಥಾನವಿದೆ. ಆದರೆ ಸಮಾಜದ ಸುಸ್ಥಿತಿಗಾಗಿ ಇಲ್ಲವೆ ಶಿಸ್ತಿನ ಉತ್ಪಾದನೆಗೆಗಾಗಿ ಭಯವನ್ನೇ ಅವಲಂಬಿಸುವದು ತಪ್ಪಾಗುವದು. ಅಂಜಿಕೆಯಿಂದ ದುಷ್ಕೃತಿಯನ್ನು ತಪ್ಪಿಸಬಹುದು, ಆದರೆ ಸತ್ಕಾರ್ಯವನ್ನು ಮಾಡಲು ಅದು ಪ್ರೇರೇಪಿಸದು.

(೫) ರಚನಾ ಪ್ರವೃತ್ತಿ :— ಪಶುಪಕ್ಷಿಗಳಲ್ಲಿಯೂ ಈ ಪ್ರವೃತ್ತಿಯು ಕಂಡು ಬರುವದು. ತತ್ತಿಗಳ, ಮರಿಗಳ ಜೋಪಾಸನೆಗಾಗಿ ಪಕ್ಷಿಗಳು ಬಗೆಬಗೆಯ ಗೂಡುಗಳನ್ನು ಒಳ್ಳೇ ಚಾತುರ್ಯದಿಂದ ಕಟ್ಟುವವು. 'ಕೈಸುಮ್ಮನೆ ಕೂಡುವದಿಲ್ಲ'– ಎಂದು ಹೇಳುವ ಮಕ್ಕಳ ಅನೇಕ ಚಟುವಟಿಕೆಗಳಲ್ಲಿ ಇದು ಕಂಡುಬರುವದು. ರಚನಾ ಕಾರ್ಯದಲ್ಲಿ ಅವರಿಗೆ ಸ್ವಾಭಾವಿಕವಾದ ಒಲವೂ ಸಂತೋಷವೂ ಉಂಟಾಗುವದು. ಕೈಗಾರಿಕೆಯ ಶಿಕ್ಷಣಕ್ಕಾಗಿಲ್ಲಿ, ಈ ಪ್ರವೃತ್ತಿಯು ಬಲವಾದ ಆಧಾರವಾಗಿದೆ.

(೬) ಸಂಪಾದನಾ ಪ್ರವೃತ್ತಿ:— ಎಲ್ಲ ಪ್ರಾಣಿಗಳಿಗೂ ಇದು ಸಮಾನ್ಯವಾಗಿದೆ. ಇರುವೆ–ಇಣಚಿ ಜೇನ್ನೊಣಗಳು ಈ ಪ್ರವೃತ್ತಿಗಾಗಿ ತೋರುವ ಮುನ್ನೋಟ ಜಾಣತನಗಳು ಪ್ರೇಕ್ಷಣೀಯವಾಗಿವೆ. ಚಿಕ್ಕ ಮಕ್ಕಳು ಆಕರ್ಷಕವೆನಿಸಿದ್ದೆಲ್ಲವನ್ನೂ ಕೂಡಿ ಹಾಕುವರು. ಅವರ ಕಿಸೆ ಒಂದು 'ವಸ್ತು ಸಂಗ್ರಹಾಲಯ' ದಂತೆ. ಹಿತಕರವಾದ ಹಾಗೂ ಬೌದ್ಧಿಕ 'ಹವ್ಯಾಸ' (hobby) ಗಳಲ್ಲಿ ಈ ಪ್ರವೃತ್ತಿಯನ್ನು ತೊಡಗಿಸಬೇಕು.

(೭) ಜುಗುಪ್ಸಾ ಪ್ರವೃತ್ತಿ :—ಜುಗುಪ್ಸೆಯೆಂದರೆ ತಿರಸ್ಕಾರವಲ್ಲ 'ಇದು ನನಗೆ ಕ್ಷೇಮಕರವಲ್ಲ, ಇದರಿಂದ ನಾನು ದೂರವಾಗಿರಬೇಕು'– ಎನ್ನುವ ಭಾವನೆ. ಪಶುಪಕ್ಷಿಗಳು ಕೊಳೆತ–ಹುಳಿತ ವಸ್ತುಗಳನ್ನು ವಾಸನೆಯಿಂದಲೆ ತಿಳಿದು ಕೊಂಡು ಬಿಟ್ಟು ಬಿಡುವವು. ಈ ಪ್ರವೃತ್ತಿಗೆ ಬುದ್ಧಿಯ ಬಂಧನವನ್ನು ಹಾಕಿ, ಇಲ್ಲವೆ ತಕ್ಕ ಸಂಸ್ಕಾರವನ್ನು ಕೊಟ್ಟು ನೈತಿಕ ಶಿಕ್ಷಣದಲ್ಲಿ ಬಳಿಸ ಬಹುದಾಗಿದೆ. ಹೊಲಸು ಅವ್ಯವಸ್ಥೆಗಳಿಂದ, ಅನೀತಿ ದುಷ್ಕೃತಿಗಳಿಂದ ದೂರ ವಿರಬೇಕೆಂಬ ಪ್ರವೃತ್ತಿಯನ್ನು ಚಿಕ್ಕಮಕ್ಕಳ ಮನಸ್ಸಿನಲ್ಲಿ ಪರ್ಯಾಯದಿಂದ ಮೂಡಿಸ ಬೇಕು.

ಸಂತಾನೋತ್ಪಾದನ ಪ್ರವೃತ್ತಿಗಳು :—

(೧) ಕಾಮಪ್ರವೃತ್ತಿ :— ಶಿಕ್ಷಣ ಶಾಸ್ತ್ರದ ವಿವೇಚನೆಯಲ್ಲಿ 'ಕಾಮ'ವೆಂದೊಡನೆ ಕಿವಿ ಮುಚ್ಚುವ ಮಡಿವಂತರ ಕಾಲವು ಕಳೆದುಹೋಗಿದೆ. ನಮ್ಮ ಜೀವನವನ್ನು ರೂಪುಗೊಳಿಸುವ ವಿವಿಧ ಆತ್ಮ-ಶಕ್ತಿಗಳಲ್ಲಿ ಈ ಪ್ರವೃತ್ತಿಯೂ ಒಂದು; ಇದು ಪ್ರಬಲವೂ ಆಗಿದೆ. ಇದರ ಪ್ರಭಾವವನ್ನು ಇಂದಿನ ಮಾನಸಶಾಸ್ತ್ರವೂ ತಿಳಿದಿದೆ. ಇದನ್ನೇ ಜೀವನವನ್ನಾಳುವ ಆದ್ಯಶಕ್ತಿ ಯೆಂದು ಭಾವಿಸುವ ಮಾನಸ ಶಾಸ್ತ್ರಜ್ಞರೂ ಇರುವರು. ವಿಕಾಸಕ್ರಮದಲ್ಲಿ ಈ ಪ್ರವೃತ್ತಿಯು ತುಸು ತಡವಾಗಿಯೆ ವ್ಯಕ್ತವಾಗುವದು. ಶರೀರದ

ಸಾಕಷ್ಟು ಬೆಳವಣಿಗೆಗಾಗಿ ಇದು ನಿಸರ್ಗದ ಹಂಚಿಕೆಯಾಗಿರಬಹುದು. ಪ್ರಾಯದ ಅವಧಿಯಲ್ಲಿಯಂತೂ ವ್ಯಕ್ತಿಯನ್ನು ಇದು ಪೂರ್ಣವಾಗಿ ತನ್ನ ಅಂಕಿತದಲ್ಲಿ ತೆಗೆದುಕೊಳ್ಳುವದು. ಆತನ ಬುದ್ಧಿಯನ್ನು ಆವರಿಸುವದು, ಚಿತ್ತವನ್ನು ಕದಡುವದು. ಈ ಸಮಯದಲ್ಲಿ ಶಾರೀರಿಕ ಸ್ಪರ್ಧೆ-ಕಸರತ್ತುಗಳಲ್ಲಿ, ಕಲಾತ್ಮಕ ಚಟುವಟಿಕೆಗಳಲ್ಲಿ ಯುವಕರ ಮನಸ್ಸನ್ನು ತೊಡಗಿಸಬೇಕು. ಇದರಿಂದ ಈ ಪ್ರವೃತ್ತಿಯ ಪ್ರವಾಹವು ಹರಿದು ಹೋಗಲು ಬೇರೊಂದು ಹರಿ ಕಡಿದುಕೊಟ್ಟಂತಾಗುವದು.

(೨) ಅಪತ್ಯ ಪ್ರೇಮ:—ಸ್ವಕೀಯ ಸಂತಾನದ ಬಗ್ಗೆ ಜನಿಸುವ ಸಹಜವಾದ ವಾತ್ಸಲ್ಯ-ಮಮತೆಯೆ ಅಪತ್ಯಪ್ರೇಮ. ಪಶುಪಕ್ಷಿಗಳಿಗೂ ಮಾನವರಿಗೂ ಇದು ಸಮಾನವಾಗಿರುವದು. ಮರಿಗಳಿಗಾಗಿ ಪಶುಪಕ್ಷಿಗಳು ವಹಿಸುವ ದಕ್ಷತೆ, ಮಕ್ಕಳಿಗಾಗಿ ತಂದೆತಾಯಿಗಳು ಮಾಡುವ ತ್ಯಾಗ ಪರಿಶ್ರಮಗಳು ಸ್ವರೂಪದಲ್ಲಿ ಒಂದೇ ವಿಧವಾದವುಗಳು. ಪಶುಪಕ್ಷಿಗಳ ಮರಿಗಳು ಬಾಲ್ಯದಲ್ಲಿ ಅಲ್ಪಕಾಲದ ವರೆಗೆ ಮಾತ್ರ ಪರಾವಲಂಬಿಗಳಾಗಿರುವವು. ಆದರೆ ಮಾನವ ವರ್ಗದಲ್ಲಿ ಮಕ್ಕಳ ಪರಾವಲಂಬನದ ಅವಧಿಯು ಸುದೀರ್ಘವಾಗಿರುವದು. ತಗಣಿಯ ಮರಿ ಹುಟ್ಟಿದ ಕೂಡಲೆ ಸ್ವಾವಲಂಬಿಯಾಗುವದು. ಮಾನವ ಶಿಶು ಸ್ವಾವಲಂಬಿಯಾಗಲು ಕೆಲವು ವರುಷಗಳ ತಂದೆ-ತಾಯಿಗಳ ಪಾಲನ ಪೋಷಣೆಗಳು ಬೇಕು. ಪ್ರಾಣಿಗಳ ಮೇಲ್ತರಗತಿಯ ಮೇರೆಗೆ, ಶೈಶವದಲ್ಲಿ ಜೋಪಾಸನೆಯ ಅವಧಿಯೂ ಹೆಚ್ಚಾಗುವದು. ಈ ಅವಧಿಯಲ್ಲಿಯೆ, ಹಿರಿಯರು ಗಳಿಸಿರುವ ಅನುಭವ-ಸಂಪತ್ತಿಯನ್ನೂ ಜ್ಞಾನ ಭಾಂಡಾರವನ್ನೂ ಸಜಾತೀಯ ರೀತಿ ನೀತಿಗಳನ್ನೂ ಚಿಕ್ಕ ಮಕ್ಕಳು ಸಂಪಾದಿಸುವರು. ಈ ಅಸಹಾಯತೆಯ ಅವಧಿಯಲ್ಲಿ, ತಾಯಿ-ತಂದೆಗಳ ಸಹಜವಾದ ವಾತ್ಸಲ್ಯವೆ, ಅಪತ್ಯ ಪ್ರೇಮವೆ, ಮೂಲಾಧಾರವಾಗಿದೆ.

ಸಾಮಾಜಿಕ ಜೀವನೋಪಯೋಗಿಯಾದ ಪ್ರವೃತ್ತಿಗಳು :—

(೧) ಸಾಂಘಿಕ ಪ್ರವೃತ್ತಿಗಳು :–ಆತ್ಮರಕ್ಷಣೆಗಾಗಿ ಪಶುಪಕ್ಷಿಗಳು ಗುಂಪನ್ನು ಕಟ್ಟಿಕೊಳ್ಳುವವು. ಆದರೆ ಮಾನವ ಸಮಾಜದ ರಚನೆಗೆ ಇದಕ್ಕಿಂತಲೂ ಹೆಚ್ಚಿಗೆ ಉದಾತ್ತವಾದ ಉದ್ದೇಶವಿರುವದು. ಮನುಷ್ಯನು ಒಂಟಿಗನಾಗಿ ಬಾಳಲಾರನು. ಸಮಾಜದಲ್ಲಿರುವದೆ ಆತನಿಗೊಂದು ತೃಪ್ತಿಯನ್ನು ತಂದುಕೊಡುವದು. ಸಾಮಾಜಿಕ ಜೀವನದಲ್ಲಿಯೆ ಆತನ ಅಂತಃಶಕ್ತಿಗಳು ಪ್ರಕಟಗೊಳ್ಳುವವು, ಬೆಳೆಯುವವು. ಆದರಲ್ಲಿಯೆ ಜೀವನದ ಸಫಲತೆ. ಕೂಡಿ ಬಾಳುವ, ಕೂಡಿ ಕೆಲಸಮಾಡುವ ಮನೋವೃತ್ತಿಯನ್ನು ಇಂದಿನ ಚಿಕ್ಕಮಕ್ಕಳಲ್ಲಿ ತಂದುಕೊಟ್ಟು ಮುಂದಿನ ಸಾಂಘಿಕ ಜೀವನಕ್ಕೆ ಅವರನ್ನು ಅಣಿಗೊಳಿಸುವದು ಶಿಕ್ಷಣದ ಉದ್ದೇಶವಾಗಿದೆ. ಭಾವ-ಸಾಮ್ಯತೆ, ಅನುಕರಣ, ಹಾಗೂ ವಿಚಾರ-ಸಾಮ್ಯತೆ, ಇವು ಸಾಮಾಜಿಕ ಪ್ರವೃತ್ತಿಯ ವಿಕಾಸದಲ್ಲಿ ಮೂರು ಮಹತ್ವದ ಅಂಶಗಳಾಗಿವೆ. ಶಾಲೆಯಲ್ಲಿ, ಹೊರಗೆ, ಹಾಗೂ ಶಿಕ್ಷಣದ ಎಲ್ಲ ವಿಷಯಗಳಲ್ಲಿ ಆದರ್ಶ ಪದವಿಗೆ ಯೋಗ್ಯವಾದುದನ್ನೇ ಚಿಕ್ಕ ಮಕ್ಕಳಿಗೆ ನಾವು ಯಾವಾಗಲೂ ಒದಗಿಸಬೇಕು.

ಸಾಮಾಜಿಕ ಪ್ರವೃತ್ತಿಗಳಿಗೆ ಹೊಂದಿಕೊಂಡಿರುವ ಮತ್ತೆರಡು ಸ್ವಾಭಾವಿಕ ಒಲವುಗಳಿರುವವು. (೧) ತನ್ನದೇ ಸಾಧಿಸಬೇಕೆನ್ನುವದು ಮುಂದಾಳುತನದ ಪ್ರವೃ

ತ್ರಿಯು. ಮುಂದಾಳುತನದಲ್ಲಿ ಯಾವಾಗಲೂ ಕೀರ್ತಿ-ಪ್ರಾಪ್ತಿಗಳಿರದಿದ್ದರೂ, ಪ್ರಕೃತಿ ಸಹಜವಾದ ಆಕರ್ಷಕತೆಯಿದೆ. (೨) ಹಿರಿಯರನ್ನಾಗಿ ಮಾಡಿಕೊಂಡವರನ್ನು ಹಿಂಬಾಲಿಸುವದೂ, ಕೆಲವರಲ್ಲಿ ಹುಟ್ಟುಗುಣವಾಗಿರುವದು. ಚನ್ನಾಗಿ ನಿರೀಕ್ಷಿಸಿದರೆ ವರ್ಗದಲ್ಲಿ ಇವೆರಡೂ ಬಗೆಯ ವಿದ್ಯಾರ್ಥಿಗಳು ಕಂಡು ಬರುವದು. ಮುಂದಾಳು ತನದ ವಿದ್ಯಾರ್ಥಿಗಳನ್ನು ಶಾಲೆಯಲ್ಲಿ ಹೊಸ ಹಾದಿಗೆ ಹಚ್ಚಬಹುದು. ಅವರು ವರ್ಗದ 'ಹಿರಿಮನಿ' 'ಮುಖ್ಯಮಂತ್ರಿ'ಯಾಗ ಬಹುದು. ಆಟದಲ್ಲಿ 'ಹಿರಿಹುದ್ದರಿ' ಯಾಗಬಹುದು. 'ಮುಂದೆ ಬೀಳುವ'– ಎಲ್ಲ ಪ್ರಸಂಗಗಳನ್ನೂ ಅವರಿಗೆ ತಂದುಕೊಡಬೇಕು. ಮುಂದಿನ ನಾಗರಿಕ ಜೀವನದಲ್ಲಿ ಅವರು ಪ್ರಭಾವಶಾಲಿಗಳಾದ ಜನನಾಯಕರಾಗಬಹುದು.

ಈ ಸಹಜ ಪ್ರವೃತ್ತಿಗಳೊಡನೆ ನಾವು ಮೂರು ವಿಧದಲ್ಲಿ ವರ್ತಿಸ ಬಹುದಾಗಿದೆ:– (೧) ಇವುಗಳಿಗೆ ತುಂಬಾ ಅಧೀನರಾಗಿನಡೆಯುವದು, (೨) ಇವುಗಳನ್ನು ಬಲಾತ್ಕಾರದಿಂದ ನಿಯಂತ್ರಿಸುವದು, (೩) ಇವುಗಳ ಸದ್ವಿನಿಯೋಗ–ಇಲ್ಲವೆ ಉಜ್ವಲೀಕರಣ. ಎಲ್ಲ ಪ್ರವೃತ್ತಿಗಳಿಗೆ ನಾವು ದಾಸರಾಗಿ ಬಿಟ್ಟರೆ, ನಾಗರೀಕತೆಯಿಂದ ದೂರವಾಗುವೆವು. ಏಕೆಂದರೆ, ಇವುಗಳಲ್ಲಿ ಕೆಲವು ಸಾಮಾಜಿಕ ಜೀವನಕ್ಕೆ ಪ್ರತಿಕೂಲವಾಗಿರುವವು. ಕಾದು ಹಾಗೂ ಯುದ್ಧ ಪ್ರವೃತ್ತಿಗಳನ್ನು ನಿರಾತಂಕವಾಗಿ ನಡೆಯಗೊಟ್ಟರೆ, ಸಾಮಾಜಿಕ ಜೀವನವೆ ಅಶಕ್ಯವಾಗುವದು. ನಮ್ಮ ನಡತೆಯು ಸ್ವೈರವರ್ತನೆಯಾಗುವದು. ಇವುಗಳನ್ನು ಬಲಾತ್ಕಾರದಿಂದ ಬಿಗಿಹಿಡಿದರೆ, ನಿಸರ್ಗದ ನಿಯಮಗಳನ್ನು ಮೀರಿ ನಡೆದಂತಾಗುವದು. ಆದುದರಿಂದ ಇವುಗಳಿಗೆ ಸರಿಯಾದ ಹಾದಿಯನ್ನು ಹಾಕಿಕೊಡುವದೆ ಹಿತಕರವಾಗಿದೆ. ವ್ಯಕ್ತಿ ಹಾಗೂ ಸಮಾಜಗಳ ಹಿತಕ್ಕೆ, ಪ್ರಗತಿ ಮತ್ತು ಸಂಸ್ಕೃತಿಗಳಿಗೆ ಪ್ರತಿಬಂಧಕರವಾಗದಂತಿದ್ದರೆ, ಈ ಪ್ರಬಲವಾದ ನೈಸರ್ಗಿಕ ಮಾನಸಿಕ ಶಕ್ತಿಗಳನ್ನು ಅನುಸರಿಸಿ ನಡೆಯುವದೆ ವಿಹಿತವಾದುದು. ಹಾನಿಕರವಾಗಿದ್ದರೆ, ಈ ಪ್ರವೃತ್ತಿಗಳನ್ನೆಲ್ಲ ಬೇರೊಂದು ಶ್ರೇಯಸ್ಕರವಾದ ಹಾದಿಗೆ ಹಚ್ಚುವದೆ ಸರಿಯಾದ ಮಾರ್ಗ. ಹೋರಾಟದ ಪ್ರವೃತ್ತಿಯನ್ನು ಸ್ಪರ್ಧೆಯಲ್ಲಿ ತೊಡಗಿಸಬೇಕು. ಕೂಡಿಹಾಕುವ ಪ್ರವೃತ್ತಿಯನ್ನು ಸಹೇತುಕವಾದ ಸದ್ವಸ್ತುಗಳ ಸಂಗ್ರಹದಲ್ಲಿ ತೊಡಗಿಸಬೇಕು. ರಚನಾ ಪ್ರವೃತ್ತಿಯಲ್ಲಿ ತಾಯಿ–ತಂದೆಗಳು ಕಿಡಿಗೇಡಿತನವನ್ನು ಕಾಣದೆ, ಅದನ್ನು ವಿಧಾಯಕ ಕೆಲಸಗಳಲ್ಲಿ ತೊಡಗಿಸಬೇಕು. ಇದಕ್ಕಾಗಿ 'ಮೆಕ್ಯಾನೊ' ಮಾದರಿಯ ಅನೇಕ ಸಲಕರಣೆಗಳು ಇಂದು ಉಪಲಬ್ಧವಾಗಿವೆ. ಅಪೇಕ್ಷಿತವಾದ ರೀತಿಯಲ್ಲಿ ಈ ಒಲವುಗಳ ಓಟವನ್ನು ತಿರುಗಿಸುವದಕ್ಕೆ 'ಉಜ್ವಲೀಕರಣ—ಉದಾತ್ತೀಕರಣ, ಇಲ್ಲವೇ— ಉನ್ನಯನ'ವೆಂದು ಹೇಳುವರು.

ಮಾನವನ ಬಹು ಮುಖವಾದ ಕಾರ್ಯಕಲಾಪಕ್ಕೆಲ್ಲ ಈ ಸಹಜಪ್ರವೃತ್ತಿಗಳೇ ಪ್ರೇರಕ ಶಕ್ತಿಗಳಾಗಿರುವವು. ಮನೋವೃತ್ತಿಯ ಸೂಕ್ಷ್ಮವಾದ ಈ ಎಳೆಗಳನ್ನು ಕಂಡು ಹಿಡಿದು, ಅವುಗಳನ್ನು ಹತ್ತಿಕ್ಕದೆ, ತೊಡಕಾಗದೆ, ಅವುಗಳಿಂದಲೆ ಸುಂದರವಾದ ಸಂಸ್ಕೃತಿಯ ಬಟ್ಟೆಯನ್ನು ನೇಯುವದು ಕುಶಲನಾದ ಶಿಕ್ಷಕನ ಕಾರ್ಯವಾಗಿದೆ.

**ಭಾವಗಳೂ, ಭಾವನೆಗಳೂ!**— ಭಾವವು ಸಹಜಪ್ರವೃತ್ತಿಯ ಮೂರು ಅಂಶಗಳಲ್ಲಿ ಒಂದಾಗಿದೆ. ಅರಿವು ಕೃತಿಗಳ ನಡುವೆ ಅದು ಜನಿಸುವದು. ಈ ಭಾವಗಳೇ ಎಲ್ಲ

ಬಗೆಯ ಕೃತಿಗಳಿಗೆ ಪ್ರೇರಕ ಶಕ್ತಿಗಳು. ಸಹಜ ಪ್ರವೃತ್ತಿಯ ಕಾರ್ಯವು ತಾತ್ಕಾಲಿಕ ಭಾವದಿಂದ ಪ್ರೇರಿತವಾದ ಕಾರ್ಯ ಸುದೀರ್ಘವಾಗಿ ಸಾಗಬಹುದು. ಮದುವೆಯ ಸಮಾರಂಭದಲ್ಲಿ ಸಣ್ಣ ಮಾತಿಗಾಗಿ ಹುಟ್ಟಿದ ಸಿಟ್ಟು ಮರಿಮಕ್ಕಳಾಗುವವರೆಗೂ ಮುಂದೆಯೂ ಉಳಿಯಬಹುದು. 'ದಾನವರಲ್ಲಿ ಹಗೆಯಾಗಿ, ಯಾದವರಲ್ಲಿ ಬಾಂಧವನಾಗಿ.........', ಹೀಗೆ ಒಂದೇ ವ್ಯಕ್ತಿಯು ಬೇರೆ ಬೇರೆ ಭಾವಗಳನ್ನು ಹುಟ್ಟಿಸಬಹುದು. ಭಾವಗಳ ಉದ್ರೇಕವೇ ಭಾವಶಕ್ತಿ. ಹೊರಗೆ ಕಾಣದ ಗಡಿಯಾಳದ ಸ್ಪ್ರಿಂಗಿದಂತೆ, ಎಲ್ಲ ಕೃತಿಗಳಿಗೂ ಇದೇ ಪ್ರೇರಕಶಕ್ತಿಯಾಗಿರುವದು. ಒಂದೊಂದು ಭಾವಕ್ಕೆ ದ್ಯೋತಕವಾದ ವಿಕಾರಗಳು ಶರೀರದಲ್ಲಿ ಕಾಣಿಸಿಕೊಳ್ಳುವವು. ಸಿಟ್ಟಿನಲ್ಲಿ ಹುಬ್ಬು ಗಂಟಿಕ್ಕುವದು.... ... ದುಃಖದಲ್ಲಿ ಕಣ್ಣೀರಿನ ಸೆಲೆಯೊಡೆಯುವದು........ ಸಂತೋಷದಲ್ಲಿ ನಗೆ ಮೂಡುವದು. ಭಯ, ಕ್ರೋಧ, ಪ್ರೀತಿ ಇವುಗಳಿಗೆ ಮೂಲಭಾವಗಳೆಂದು ಹೇಳುವರು.

ಕ್ರೋಧ :—ಶಿಕ್ಷಣ, ಸಮಾಜ ಅಭಿಪ್ರಾಯ, ಧಾರ್ಮಿಕ ಭಾವನೆ—ಈ ಮೂರು ಸಾಧನಗಳಿಂದ ಸಾಮಾಜಿಕ ಜೀವನಕ್ಕೆ ಪ್ರತಿಕೂಲವಾಗುವ ಕ್ರೋಧವನ್ನು ನಿಯಂತ್ರಿಸಬೇಕು. ಕ್ರೋಧವನ್ನು ತಡೆಗಟ್ಟುವದಕ್ಕಿಂತಲೂ ಕ್ರೋಧಜನಕವಾದ ಸಂಗತಿಗಳನ್ನು ತಪ್ಪಿಸುವದೇ ಮೇಲು, ಸತ್ ಪಕ್ಷಪಾತಿಯಾದ ಕ್ರೋಧ ಸತ್ಪರಿಣಾಮವನ್ನೂ ಮಾಡಬಲ್ಲದು. ಬೇಡನ ಕ್ರೂರ ಕೃತಿಯಿಂದ 'ಕಳವಳ'ಗೊಂಡ ವಾಲ್ಮೀಕಿ ಆದಿಕವಿಯಾದನು.

ಭಯ :—ಭಯವು ಬರುವ ಗಂಡಾಂತರವನ್ನು ತಪ್ಪಿಸಬಹುದು. ಆದರೆ ಹೆದರಿಕೆಯು ಹೆಚ್ಚಾದರೆ ವ್ಯಕ್ತಿಯ ಧೈರ್ಯವೆಲ್ಲ ಹಾರಿಹೋಗುವದು. ವಯಸ್ಸಾದಂತೆ, ಬಾಲ್ಯದ ಅನೇಕ ಭಯಗಳನ್ನು ನಾವು ಬಿಟ್ಟು ಕೊಡುವೆವು. ಸರಿಯಾದ ನಿರ್ಭಯತೆಯು ಜೀವನಕ್ಕೆ ಅಗತ್ಯವಿರುವ ಸದ್ಗುಣವಾಗಿದೆ, ಆದರೆ ಅದು ನೀತಿಗೆ ವಿರೋಧವಾಗಿರಕೂಡದು. ಪ್ರಬಲಭಾವದ ಹಿಡಿತದಲ್ಲಿ ನಮ್ಮ ಬುದ್ಧಿ ಕುಂಠಿತವಾಗಿ ಬುದ್ಧಿವಾದವು ನಿಷ್ಫಲವಾಗುವದು.

ನಾವು ಮಾಡುವ ಕೃತಿಗಳೆಲ್ಲ ವಿವಿಧ ಭಾವಗಳ ವ್ಯಕ್ತಸ್ವರೂಪಗಳು. ಆದರಿಂದ ಸದ್ಭಾವನೆಗಳನ್ನು ಹೊತ್ತಿಸುವದರ ಮೂಲಕ ಸಂಸ್ಕೃತಿಗಳನ್ನು ಸಾಧಿಸಬಹುದು. ಸಾಧುನುಡಿಗಳ ಏಳ್ಗೆಗಾಗಿ ದುಡಿಯಲು ಹೆಚ್ಚಬೇಕಾದರೆ ವಿದ್ಯಾರ್ಥಿಗಳಲ್ಲಿ ಅವುಗಳ ಬಗ್ಗೆ ಪ್ರೇಮವನ್ನು ಹೊತ್ತಿಸಬೇಕು. ಸತ್ಯಸಂಧರಾಗ ಬೇಕಿದ್ದರೆ, ಸತ್ಯಪ್ರಿಯತೆಯನ್ನು ಹೆಚ್ಚಿಸಬೇಕು. ನಿತ್ಯ ಪ್ರಾರ್ಥನೆಯಿಂದ ನೈತಿಕ ಭಾವನೆಗಳನ್ನು ಬದಲಿಸಬಹುದು. ನಿಸರ್ಗ ನಿರೀಕ್ಷಣೆ—ನಿಸರ್ಗ ಸಾಹಿತ್ಯಗಳಿಂದ ನಿಸರ್ಗ ಪ್ರೇಮವನ್ನು ಬೆಳೆಸಬಹುದು. ಆಟಗಳಿಂದ ಸೋಲು ಗೆಲವುಗಳನ್ನು ಸಮನಾಗಿ ಭಾವಿಸುವ ಆಟಗಾರಿಕೆಯ ಆನಂದ ವೃತ್ತಿಯನ್ನು ಕೆರಳಬಹುದು. ವ್ಯಕ್ತಿನಿಷ್ಠವಾದ ಭಾವಗಳಿರುವಂತೆ, ಕೆಲವು ಭಾವಗಳು ಸಂಘನಿಷ್ಠವಾಗಿರುವವು. ಸಾಂಘಿಕ ವರ್ತನೆಯೂ ವಿಚಿತ್ರವಾಗಿದೆ. ಮಾತಿನ ಕಲೆಯಿಂದ ಜನಜಂಗುಳಿಯ ಭಾವಗಳನ್ನು ಬೇಕಾದಂತೆ ಕೆರಳಿಸಬಹುದು, ಬದಲಿಸಬಹುದು.

ಚಿಕ್ಕಮಕ್ಕಳು ಹೆಚ್ಚಾಗಿ ಭಾವಜೀವಿಗಳು. ಅವರ ಭಾವಗಳನ್ನು ಹತ್ತಿಕ್ಕಲು ಯತ್ನಿಸುವದು ತಪ್ಪುದಾರಿ. ಆದರಿಂದ ಹೃದಯದ ಅಂತರಾಳದಲ್ಲಿ ಅನೇಕ 'ತೊಡಕು'ಗಳುಂಟಾಗಿ, ವ್ಯಕ್ತಿವಿಕಾಸಕ್ಕೆ ಹಾನಿಯುಂಟಾಗುವದು. ಭಾವಸಂಸ್ಕರಣವು ಸೂಕ್ತವಾದ

ಕೆಲಸ. ಅದರಲ್ಲಿ ತಾಳ-ತೂಕಗಳು ತಪ್ಪಿದರೆ, ಜೀವನವೇ ತಪ್ಪುದಾರಿಯನ್ನು ಹಿಡಿಯುವದು. ಮಲ ಶಿಕ್ಷಣದಲ್ಲಿ ಭಾವಗಳ ಸರಿಯಾದ ಸಂಸ್ಕರಣಕ್ಕೆ ಮಹತ್ವದ ಸ್ಥಾನವು ದೊರೆತಿದೆ.

ಭಿನ್ನವಾದ ಭಾವಗಳು ಕೆಲವೊಂದು ವಿಶಿಷ್ಟವಾದ ವಸ್ತುವಿನ ಇಲ್ಲವೆ ವ್ಯಕ್ತಿಯ ಸುತ್ತಲೂ ಹೆಣೆದುಕೊಳ್ಳುವವು. ಈ ಬಗೆಯ ಭಾವನೆಗಳ ಗುಂಪಿಗೆ ಭಾವನೆ (senti ment) ಭಾವಗ್ರಂಥಿಯೆಂದು ಹೇಳಬಹುದು. ಮಾನಸ ಶಾಸ್ತ್ರದಲ್ಲಿ ಭಾವನೆಯೆಂದರೆ ಪೂರ್ವಗ್ರಹಿಕೆಯಾಗಿಲ್ಲ, ವ್ಯಕ್ತಿ ವಿಶಿಷ್ಟವಾದ ಭಾವ ಗ್ರಂಥಿಯು ಮಾತ್ರ. ಭಾವಗಳ ಈ ಗ್ರಥನವು ಅನೇಕ ಅನುಭವಗಳಿಂದ ಸಾಗುವದು. ಮನಸ್ಸನ್ನು ಸೆಳೆದ ವಸ್ತುವಿನಲ್ಲಿ ಅನುರಾಗ, ಅನುರಾಗ ಬೆಳೆದು ಆಸಕ್ತಿ, ಆಸಕ್ತಿ ಆದರವಾಗಿ ಪರಿಣಮಿಸಬಹುದು. ವ್ಯಕ್ತಿ ಭಾವನೆಯು ವಸ್ತುವಿನ ಬಗ್ಗೆ ಅತ್ಯಂತ ಆತ್ಮೀಯತೆ ಎನಿಸುವದು. ಪಾಸಾದ ಪರೀಕ್ಷೆಯಲ್ಲಿ ಉಪಯೋಗಿಸಿದ ಟಾಕು, ಮದುವೆಯ ಕೋಟು ಒಳ್ಳೇ ಆತ್ಮೀಯ ವಸ್ತುಗಳಾಗುವವು.

ವಸ್ತುವಿನಿಂದ ವಿಚಾರಕ್ಕೆ, ಆಮೇಲೆ ಆದರ್ಶಕ್ಕೆ ಹಬ್ಬುವದು ಭಾವನೆಗಳ ಮುಂದಿನ ಹೆಜ್ಜೆ. ಇಂಥ ಭಾವನೆಗಳು ಹೆಚ್ಚು ಉಜ್ವಲವಾದವುಗಳು. ಸದ್ಗುಣಗಳನ್ನು ಶೀಲರೂಪವಾಗಿ ಕಟ್ಟುವ ಕಾರ್ಯದಲ್ಲಿ ಈ ಬಗೆಯ ಭಾವನೆಗಳನ್ನೇ ನಾವು ಹೆಚ್ಚಾಗಿ ಬಳಸಬೇಕಾಗುವದು. ನೀತಿ ತತ್ವವು ಕೃತಿಯಾಗಿ ಪರಿಣಮಿಸಬೇಕಾದರೆ, ಅದಕ್ಕೆ ಆದರ್ಶ ಭಾವನೆಗಳ ಪ್ರೇರಕಶಕ್ತಿ ಬೇಕು. ಸತ್ಯಪ್ರೇಮದ ಭಾವನೆ ಬಲಶಾಲಿಯಾಗಿದ್ದರೆ, ಸತ್ಯದ ಆಚರಣೆಯು ಸುಗಮವಾಗುವದು.

ಸ್ವಾತ್ಮ ಭಾವನೆ :— ವ್ಯಕ್ತಿಯು ತನ್ನ ಬಗ್ಗೆ ಒಂದು ಕಲ್ಪನೆಯನ್ನು ತಾನಾಗಿಯೆ ಕಟ್ಟಿಕೊಳ್ಳುವನು. ಅದಕ್ಕೆ ಅನೇಕ ಭಾವನೆಗಳನ್ನು ಹೊಂದಿಸಿ ಕೊಳ್ಳುವನು. ಇವುಗಳಲ್ಲಿ ತನ್ನ ವಿಷಯಕ್ಕೆ ಅಭಿಮಾನ ಒಂದಾದರೆ ತನ್ನ ನ್ಯೂನತೆಗಳ ಬಗ್ಗೆ ಹೀನತೆ ಎರಡನೆಯದು. ಈ ಕಲ್ಪನೆ ಆತನು ನಡತೆಯನ್ನು ನಿಯಂತ್ರಿಸುವದು.. ತಾನು ಪ್ರಾಮಾಣಿಕನೆಂದು ಬಲವಾದ ಭಾವನೆಯುಳ್ಳ ಬಾಲಕನು ಅಪ್ರಾಮಾಣಿಕತನದ ಕೆಲಸದಲ್ಲಿ ಸಹಸಾ ತೊಡಗಲಾರನು. ತಾನು ಹೇಡಿ—ಎಂಬ ಭಾವನೆಯುಳ್ಳ ಬಾಲಕನು ಹಿಂದೆಯೆ ಉಳಿಯುವನು. ಮಕ್ಕಳನ್ನು 'ಹೇಡಿ, ಕಿಡಗೇಡಿ' ಎಂದು ಹೀಯಾಳಿಸುವದು ಅವರಿಗೆ ಅತ್ಯಂತ ಹಾನಿಯನ್ನುಂಟುಮಾಡುವದು. ಇದಕ್ಕೆ ಪ್ರತಿಯಾಗಿ ಅವರಲ್ಲಿ ಸ್ವಾಭಿಮಾನವನ್ನು ಹುಟ್ಟಿಸುವದು ಸರಿಯಾದ ಮಾರ್ಗವಾಗಿದೆ. ಎಡರುಗಳಿಗೆ ಬಾಗದ ಕ್ರಿಯಾಶಕ್ತಿಯು 'ಇಚ್ಛಾಶಕ್ತಿ' (Will) ಯೆನಿಸುವದು. ಜೀವನದಲ್ಲಿ ಇದರ ಪ್ರಭಾವವನ್ನು ಎಲ್ಲರೂ ಒಪ್ಪುವರು. ಸರಿಯಾದ ಆತ್ಮ ಭಾವನೆ ಹಾಗೂ ಉಜ್ವಲವಾದ ಇಚ್ಛಾಶಕ್ತಿಗಳನ್ನು ಬೆಳಸಿ, ಕೀಳು ಭಾವನೆಗಳು ಮಕ್ಕಳ ನೈತಿಕ ಜೀವನಕ್ಕೆ ಆತಂಕವಾಗದಂತೆ ನೋಡಿಕೊಳ್ಳಬೇಕು.

(ಡ) ಬುದ್ಧಿಶಕ್ತಿ, ವೈಯಕ್ತಿಕ ವ್ಯತ್ಯಾಸಗಳು :— 'ಒಂದು ಮಗು ವಿನಂತೆ ಮತ್ತೊಂದು ಮಗು ವಿರುವದಿಲ್ಲ'— ಎಂಬುದು ನೂತನ ಶಿಕ್ಷಣಕ್ಕೆ ಮಾರ್ಗದರ್ಶಕವಾದ ತತ್ವಗಳಲ್ಲಿ ಒಂದಾಗಿದೆ. ಈ ವ್ಯತ್ಯಾಸವು ಕೇವಲ ಶಾರೀರಿಕವಾಗಿಲ್ಲ. ಬುದ್ಧಿಶಕ್ತಿಯಲ್ಲಿಯೂ ಇದು ಕಂಡುಬರುವದು.

(i) ಜೀವನದಲ್ಲಿ ಬರುವ ಅಪರಿಚಿತ ಸನ್ನಿವೇಶಗಳಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ತೋರಿಸಿಕೊಡುವ ಶಕ್ತಿ; (ii) ಅಜ್ಞಾತವಾದುದನ್ನು ತಿಳಿದುಕೊಳ್ಳುವ ಶಕ್ತಿ; (iii) ರೂಢವಾದ ಜೀವನದ ರೀತಿಗಳನ್ನು ಪರಿಸ್ಥಿತಿಗನುಣವಾಗಿ ಬದಲಿಸಿಕೊಳ್ಳುವ ಶಕ್ತಿ;— ಹೀಗೆ ಬುದ್ಧಿಶಕ್ತಿಯು ಮೂರುತೆರನಾಗಿ ಪ್ರಕಟವಾಗುವದೆಂದು ಹೇಳುವರು.

ಬುದ್ಧಿ ಶಕ್ತಿಯು ಜ್ಞಾನಕ್ಕಿಂತಲೂ ಹಿರಿದಾದುದು; ಜ್ಞಾನದೊಡನೆ ಅದು ನಿಕಟವಾಗಿ ಬೆರೆತುಕೊಂಡಿರುವದು. ಅಂತೆಯೆ ಬುದ್ಧಿಯನ್ನು ಅಳೆಯುವಾಗ್ಗೆ ಜ್ಞಾನದ ಅಳತೆಗೋಲನ್ನೇ ಅನಿವಾರ್ಯವಾಗಿ ಉಪಯೋಗಿಸುವರು. ಬಿನೆಟ್‌ಯೆಂಬ ವಿಜ್ಞಾನಿಯೂ ಇದೇ ರೀತಿಯನ್ನೇ ಅನುಸರಿಸಿರುವನು. ಸರಿಯಾಗಿ ಬೆಳೆದ ನಿರೋಗಿಯಾದ ಮಗು ನಿರ್ದಿಷ್ಟ ಮಯಸ್ಸಿನ ಇಂತಿಷ್ಟು ವಿಷಯ ಜ್ಞಾನ ಪಡೆದಿರಬೇಕು. ಇದನ್ನು ಪಡೆದ ಸಮಾನ ವಯಸ್ಸಿನಲ್ಲಿ ಮಕ್ಕಳಲ್ಲಿ ಬುದ್ಧಿಶಕ್ತಿಯ ಪ್ರಮಾಣವೂ ಸಮಾನವಾಗಿರುವದು. ಈ ಜ್ಞಾನದ ಪ್ರಮಾಣಕ್ಕನುಗುಣವಾಗಿ ಬುದ್ಧಿಶಕ್ತಿಯ ಪ್ರಮಾಣದಲ್ಲಿಯೂ ಹೆಚ್ಚು ಕಡಿಮೆಯಿರುವದು. ವಿಶಿಷ್ಟ ಕಾರ್ಯಕ್ಕಾಗಿ ವಿಶಿಷ್ಟ ಬುದ್ಧಿ ಶಕ್ತಿಯಿರುವದೆಂತಲೂ, ಎಲ್ಲ ಕಾರ್ಯಗಳಿಗೂ ಒಂದೇ ಬುದ್ಧಿಶಕ್ತಿಯಿರುವದೆಂತಲೂ, ಇಲ್ಲವೆ ಒಂದೇ ಬುದ್ಧಿ ಶಕ್ತಿಗೆ ವಿವಿಧ ಶಾಖೆಗಳಿರುವವೆಂದೂ ಮನೋವಿಜ್ಞಾನಿಗಳಲ್ಲಿ ಮತಭೇಧವಿರುವದು. ಒಂದು ಮಾತನ್ನು ಎಲ್ಲರು ಒಪ್ಪುವರು—ಈ ಬುದ್ಧಿಶಕ್ತಿಗೆ 'ಉಪಜತ'ವಾದುದು, ಇಂತಿಷ್ಟು ಪ್ರಮಾಣದ ಬುದ್ಧಿಶಕ್ತಿಯನ್ನು ತನ್ನೊಡನೆ ತೆಗೆದುಕೊಂಡೇ ಮಗು ಜನಿಸುದದು. ಇದು ಆಮರಣ ಕಡಿಮೆಯಾಗುವದಿಲ್ಲ, ಇಲ್ಲವೆ ಅನುಭವ–ಶಿಕ್ಷಣಗಳಿಂದ ಹೆಚ್ಚಿಸಲೂ ಬರುವದಿಲ್ಲ. ಬುದ್ಧಿಶಕ್ತಿಯ ಪ್ರಮಾಣದ ಮೇರೆಗೆ 'ಬೌದ್ಧಿಕ ವಯೋಮಾನ'ವನ್ನು ಕಲ್ಪಿಸಿರುವರು.

ಮಗುವಿನ ನಿಜವಾದ ವಯಸ್ಸು ಬೇರೆಯಾಗಿರ ಬಹುದು. ಬುದ್ಧಿಶಕ್ತಿಯ ಪ್ರಮಾಣದ ಮೇರೆಗೆ ಆತನ ಬೌದ್ಧಿಕ ವಯಸ್ಸು ಇದರಿಂದ ಭಿನ್ನವಾಗಿರಬಹುದು. ಸಮಾನ ವಯಸ್ಸಿನ ಎಲ್ಲ ಮಕ್ಕಳು ಬೌದ್ಧಿಕವಾಗಿ ಒಂದೇ ವಯೋಮಾನದವರೆಂದು ಹೇಳಲು ಬಾರದು. ಬುದ್ಧಿಶಕ್ತಿಯು ೧೩–೧೬ ನೆಯ ವಯಸ್ಸಿಗೆ ತನ್ನ ಪರಾಕಾಷ್ಠೆಯನ್ನು ಮುಟ್ಟುವದು. ಮಗುವಿನ ಬುದ್ಧಿಶಕ್ತಿಯನ್ನು ಅಳೆಯುವದಕ್ಕೆ ಆತನ ಜ್ಞಾನವನ್ನು ಪರೀಕ್ಷಿಸುವರು. ಈ ಪರೀಕ್ಷೆಗಾಗಿ ಬಿನೆಟ್ ಮುಂತಾದ ವಿಜ್ಞಾನಿಗಳು ಪ್ರಶ್ನಾವಳಿಗಳನ್ನು ರಚಿಸಿರುವರು. ನಮ್ಮಲ್ಲಿಯೂ ಕೆಲವು ಶಿಕ್ಷಣ ತಜ್ಞರು ಈ ದೇಶದ ಮಕ್ಕಳಿಗೆ ಅನುಗುಣವಾದ ಪ್ರಶ್ನಾವಳಿಗಳನ್ನು ರಚಿಸಿರುವರು. ಈ ಪರೀಕ್ಷೆಯಲ್ಲಿ ವಯೋನುಗುಣವಾದ ಪ್ರಶ್ನೆಗಳಿರುವವು. ಅವುಗಳಿಗೆ ದೊರೆತ ಉತ್ತರಗಳ ಮಾನದಿಂದ ಬೌದ್ಧಿಕ ವಯೋಮಾನವನ್ನು ಗೊತ್ತುಪಡಿಸುವರು. ಐದುವರುಷದ ಮಗುವಿಗಾಗಿ ಹತ್ತು ಪ್ರಶ್ನೆಗಳಿರುವವೆಂದು ತಿಳಿಯುವಾ. ಈ ಹತ್ತೂ ಪ್ರಶ್ನೆಗಳಿಗೆ ಮಗು ಸರಿಯಾದ ಉತ್ತರ ಬರೆದರೆ, ಆತನ ನಿಜವಾದ ವಯಸ್ಸೂ ಐದು, ಬೌದ್ಧಿಕವಯಸ್ಸೂ ಐದು. ಅದೇ ಮಗು ಆರುಪ್ರಶ್ನೆಗಳನ್ನು ಮಾತ್ರಸರಿಯಾಗಿ ಉತ್ತರಿಸಿದರೆ, ಆತನ ಬೌದ್ಧಿಕ ವಯಸ್ಸು ಮೂರೇ ಆಗುವದು. ಅದನ್ನು ಶತಮಾನದಲ್ಲಿ ಹೇಳಲು ಅನುಕೂಲವಾಗುವಂತೆ ಬೌದ್ಧಿಕ ವಯಸ್ಸನ್ನು ನಿಜವಾದ ವಯಸ್ಸಿನಿಂದ ಭಾಗಿಸಿ

ಅದಕ್ಕೆ ನೂರರಿಂದ ಬರುವ ಭಾಗಲಬ್ಧವೆ ಆ ಮಗುವಿನ 'ಬುದ್ಧಿ ಮಾಪಕ' ವೆನಿಸುವದು. ಈ ವಿಧಾನವನ್ನು ಉಪಯೋಗಿಸುವ ಪೂರ್ವದಲ್ಲಿ, ಮುಖಚರ್ಯೆಯನ್ನು ಪರೀಕ್ಷಿಸಿ, ಇಲ್ಲವೆ ತಲೆಬುರುಡೆಯನ್ನು ಅಳೆದು ನೋಡಿ, ಇಲ್ಲವೆ ಇಂದ್ರಿಯಗಳ ಕಾರ್ಯಶಕ್ತಿಯಿಂದ ಬುದ್ಧಿ ಶಕ್ತಿಯ ಪ್ರಮಾಣವನ್ನು ಗೊತ್ತುಪಡಿಸುತ್ತಿದ್ದರು. ನಿಜವಾದ ಹಾಗೂ ಬೌದ್ಧಿಕ ವಯೋಮಾನಗಳ ನಡುವಿನ ಪ್ರಮಾಣವು ಆಮರಣ ಒಂದೇ ವಿಧವಾಗಿ ಉಳಿಯುವದು. ಟರ್ಮನ್ ಎಂಬವನು ಬುದ್ಧಿ ಮಾಪಕದ ಮೇರೆಗೆ ಕೆಳಗಿನಂತೆ ವ್ಯಕ್ತಿಗಳವರ್ಗೀಕರಣ ಮಾಡಿರುವನು:

| ಬುದ್ಧಿ ಮಾಪಕ | ಬುದ್ಧಿ ಶಕ್ತಿ |
|---|---|
| ೧೪೦ ಅಥವಾ ಅದಕ್ಕೂ ಹೆಚ್ಚು | ಪ್ರತಿಭಾಶಾಲಿ |
| ೧೨೦ ರಿಂದ ೧೪೦ | ಅತ್ಯಂತ ಶ್ರೇಷ್ಠವಾದ ಬುದ್ಧಿಶಕ್ತಿ |
| ೧೧೦—೧೨೦ | ಶ್ರೇಷ್ಠವಾದ ಬುದ್ಧಿಶಕ್ತಿ. |
| ೯೦—೧೧೦ | ಸರಾಸರಿ ಬುದ್ಧಿಶಕ್ತಿ |
| ೮೦— ೯೦ | ಮಂದಬುದ್ಧಿ. |
| ೭೦— ೮೦, | ಬುದ್ಧಿಯ ನ್ಯೂನತೆ. |
| ೫೦— ೭೦, | ದುರ್ಬಲ ಬುದ್ಧಿ |
| ೨೫— ೫೦, | ಬುದ್ಧಿ ಹೀನತೆ. |
| ೨೫— ಕ್ಕಿಂತಲೂ ಕಡಿಮೆ, | ಮಂಕುಬುದ್ಧಿ |

ನೈಸರ್ಗಿಕವಾದ ಬುದ್ಧಿಶಕ್ತಿಯ ಹೆಚ್ಚುಕಡಿಮೆಗಳನ್ನು ತೋರಿಸಿಕೊಟ್ಟು ಇಂದಿನ ಪ್ರಾಯೋಗಿಕ ಮಾನಸಶಾಸ್ತ್ರವು ಶಿಕ್ಷಣಕ್ಕೆ ಬಹಳೇ ಸಹಾಯ ಮಾಡಿದೆ. ಹಿಂದಿನ ಶಿಕ್ಷಣ ಕ್ರಮವು ತಪ್ಪುದಾರಿಯನ್ನು ಹಿಡಿದು ಸಫಲತೆ ಪಡೆಯುತ್ತಿರಲಿಲ್ಲ. ಶಿಕ್ಷಕರಿಗೂ ಆಯಾಸ ವಾಗುತ್ತಿತ್ತು. ಎತ್ತು, ಕೋಣಗಳನ್ನು ಒಂದೇ ರಥಕ್ಕೆ ಹೂಡುವಂತೆ, ಭಿನ್ನ ಶಕ್ತಿಯ, ಭಿನ್ನ ಒಲವಿನ ಮಕ್ಕಳನ್ನು ಒಂದೇ ಪಡಿಯಚ್ಚಿನ ಶಿಕ್ಷಣದಲ್ಲಿ, ಒಂದೇ ವೇಗದಿಂದ ಎಳೆದುಕೊಂಡು ಹೋಗಲು ಅವರ ಸಾಹಸವಾಗಿತ್ತು. ಇಂದಿನ ಶಿಕ್ಷಣವು ಈ ತಪ್ಪನ್ನು ತಿದ್ದಿಕೊಳ್ಳುತ್ತಿದೆ. ಸಮಾನ ಬೌದ್ಧಿಕ ವಯೋಮಾನದ ಮೇರೆಗೆ ವರ್ಗಗಳನ್ನು ರಚಿಸುವ ಯೋಜನೆಯಾಗಿದೆ. ಡಾಲ್ಟನ್ ಮುಂತಾದ ಪದ್ಧತಿಗಳು ಈ ಹಿಂದಿನ ದೋಷವನ್ನು ತೆಗೆದುಹಾಕಲು ಮಾಡಿದ ಪ್ರಯೋಗಗಳಾಗಿವೆ. ವೃತ್ತಿ ಶಿಕ್ಷಣದ ಮಾರ್ಗದರ್ಶನ ದಲ್ಲಿಯೂ ಬುದ್ಧಿಮಾಪಕದ ಪ್ರಯೋಜನ ಪಡೆಯುವರು.

**ವೈಯಕ್ತಿಕ ವ್ಯತ್ಯಾಸಗಳು :—** ಪ್ರತಿಯೊಂದು ಮಗುವಿಗೂ ತನ್ನದೇ ಆದ ಸ್ವಭಾವವಿದೆ, ವ್ಯಕ್ತಿತ್ವವಿದೆ. ಮಗು–ಮಗುವಿನಲ್ಲಿ ನೆಲೆಸಿರುವ ಈ ವ್ಯತ್ಯಾಸವು ಬಹು ಮುಖವಾಗಿದೆ. ಮಕ್ಕಳ ಮೈಕಟ್ಟು, ಬಣ್ಣ, ನಿಲುವಿಕೆ, ಆರೋಗ್ಯ ಇವುಗಳಲ್ಲಿಯ ವ್ಯತ್ಯಾ ಸವು ಒಡೆದು ತೋರುವದು. ಕೆಲವು ಮಕ್ಕಳು ಮಾತನಾಡುವದನ್ನು, ನಡೆಯುವದನ್ನು

ಶೀಘ್ರ ಪ್ರಾರಂಭಿಸುವರು; ಕೆಲವರು ತುಸು ವಿಳಂಬವಾಗಿ. ಈ ಶಾರೀರಿಕ ವ್ಯತ್ಯಾಸಗಳು ಸ್ಥೂಲವಾದವುಗಳು, ಹೊರಗಿನಿಂದಲೆ ಕಾಣತಕ್ಕವುಗಳು.

ಮಾನಸಿಕ, ಬೌದ್ಧಿಕ ಹಾಗೂ ಭಾವನಾತ್ಮಕ ವ್ಯತ್ಯಾಸಗಳು ಪ್ರತಿಯೊಂದು ಮಗುವಿನ 'ಸ್ವ'–ಭಾವದಲ್ಲಿ ಅಡಗಿರುವವು, ಅಹಕವಾಗಿರುವವು. ಅನುಭವ ಹಾಗೂ ಅವಲೋಕನೆಗಳಿಂದ ಇವುಗಳನ್ನು ಕಂಡುಹಿಡಿಯಬೇಕಾಗುವದು. ಸಹಜಪ್ರವೃತ್ತಿಯ ಕಾರ್ಯಶಕ್ತಿಗಳಲ್ಲಿ ಮಾನಸಿಕ ವ್ಯತ್ಯಾಸವು ಮೊದಲು ಕಾಣಿಸಿಕೊಳ್ಳುವದು. ಕೆಲವು ಮಕ್ಕಳಲ್ಲಿ ಕುತೂಹಲ ಪ್ರವೃತ್ತಿ–ಜಿಜ್ಞಾಸೆ–ಪ್ರಬಲವಾಗಿರುವದು. ಮೈತುಂಬ ಕಣ್ಣುಗಳಿದ್ದಂತೆ, ಅವರಿಗೆ ಎಲ್ಲವೂ ಕಾಣುವದು. ಯಾಕೆ?—ಹೇಗೆ?—ಎಂದು ನೂರಾರು ಪ್ರಶ್ನೆಗಳ ಸುರಿಮಳೆಯನ್ನೇ ಅವರು ಮಾಡುವರು. ಕೆಲವು ಮಕ್ಕಳಲ್ಲಿ ಇದು ಕಡಿಮೆಯಾಗುವದು. ಕ್ರಿಯಾಶಕ್ತಿ, ಸಂಗ್ರಹ–ಮುಂತಾದ ಇನ್ನುಳಿದ ಸಹಜ ಪ್ರವೃತ್ತಿಗಳಾದರೂ ಎಲ್ಲ ಮಕ್ಕಳಲ್ಲಿ ಒಂದೇಸಮನಾಗಿ ಇರುವದಿಲ್ಲ. ಇದಲ್ಲದೆ, ಅವುಗಳು ಕಾಣಿಸಿಕೊಳ್ಳುವ ಸಮಯವೂ ಹಿಂದು ಮುಂದೆಯಾಗಿರುವದು ಕಂಡುಬರುವದು. ಸೂಕ್ಷ್ಮ ನಿರೀಕ್ಷಣೆಯಿಂದ ಈ ಕಾಲವನ್ನು ಕಂಡುಹಿಡಿಯಬೇಕು. ಇಲ್ಲವಾದರೆ, 'ತತಿ' ತಪ್ಪಿಸಿ ಬಿತ್ತಿದ ಬೆಳೆಯಂತೆ, ವಯಸ್ಸಾದ ಮೇಲೆ ಸಂಗೀತ ಕಲಿಯುವ ಹುಚ್ಚು ಸಾಹಸದಂತೆ, ಆತನ ಶ್ರಮವೆಲ್ಲವೂ ನಿರರ್ಥಕವಾಗುವದು.

ಊಹೆ, ಸ್ಮರಣ, ಕಲ್ಪನೆ, ಮುಂತಾದ ಮಾನಸಿಕ ಶಕ್ತಿಗಳಲ್ಲಿಯೂ ಚಿಕ್ಕಮಕ್ಕಳಲ್ಲಿ ವ್ಯತ್ಯಾಸವಿರುವದು. ಕೆಲವು ಮಕ್ಕಳಲ್ಲಿ 'ಮುನ್ನೋಟ' ಹೆಚ್ಚು. ಹೀಗಿದ್ದರೆ, ಹೀಗಾಗಬಹುದೆಂಬದನ್ನು ಅವರು ಕೂಡಲೆ ತರ್ಕಿಸುವರು. ಕೆಲ ಮಕ್ಕಳಲ್ಲಿ ಸ್ಮರಣ-ಶಕ್ತಿಯು ಪ್ರಭಾವಶಾಲಿಯಾಗಿರುವದು. ಕೆಲವರು ಬೇಗನೆ ಪಾಠ ಮಾಡುವರು, ಬೇಗನೆ ಮರೆತು ಬಿಡುವರು. ಕೆಲವರಲ್ಲಿ ಕಲ್ಪನೆಯ ವೇಗ ಹೆಚ್ಚು. ಕಥೆ ಹೇಳುವಾಗ್ಗೆ ಇದನ್ನು ಕೂಡಲೆ ಗುರುತಿಸಬಹುದು. ಕೆಲವರಲ್ಲಿ ಹೊಗಳಿಕೆಯಿಂದ ಕಾರ್ಯ ಪ್ರವೃತ್ತಿಯನ್ನು ಹುಟ್ಟಿಸಬಹುದು. ಕೆಲವರು ಉತ್ಸಾಹಿಗಳು, ಸದಾ ನಗುಮೋರೆ. ಕೆಲವರು ನಿರುತ್ಸಾಹಿಗಳು, ಸದಾ ಜೋಲು ಮೋರೆ. ಕೆಲವರ ಆಸ್ಥೆ ಅವಧಾನಗಳು ಕೇಂದ್ರಿಕೃತವಾದವು. ಇವರು ತಿಳಿದುಕೊಳ್ಳುವ ವಿಷಯದ ಹರವು ಕಿರಿದು; ಆದರೆ ಜ್ಞಾನದ ಆಳ ಹೆಚ್ಚು. ಕೆಲವರ ಆಸ್ಥೆ–ಅವಧಾನಗಳು ವಿಕೇಂದ್ರಿಕೃತವಾದವು. ಅನೇಕ ವಿಷಯಗಳಲ್ಲ ಇವರ ಮನಸ್ಸು ಹರಿಯುವದು, ಆದರೆ ಇಂಗ್ಲೀಷಿನಲ್ಲಿ ಹೇಳುವಂತೆ— Jack of all trades, but master of none–, ಯಾವ ವಿಷಯದಲ್ಲಿಯೂ ಸಾಕಷ್ಟು ಜ್ಞಾನ ಇವರಿಗಿರುವದಿಲ್ಲ. 'ಕಿವಿಯಲ್ಲಿ ಗಾಳಿತುಂಬಿದ ಕರುವಿನಂತೆ' ಕೆಲವರು ತುಂಬಾ ಚಂಚಲ ವೃತ್ತಿಯವರು; ಕೆಲವರು ಸ್ಥಿರ ಚಿತ್ತವುಳ್ಳವರು ಕೆಲವರಿಗೆ ಜ್ಞಾನದ ವಸ್ತುವು ಇದ್ದಕ್ಕಿದಂತೆ ಕಾಣುವದಿಲ್ಲ. ಸ್ವಾನುಭವದ ಬಣ್ಣದ ಕಾಜಿನಿಂದ ಅವರು ಅದನ್ನು ಕಾಣುವರು. ತಮ್ಮ ಭಾವನೆಯ ಬಣ್ಣವನ್ನೇ ಅದಕ್ಕೆ ಬಳೆಯುವರು, 'ಅಂತರ್ಮುಖಿ'ರಾದವರು. ಇದಕ್ಕೆ ವಿಪರೀತವಾದ ಮನೋವೃತ್ತಿಯುಳ್ಳವರು 'ಬಹಿರ್ಮುಖಿ' ರು. ಇವರಿಗೆ ವಸ್ತು ಮನಸ್ಸಿನ ಯಾವ ಉಪಾಧಿಗೂ ಒಳಗಾಗದೆ ಇದ್ದಕ್ಕಿದಂತೆ ತೋರುವದು. ಬಹಿರ್ಮುಖರಾದ ಜನರು ಲೌಕಿಕ

ವ್ಯವಹಾರದಲ್ಲಿ ಹೆಚ್ಚುಯಶಸ್ವಿಯಾಗಬಹುದು. ಪಾಶ್ಚಾತ್ಯರು ಸಾಧಿಸಿದ ಪ್ರಗತಿಗೆ ಉದಾಹರಣೆಯಾಗಿದೆ. ಭಾರತೀಯರು ಅಂತರ್ಮುಖರು. ಅಧ್ಯಾತ್ಮಸಾಧನೆಯಲ್ಲಿ ಅವರಿಗೆ ಹೆಚ್ಚು ಶ್ರದ್ಧೆ. ಅಂತರ್ಮುಖಿ, ಬಹಿರ್ಮುಖರಿಬ್ಬರಿಗೂ ಜೀವನದ ಯೋಜನೆಯಲ್ಲಿ ಸ್ಥಾನವಿದೆ, ಕಾರ್ಯವಿದೆ. ನಿಸರ್ಗದ ಯಾವ ವಿಭಾಗಗಳೂ ತೀರ ವಿರುದ್ಧವಾಗಿರುವದಿಲ್ಲ, ತುದಿಯಂಚಿನಲ್ಲಿ ಅವು ಒಂದಕ್ಕೊಂದು ಬೆರೆತು ಕೊಂಡಿರುವವು.

## ಅಭ್ಯಸನಗಳು

೧. 'ಪ್ರತ್ಯಕ್ಷಾನುಭವ'ದಲ್ಲಿ ಯಾವ ಅಂಶಗಳಿವೆ? ಶಿಕ್ಷಣದಲ್ಲಿ ಅದರ ಉಪಯೋಗವೇನು?

೨. 'ಇಂದ್ರಿಯಗಳ ಶಕ್ತಿ ವ್ಯತ್ಯಾಸದಿಂದ ವ್ಯಕ್ತಿ ವ್ಯಕ್ತಿಗೂ ಜಗತ್ತು ಬೇರೆಯಾಗುವದು'—ಹೇಗೆ?

೩. ಆಸ್ಥೆ–ಅವಧಾನಗಳು ಅವಳಿಜವಳಿಗಳಿದ್ದಂತೆ'—ಹೇಗೆ? ಆಸ್ಥೆಯನ್ನು ಹುಟ್ಟಿಸಲು ಶಿಕ್ಷಣದಲ್ಲಿ ಸಾಧನಗಳು ಯಾವು?

೪. ಸ್ಮರಣ ಶಕ್ತಿಯ ಮೂರು ಮೆಟ್ಟಲುಗಳು ಯಾವು?—ಅವುಗಳಲ್ಲಿ ಯಾವುದು ಹೆಚ್ಚು ಮಹತ್ವದ್ದಾಗಿದೆ?

೫. ಸ್ಮರಣಶಕ್ತಿಗೆ ಸಹಾಯಕವೆನಿಸುವ ವಿಧಾನಗಳು ಯಾವವು?

೬. 'ಮರೆವು ಮನಸ್ಸಿನ ಒಂದು ದುರ್ಬಲತೆಯಲ್ಲ'—ಹೇಗೆ?

೭. 'ಕಲ್ಪನೆ'ಯೆಂದರೇನು? ಮಕ್ಕಳ ಹಿತಕ್ಕಾಗಿ ಅದನ್ನು ಹೇಗೆ ಬಳಸಿಕೊಳ್ಳಬಹುದು?

೮. ಭಾವನಾತ್ಮಕ ಕಲ್ಪನೆ, ಕ್ರೀಡಾತ್ಮಕ ಕಲ್ಪನೆ, ಹಗಲುಗನಸು,—ಟಿಪ್ಪಣಿ ಬರೆಯಿರಿ.

೯. ಸಹಜ ಪ್ರವೃತ್ತಿಯ ಲಕ್ಷಣಗಳೇನು? ಪ್ರತಿಕ್ಷಿಪ್ತಕ್ರಿಯೆಗಳಿಗೂ ಅದಕ್ಕೂ ಇರುವ ಅಂತರವೇನು?

೧೦. ಸಹಜ ಪ್ರವೃತ್ತಿಯಲ್ಲಿರುವ ಮೂರು ಅಂಶಗಳು ಯಾವವು?

೧೧. ಮಕ್ಕಳ ಶಿಕ್ಷಣದಲ್ಲಿ ಹೆಚ್ಚಾಗಿ ಬಳಸಬಹುದಾದ ಪ್ರವೃತ್ತಿಗಳು ಯಾವವು? ಹೇಗೆ? ಎಂಬುದನ್ನು ವಿವರಿಸಿರಿ.

೧೨. ಸಾಮಾಜಿಕ ಜೀವನಕ್ಕೆ ಪ್ರತಿಕೂಲವಾಗಿರುವ ಪ್ರವೃತ್ತಿಗಳು ಯಾವವು? ಅವುಗಳನ್ನು ಒಳ್ಳೆ ಹಾದಿಗೆ ಹೇಗೆ ಹಚ್ಚಬಹುದು?

೧೩. ಸದ್ವರ್ತನೆ, ಶೀಲ ನಿರ್ಮಾಣಕ್ಕಾಗಿ ಯಾವ ಪ್ರವೃತ್ತಿಯು ಉಪಯುಕ್ತವಾಗಿದೆ? ಹೇಗೆ?

೧೪. ಮುಂದಾಳುತನದ ಪ್ರವೃತ್ತಿಯನ್ನು ಹಿತಕರವಾಗುವಂತೆ ಹೇಗೆ ಉಪಯೋಗಿಸಿಕೊಳ್ಳಬಹುದು?

೧೫. 'ಸಹಜ ಪ್ರವೃತ್ತಿಗಳನ್ನು ಬಲಾತ್ಕಾರದಿಂದ ಹತ್ತಿಕ್ಕುವದು ಯೋಗ್ಯವಲ್ಲ; ಏಕೆ? ಉದಾಹರಣೆಗಳಿಂದ ವಿವರಿಸಿರಿ.

೧೬. ಭಾವ–ಭಾವನೆ, ಇವುಗಳಲ್ಲಿ ವ್ಯತ್ಯಾಸವೇನು? ಸ್ವಾತ್ಮ ಭಾವನೆಯನ್ನು ಶೀಲ ಸಂವರ್ಧನೆಗಾಗಿ ಹೇಗೆ ಬಳಸಿಕೊಳ್ಳಬಹುದು?

೧೭. ಕ್ರೋಧ–ಭಯ, ಈ ಭಾವನೆಗಳನ್ನು ಸರಿಯಾದ ಹಾದಿಗೆ ಹೇಗೆ ಹಚ್ಚಬೇಕು?

೧೮. ಬುದ್ಧಿಶಕ್ತಿಯು ಎಷ್ಟು ವಿಧವಾಗಿ ಪ್ರಕಟಗೊಳ್ಳುವುದು? ಅದನ್ನು ಹೇಗೆ ಅಳೆಯುವರು?

೧೯. ಶಿಕ್ಷಣದಲ್ಲಿ ಬುದ್ಧಿ ಮಾಪನದ ಪ್ರಯೋಜನವೇನು?

೨೦. 'ಒಂದು ಮಗುವಿನಂತೆ ಮತ್ತೊಂದು ಮಗು ಇರುವದಿಲ್ಲ'— ವಿವರಿಸಿರಿ.
೨೧. ಅಂತರ್ಮುಖ, ಬಹಿರ್ಮುಖ ವ್ಯಕ್ತಿಗಳು— ಟಿಪ್ಪಣಿ ಬರೆಯಿರಿ.

---

## ೩. ಆನುವಂಶಿಕತೆ-ಪರಿಸ್ಥಿತಿ

'ಮಾನವನು ಪರಿಸ್ಥಿತಿಗೆ ಆಧೀನನಾಗಿರುವನು,' 'ಮಾನವನು ಪರಿಸ್ಥಿತಿಯನ್ನೇ ನಿರ್ಮಿಸಬಲ್ಲನು'. ದೈವ-ಪೌರುಷಗಳ ವಿವಾದದಂತೆ, ಕೆಲವು ಸನಾತನವಾದಗಳಲ್ಲಿ ಇದೂ ಒಂದಾಗಿದೆ. ಆಧುನಿಕ ಮಾನಸಶಾಸ್ತ್ರವು ಈ ಸಮಸ್ಯೆಯನ್ನು ಒಂದು ಹೊಸ ಬಗೆಯಲ್ಲಿ ಬಿಡಿಸಲು ಹವಣಿಸಿದೆ. ಮಾನವನ ಮೂಲ ಸ್ವಭಾವವು ಆನುವಂಶಿಕತೆಯಿಂದ ಹೇಗೆ ನಿರ್ಮಿತವಾಗುವದು ? ಅದು 'ಶಾಶ್ವತ'ವಾದುದೇ, ಪರಿಸ್ಥಿತಿಯ ಪ್ರಭಾವಕ್ಕೆ ಒಳಗಾದುದೆ? ಶಾಶ್ವತವಾಗಿದ್ದರೆ, ಶಿಕ್ಷಣದ ಪ್ರಯೋಜನವಾದರೂ ಏನು ? ಶಿಕ್ಷಣ ಕಾರ್ಯದಲ್ಲಿ ತೊಡಗಿದವರಿಗೆ ಇವೆಲ್ಲ ವಿಚಾರಗಳು ಮನನೀಯವಾಗಿವೆ.

ಮಗು-ಮಗುವಿನಲ್ಲಿ ತೋರಿಬರುವ ವ್ಯತ್ಯಾಸಗಳಿಗೆ ಎರಡು ಮೂಲ ಕಾರಣಗಳು. (೧) **ಆನುವಂಶಿಕತೆ,** (೨) **ಪರಿಸ್ಥಿತಿಯ ಪ್ರಭಾವ. ಆನುವಂಶಿಕತೆ**— ಶರೀರ ರಚನೆಯಲ್ಲಿ ಮಗನು ತಂದೆಯನ್ನು ಪೂರ್ಣವಾಗಿ ಹೋಲುವಂತಿದ್ದರೆ, 'ಅಪ್ಪನ ಮೋರೆ ಹರಿದು ಹಚ್ಚಿದಂತಿದೆ,' ಎಂತಲೂ; ಗುಣಗಳಲ್ಲಿ ಹೋಲುತ್ತಿದ್ದರೆ, 'ಅಪ್ಪನ ಗುಣಗಳೆಲ್ಲ ಮಗನಲ್ಲಿ ಇಳಿದು ಬಂದಿವೆ'ಯೆಂತಲೂ ನಾವು ಹೇಳುವದುಂಟು. ಹೀಗೆ ತಂದೆಯಿಂದ ಮಗನಿಗೆ ಸಾಗಿಬರುವ ಶಾರೀರಿಕ-ಮಾನಸಿಕ ಸೌಮ್ಯತೆಯೆ ಆನುವಂಶಿಕತೆ. ನೂತನ ಜನ್ಮದ ಪ್ರಯಾಣಕ್ಕಾಗಿ ಮಗು ತನ್ನೊಡನೆ ತರುವ ನಿಧಿಯಿದು. ಸಹಜ ಪ್ರವೃತ್ತಿಗಳೂ ಆನುವಂಶಿಕಗಳೆಂದು ಹೇಳುವರು. ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿ ಬಂದ ಜನಾಂಗದ ಜೀವನರೂಢಿಗಳಿವು. 'ಸದೃಶವು ಸದೃಶವನ್ನೇ ಹುಟ್ಟಿಸುವದು' ಎಂಬ ತತ್ವವು ಆನುವಂಶಿಕತೆಗೆ ಆಧಾರವಾಗಿದೆ. ಜನನ ಪರಂಪರೆಯಲ್ಲಿ ಕೆಲವೊಂದು 'ಜೀವಕಣಗಳು' ಇದ್ದಂತೆಯೆ ನೂತನ ಜೀವಿಗೆ ಸಾಗಿಸಲ್ಪಡುವವು. ಇವುಗಳೆ ಆನುವಂಶಿಕತೆಯ ಮೂಲ ದ್ರವ್ಯಗಳು. ನಾಯಿಯ ಮರಿ ನಾಯಿಯ ಮರಿಯೆ ಆಗುವದು, ನಾಯಿಯನ್ನೇ ಹೋಲುವದು. ಈ ಕಣಗಳಿಂದಲೆ ಸಾದೃಶ್ಯದ ಪಡಿಯಚ್ಚುಗಳು ಶಾಶ್ವತವಾಗಿ ಮುಂದೆ ಸಾಗಿಸಲ್ಪಡುವವು. ಜನನ ಪರಂಪರೆಯಲ್ಲಿ ಏಕರೂಪತೆ ಉಳಿದುಕೊಳ್ಳುವದು. ಆದರೆ ಸ್ವಸಂಪಾದಿತವಾದ ವ್ಯತ್ಯಾಸಗಳೂ ಆನುವಂಶಿಕವಾಗಿ ಉಳಿಯುವವೇ ಎಂಬುದು ಮತಭೇಧದ ವಿಷಯವಾಗಿದೆ. ಇಲಿಗಳ ಬಾಲಗಳನ್ನು ಕಡಿದರೂ, ಅವುಗಳಿಂದ ಹುಟ್ಟುವ ಸಂತತಿಯು ಬಾಲಗಳಿಂದ ಸಹಿತವಾದುದನ್ನು ಕಂಡು ಹಿಡಿದು ಸ್ವಸಂಪಾದಿತ ಅಂಶಗಳು ಆನುವಂಶಿಕಗಳಾಗಲಾರವು, ಎಂದು ಕೆಲವರ ಅಭಿಪ್ರಾಯ

ಡಾರ್ವಿನ್‌ನ ಉತ್ಕ್ರಾಂತಿವಾದದಿಂದಲೂ ಆನುವಂಶಿಕತೆಯನ್ನು ತಿಳಿದುಕೊಳ್ಳುವ ಬಂತು. ಪ್ರಾಣಿವರ್ಗಗಳೆಲ್ಲವೂ ಒಬ್ಬನೇ ಪೂರ್ವಜನಿಂದ, ಇಲ್ಲವೆ ತಮ್ಮ ತಮ್ಮ ಪೂರ್ವಜರಿಂದ, ಹುಟ್ಟಿಬೆಳೆದು ಬಂದವುಗಳು. ಕೆಳಗಿನ ಮಟ್ಟದಿಂದ ಮೇಲಿನ ಮಟ್ಟಕ್ಕೆ ಅವು ಕ್ರಮಶಃ ಏರಿ ಬಂದಿವೆ, ಎಂಬುದೇ ಉತ್ಕ್ರಾಂತಿಯ ಸಿದ್ಧಾಂತವು. ಶಾರೀರಿಕ ವಿಕಾಸದ ಜೊತೆಗೆ. ಮನೋಘಟನೆಯು ಮೇಲ್ತರಗತಿಯದಾಗುತ್ತ ಬಂದಿರುವದೆಂತಲೂ ಇದೇ ತತ್ವವು ಹೇಳುವದು. ಜಿರಾಫ, ಪ್ರಾಣಿಯ ಕುತ್ತಿಗೆ ಇಷ್ಟು ದೀರ್ಘವಾದುದು ಇದೇ ತತ್ವದ ಮೇರೆಗೆ ಕೆಳಗಿನ ಎಲೆ ತೀರಲು ಮೇಲಿನ ಎಲೆ ನಿಲುಕಿಸಿಕೊಳ್ಳಲು ದೀರ್ಘ ಕುತ್ತಿಗೆ ಜೀವನ ಸಂಗ್ರಾಮದಲ್ಲಿ ಅದಕ್ಕೆ ಅನಿವಾರ್ಯವಾಯಿತು. ಡಾರ್ವಿನ್‌ನು ಪ್ರಾಣಿಯನ್ನು ಪರಿಸ್ಥಿತಿಗೆ ಅಧೀನವಾಗಿ ಮಾಡಿರುವನು. ಆದರೆ ಲ್ಯಾಮಾರ್ಕನೆಂಬವನ ವಿಚಾರ ಸರಣಿಯು ಇದಕ್ಕೆ ವಿಭಿನ್ನವಾಗಿದೆ ಲ್ಯಾಮಾರ್ಕನು ಪರಿಸ್ಥಿತಿಯನ್ನು ಪ್ರಾಣಿಗಳಿಗೆ ಅಧೀನವನ್ನಾಗಿ ಮಾಡಿರುವದು. 'ಬಾಳಬೇಕು-ಬದುಕಬೇಕು' ಎನ್ನುವ ಅಂತರಿಕ ಪ್ರೇರಣೆ ಎಲ್ಲ ಪ್ರಾಣಿಗಳಿಗೂ ಸಮಾನವಾದುದು. ಇದುವೇ ಪ್ರಾಣಶಕ್ತಿ-ಚೈತನ್ಯ. ತನ್ನ ಜೀವನ ರಕ್ಷಣೆಗಾಗಿ ಪ್ರಾಣಿಯು ತನ್ನ ಶರೀರ ರಚನೆಯಲ್ಲಿ ವ್ಯತ್ಯಾಸಗಳನ್ನೂ ಮಾಡಿಕೊಳ್ಳಬಲ್ಲದು, ಹೊಸ ಶಕ್ತಿಗಳನ್ನೂ ಸಂಪಾದಿಸಬಲ್ಲದು. ಸ್ವಸಂಪಾದಿತವಾದ ಈ ವ್ಯತ್ಯಾಸಗಳೂ, ಶಕ್ತಿಗಳೂ ಅಂಶತಃ ಆದರೂ ಸಾಗಿಬರುವವೆಂದು ಬೇರೆ ವಿಜ್ಞಾನಿಗಳು ನಂಬುವರು. ಇಂದಿನ ಶಿಕ್ಷಣಶಾಸ್ತ್ರವು ಈ ವಿಚಾರ ಸರಣಿಯನ್ನೇ ಎತ್ತಿ ಹಿಡಿದಿದೆ.

ಇಂದಿನ ಶಿಕ್ಷಣವು ಆನುವಂಶಿಕತೆ ಹಾಗೂ ಪರಿಸ್ಥಿತಿ, ಇವೆರಡೂ ಶಕ್ತಿಗಳ ಪ್ರಭಾವ ಹಾಗೂ ಪರಿಮಿತಿಯನ್ನು ಅರಿತುಕೊಂಡಿದೆ. ವ್ಯಕ್ತಿವಿಕಾಸದ ಕಾರ್ಯದಲ್ಲ ಇವೆರಡೂ ಶಕ್ತಿಗಳ ಪ್ರಯೋಜನವನ್ನು ಪಡೆದುಕೊಳ್ಳುವದು ಈಗಿನ ರೀತಿಯಾಗಿದೆ. ನಿರ್ದಿಷ್ಟವಾದ ಆನುವಂಶಿಕ ಗುಣಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿಸುವದು ಅಸಾಧ್ಯವಾದರೆ, ಶಿಕ್ಷಣಕ್ಕಾಗಿ ಪಡುವ ಶ್ರಮ–ಸಾಹಸಗಳೆಲ್ಲವೂ ನಿರರ್ಥಕವಾಗುವವು. ತಾಯಿ–ತಂದೆಗಳು ತಮ್ಮ ಸಂಸ್ಕೃತಿಯ ಉತ್ತಮವಾದ ಅಂಶಗಳನ್ನು ತಮ್ಮ ಮುಂದಿನ ಸಂತಾನಕ್ಕೆ ಸಾಗಿಸಲು ಬಾರದಂತಿದ್ದರೆ, ಸಂಸ್ಕೃತಿಯು ವಿಚ್ಛೇದವಾಗುವದು. ಪ್ರತಿಯೊಂದು ಪೀಳಿಗೆಯು ತನ್ನ ಜೀವನವನ್ನು 'ಹೊಸಕರ್ದಿ'ಯಿಂದ ಪ್ರಾರಂಭಿಸಬೇಕಾಗುವದು.

ಮಗುವಿನ ಆತ್ಮವಿಕಾಸಕ್ಕೆ ಅಗತ್ಯವಿರುವ ಪರಿಸ್ಥಿತಿಯನ್ನು ನಿರ್ಮಿಸಿ, ಉಚಿತವಾದ ಸಹಾಯವನ್ನು ಒದಗಿಸುವದೇ ಶಿಕ್ಷಣವು. ಆನುವಂಶಿಕತೆಯ ಅಂಶಗಳು ಎಂತಿದ್ದರೇನಾಯಿತು ? ಒಳ್ಳೆ ಸಂಸ್ಕಾರದ ಬಲದಿಂದ, ಪ್ರತಿಕೂಲವಾಗಿರುವ ಆನುವಂಶಿಕತೆಯ ಘಟಕಗಳನ್ನೂ ಮೀರಿ, ಮಗು ಏಳ್ಗೆಯನ್ನು ಸಾಧಿಸಬಹುದು. ಪರಿಸ್ಥಿತಿ–ಸಂಸ್ಕಾರ–ಶಿಕ್ಷಣ ಇವುಗಳ ಪ್ರಭಾವದ ದ್ಯೋತಕವಾಗಿ, 'ಮಠದಲ್ಲಿಯ ಗಿಳಿ', 'ಕಟುಕನ ಮನೆಯಲ್ಲಿಯ ಗಿಳಿ' ಇವುಗಳನ್ನು ದೃಷ್ಟಾಂತಗಳನ್ನಾಗಿ ಕೊಡುವದುಂಟು.

ಚೈತನ್ಯವಾದಿಗಳಾದ ನನ್ ಮುಂತಾದ ಇಂದಿನ ಶ್ರೇಷ್ಠ ಶಿಕ್ಷಣ ತಜ್ಞರ ಅಭಿಪ್ರಾಯವು ಬೇರೊಂದು ವಿಧವಾಗಿದೆ :— ಮಗುವಿನ ಆತ್ಮವಿಕಾಸದಲ್ಲಿ ಆತನ ಆನುವಂಶಿಕತೆ

ಹಾಗೂ ಪರಿಸ್ಥಿತಿ, ಇವೆರಡೂ ಮಹತ್ವದ ಅಂಶಗಳಾಗಿಲ್ಲ. ಆತ್ಮವಿಕಾಸದಲ್ಲಿ, ಮಗುವಿನ ಚೈತನ್ಯವೇ ಅತ್ಯಂತ ಪ್ರಭಾವಶಾಲಿಯಾದುದು, ಪ್ರಧಾನವಾದುದು. ಚೈತನ್ಯ ಸ್ವರೂಪಿಯಾದ ಮಗು ತನ್ನ ಆನುವಂಶಿಕತೆಯ ಸಾಮಗ್ರಿಯನ್ನೂ ಹಾಗು ತನಗೆ ಶಿಕ್ಷಣದಿಂದ ದೊರೆಯುವ ಸೌಕರ್ಯಗಳನ್ನೂ, ತನಗೆ ಬೇಕಾಗುವ ರೀತಿಯಲ್ಲಿ ವಿನಿಯೋಗಿಸಲು ಸಮರ್ಥನಿರುವನು. ಈ ವಿಷಯದಲ್ಲಿ ಇನ್ನೊಂದು ವಿಚಾರ ಸರಣಿಯೂ ಇರುವದು :— 'ಆದಿಯಿಂದ ಇಂದಿನವರೆಗೆ, ತನ್ನ ವರ್ಗವು ಬೆಳೆದುಬಂದು ಬಂದ ಸ್ಥಿತ್ಯಂತರಗಳ ಪುನಿರವಲೋಕನವನ್ನು ಪ್ರತಿಯೊಂದು ಪ್ರಾಣಿಯೂ ತನ್ನ ಜೀವನದಲ್ಲಿ ಮಾಡುವದು',— ಎಂಬುದು ಇವರ ಅಭಿಪ್ರಾಯವಾಗಿದೆ. ಶಿಕ್ಷಣ ಶಾಸ್ತ್ರ-ವಿಧಾನಗಳಲ್ಲಿಯೂ ಈ ತತ್ತ್ವವು ತನ್ನ ಪ್ರಭಾವವನ್ನು ಬೀರಿದೆ. ಪೂರ್ವಜರ ಜೀವನಕ್ರಮದಲ್ಲಿ ಇದುವರೆಗೆ ಬೆಳೆದು ಬಂದ ಮೆಟ್ಟಲುಗಳನ್ನೇ ಇಂದಿನ ಶಿಕ್ಷಣ ವಿಧಾನವು ಅನುಸರಿಸಿದರೆ, ಅದು ಸಹಜವೂ, ಸಫಲವೂ ಆಗುವದು.

### ಅಭ್ಯಸನಗಳು

(೧) 'ಅನುವಂಶಿಕತೆ'ಯೆಂದರೇನು ? ಶಿಕ್ಷಣದಲ್ಲಿ ಅದರ ಪ್ರಭಾವವು ಎಷ್ಟರ ಮಟ್ಟಿಗೆ ಕಂಡುಬರುವದು ?

(೨) ಪರಿಸ್ಥಿತಿ— ಆನುವಂಶಿಕತೆ, ಇವೆರಡನ್ನೂ ಇಂದಿನ ಶಿಕ್ಷಣವು ಹೇಗೆ ಹೊಂದಿಸಿಕೊಳ್ಳುವದು ?

(೩) ಉತ್ಕ್ರಾಂತಿ, ಸ್ವಸಂಪಾದಿತ ಅಂಶಗಳು, ಲ್ಯಾಮಾರ್ಕನ ತತ್ವ— ಇವುಗಳ ಬಗ್ಗೆ ಟಿಪ್ಪಣೆ ಬರೆಯಿರಿ.

## ೪. ಕಲಿಯುವದು, ಕ್ರಿಯಾತ್ಮಕ ಶಿಕ್ಷಣಕ್ಕೆ ಮಾನಸಶಾಸ್ತ್ರದ ಹಿನ್ನೆಲೆ.

ಚಿಕ್ಕಮಕ್ಕಳಿಗೆ ಸ್ವಾಭಾವಿಕವಾಗಿರುವ ಕ್ರಿಯಾಶಕ್ತಿಯನ್ನು ಶೈಕ್ಷಣಿಕವಾದ ವಿಧಾನಗಳಲ್ಲಿ ತೊಡಗಿಸುವದೆ, ಕ್ರಿಯಾತ್ಮಕ ಶಿಕ್ಷಣದ ಮೂಲೋದ್ದೇಶವೆನ್ನಬಹುದು. ಕ್ರೀಡಾಂಗ ಪದ್ಧತಿಯೂ ಇದೇ ತತ್ತ್ವವನ್ನು ಅವಲಂಬಿಸಿದೆ. ಈ ಉದ್ದೇಶದಲ್ಲಿ ವರ್ಧಾಯೋಜನೆ(ಮೂಲ ಶಿಕ್ಷಣ) ಒಂದು ಹೆಜ್ಜೆ ಮುಂದೆ ಹೋಗಿದೆ. ಚಿಕ್ಕಮಕ್ಕಳು ಸಿದ್ಧಗೊಳಿಸುವ ಕೈಗಾರಿಕೆಯ ಒಡವೆಗಳು ಅವರಿಗೆ ಪ್ರಾಪ್ತಿಕರವಾಗುವಂತೆ ಮಾಡುವದು ಈ ಯೋಜನೆಯ ಉದ್ದೇಶವಾಗಿದೆ. ಶಿಕ್ಷಣವು ಕೇವಲ ಬುದ್ಧಿಪ್ರಧಾನವಾದರೆ, ಅದು ಏಕಾಂಗಿಯೆನಿಸುವದು; ವ್ಯಕ್ತಿಯ ಸರ್ವತೋಮುಖವಾದ ವಿಕಾಸವು ಇದರಿಂದ ಸಾಧಿಸುವದಿಲ್ಲ. ಕೈಗೆಲಸವೂ ಶಿಕ್ಷಣವಾಗಿದೆ. ಜ್ಞಾನತಂತುವಿಗೂ, ಕೈಗಳ ಕೇಂದ್ರಕ್ಕೂ ಇರುವ ನಿಕಟವಾದ ಸಂಬಂಧವನ್ನು ಇಂದಿನ ಪ್ರಾಯೋಗಿಕ ಮಾನಸ ಶಾಸ್ತ್ರವು ತೋರಿಸಿ ಕೊಟ್ಟಿದೆ. ಯೋಚಿಸುವ ಕೈ (Thinking-hand)ಯೆಂಬುದು ಇಂದ್ರಿಯಗಳ ಚಟುವಟಿಕೆಗೂ ಬುದ್ಧಿ ವಿಕಾಸಕ್ಕೂ

ಇರುವ ಅನ್ಯೋನ್ಯವಾದ ಸಂಬಂಧವನ್ನು ಸೂಚಿಸುತ್ತಿದೆ. ಆಸ್ಥೆಯಿಂದ ಕೈಕೊಂಡ ಕೈಗೆಲಸದಲ್ಲಿ ಮನಸ್ಸಿನ ಏಕಾಗ್ರತೆಯು ಸುಲಭವಾಗಿ ಸಾಧಿಸುವದು. ದುರ್ಬಲವಾದ ಮಿದುಳುಳ್ಳ ಎಷ್ಟೋ ಮಕ್ಕಳು ವರ್ಗದ ಶಿಕ್ಷಣದಲ್ಲಿ ಹಿಂದೆ ಬೀಳುವರು. ಇಂಥವರನ್ನು ಕೈಗೆಲಸದಲ್ಲಿ ತೊಡಗಿಸಿದರೆ, ವಿಶೇಷವಾದ ಪ್ರಗತಿಯನ್ನು ತೋರಿಸುವದುಂಟು. ಸ್ವಾಭಾವಿಕವಾದ ಬುದ್ಧಿಕಾರ್ಯಕ್ಕೆ ತಡೆಹಾಕಿದ ಆತಂಕವನ್ನು ಕೈಗೆಲಸವು ತೆಗೆದು ಹಾಕಿದ ಎಷ್ಟೋ ಉದಾಹರಣೆಗಳು ಕಂಡುಬರುವವು. ಕ್ರಿಯಾತ್ಮಕ ಶಿಕ್ಷಣವು ಇಂದ್ರಿಯಗಳ ಚಲನವಲನದಲ್ಲಿ ಚಪಲತೆಯನ್ನು ಚುರುಕುತನವನ್ನೂ ತಂದುಕೊಡುವದು. ಅನೇಕ ಇಂದ್ರಿಯಗಳನ್ನು ಏಕಕಾಲಕ್ಕೆ ಒಂದು ಕಾರ್ಯದಲ್ಲಿ ಸಹಕರಿಸುವಂತೆ ಮಾಡಲು ಕ್ರಿಯಾತ್ಮಕ ಶಿಕ್ಷಣದಲ್ಲಿ ಮಾತ್ರಸಾಧ್ಯವಿದೆ. ಇದಲ್ಲದೆ ಕೈಗೆಲಸಕ್ಕೆ ಭಾವಶಕ್ತಿಯು ಪೂರ್ಣ ಬೆಂಬಲವು ದೊರೆಯುವದು. ತಾನು ಬೆಳೆಸಿದ ಗಿಡದ ಹೂವನ್ನು ನೋಡುವದರಲ್ಲಿ, ಹಣ್ಣನ್ನು ತಿನ್ನುವದರಲ್ಲಿ, ತಾನು ನೂತ ನೂಲಿನ ಬಟ್ಟೆ ಹಾಕಿಕೊಳ್ಳುವದರಲ್ಲಿ, ತಾನು ಮಾಡಿದ ಗಾಳಿಪಟವನ್ನು ಹಾರಿಸುವದರಲ್ಲಿ, ಚಿಕ್ಕವರಿಗೂ ಹಿರಿಯರಿಗೂ ಕೂಡ ಸಂತೋಷವೆನಿಸುವದು, ಅಭಿಮಾನವೆನಿಸುವದು. ಕೇವಲ ಬುದ್ಧಿ ಪ್ರಧಾನವಾದ ಶಿಕ್ಷಣವು ಈ ಭಾವಶಕ್ತಿಗೆ ಎರಗಾಗಿದೆ. ಕ್ರಿಯಾಶಕ್ತಿಯೊಡನೆ ಭಾವಶಕ್ತಿಯನ್ನು ಹೊಂದಿಸಿಕೊಳ್ಳುವದು ಕ್ರಿಯಾತ್ಮಕ ಶಿಕ್ಷಣದ ವೈಶಿಷ್ಟ್ಯವಾಗಿದೆ. ಇದರಿಂದ ಕೈಗೆಲಸವು ಕೀಳೆಂಬ ಭಾವನೆಯು ಅಳಿದು ಹೋಗುವದು. ಉದ್ಯೋಗ ಪ್ರೀತಿಯು ಜನಿಸುವದು. ಸ್ವಾವಲಂಬನದ ಹಾದಿಯನ್ನು ಹಾಕಿಕೊಟ್ಟಂತಾಗುವದು. ಕ್ರಿಯಾತ್ಮಕ ಶಿಕ್ಷಣದಲ್ಲಿ ಮಗುವಿಗೆ ನಿಸರ್ಗದೊಡನೆ ಸಂಪರ್ಕ ಬರುವದು, ಇದರಿಂದ ನಿಸರ್ಗ ಪ್ರೀತಿಯು ಜನಿಸುವದು. ಕೇವಲ ಸ್ವನಿಷ್ಠತೆಯು ಅಳಿದು ಹೋಗಿ, ಪಶುಪಕ್ಷಿಗಳ ಬಗ್ಗೆ ಸಹಾನುಭೂತಿಯು ಹುಟ್ಟುವದು. ಸುತ್ತಲಿನ ಸಮಾಜದೊಡನೆ ಕೂಡಿ ಕೆಲಸಮಾಡಬೇಕಾಗುವದರಿಂದ, ತಾಳ್ಮೆ, ಸಹಕಾರ, ಬಂಧುಭಾವ ಮುಂತಾದ ಸಾಮಾಜಿಕ ಸದ್ಗುಣಗಳು ಮಕ್ಕಳ ಮಿದುವಾದ ಮನಸ್ಸಿನಲ್ಲಿ ಬೇರು ಬಿಡುವವು.

ಕ್ರಿಯಾತ್ಮಕ ಶಿಕ್ಷಣದಲ್ಲಿ ಪ್ರಬಲವಾದ ಒಂದು ಸಹಜ ಪ್ರವೃತ್ತಿಯ ಸಹಕಾರವು ದೊರೆಯುವದು. ಇದನ್ನೇ ಕ್ರೀಡಾವೃತ್ತಿಯೆಂತಲೂ ಕರೆಯುವದುಂಟು. ಚಿಕ್ಕಮಕ್ಕಳು ಆಡುವ ಆಟದ ಬೇರುಗಳು ಮಾನಸ ಶಾಸ್ತ್ರದ ದೃಷ್ಟಿಯಿಂದ ಆಳವಾಗಿ ಒಳಸೇರಿರುವವು. ಆಟಗಳಿಗೂ ಆತ್ಮವಿಕಾಸಕ್ಕೂ ಇರುವ ಅನ್ಯೋನ್ಯತೆಯನ್ನು ಇಂದಿನ ಮಾನಸ ಶಾಸ್ತ್ರವು ತೋರಿಸಿಕೊಟ್ಟಿದೆ. ನೈಸರ್ಗಿಕವಾದ ನಿರ್ಮಾಣ ಶಕ್ತಿಯು ಆಟದಲ್ಲಿ ಅತ್ಯಂತ ಉನ್ನತಾವಸ್ಥೆಯಲ್ಲಿ ಕಂಡುಬರುವದು. ಆಟವೇ ಮುಂದೆ ವಿವಿಧ ಕಲೆಗಳ ಸ್ವರೂಪವನ್ನು ತಾಳುವದೆಂದು ಕೆಲವರ ಹೇಳಿಕೆ. ಆಟದ ಮೂಲಸ್ವರೂಪದ ಬಗ್ಗೆ ಇರುವ ಕೆಲವು ಮಹತ್ವದ ಭಿನ್ನಾಭಿಪ್ರಾಯಗಳನ್ನು ಇಲ್ಲಿ ಹೇಳಬಹುದು:—

(೧) ಚಿಕ್ಕಮಕ್ಕಳಲ್ಲಿರುವ ಉತ್ಸಾಹಶಕ್ತಿಯು ಅಪಾರವಾದುದು. ತಮ್ಮ ತಮ್ಮ ಅಂದಿನ ಜೀವನಕ್ಕೆ ಸಾಕಾಗಿ ಈ ಉತ್ಸಾಹ ಶಕ್ತಿಯನ್ನು — ಎಂಜಿನು ಅಧಿಕವಾದ ಉಗಿಯನ್ನು ಹೊರಗೆ ಬಿಡುವಂತೆ — ಮಕ್ಕಳು ಆಟಗಳಲ್ಲಿ ವಿನಿಯೋಗಿಸುವರೆಂಬುದು ಒಂದು ಹೇಳಿಕೆ. ಆದರೆ ಎಲ್ಲ ಆಟಗಳಿಗೂ ಈ ಮಾತು ಅನ್ವಯಿಸಲಾರದು.

ಪಡೆದುಕೊಂಡಿದ್ದರೂ, ಆಟಗಳಿಂದ ನಾವು ಎಷ್ಟೋ ಸಲ ಹೊಸ ಶಕ್ತಿಯನ್ನು ಹೊಂದು ವೆವು.

(೨) ಆಟಗಳು ಮುಂದಿನ ಜೀವನಕ್ಕೆ ಇಂದಿನ ಪೂರ್ವ ಪಾಠ ನಾಟಕದ ರಂಗತಾಲೀಮು- ದಂತೆ ಇರುವವೆಂದು ಮತ್ತೆ ಕೆಲವರ ಮತವಾಗಿದೆ. ದೊಡ್ಡವರು ಮಾಡುವ ಅನೇಕ ವ್ಯವಸಾಯಗಳ ಪೂರ್ವ ಪೀಠಿಕೆ-ಮಕ್ಕಳ ಆಟಗಳಲ್ಲಿ ಕಂಡು ಬರುವದು. ಮುಂದೆ ಮಾತೃಪದವನ್ನೇರುವ ಚಿಕ್ಕಬಾಲಿಕೆ ಗೊಂಬೆಯ ಆಟದಲ್ಲಿ ತಾಯಿಯಾಗಿ ತನ್ನ 'ಚಿಕ್ಕಸಂಸಾರ' ವನ್ನು ನಡೆಸುವಳು. ಪಶುಪಕ್ಷಿಗಳ ಚಿನ್ನಾಟದಲ್ಲಿಯೂ ಈ ಮಾತು ತೋರಿಬರುವದು. ಬಾಲಕರು ಆಟಗಳ ಮುಖಾಂತರ ಮುಂದಿನ ಜೀವನಕ್ಕೆ ತಮ್ಮನ್ನು ಅಣಿ ಗೊಳಿಸುತ್ತಿರುವರೆಂಬ ವಿಚಾರವು ಮಾರ್ಮಿಕವಾದರೂ, ವಿಚಾರಣೀಯವಾಗಿದೆ. ಅಲ್ಪ ಬುದ್ಧಿಯ ಚಿಕ್ಕ ಬಾಲಕರು ಭವಿಷ್ಯದ ಒಡಲನ್ನು ಭೇದಿಸಬಲ್ಲರೆಂಬುದು ಸಂದೇಹದ ಸಂಗತಿ. ಬಾಲಕರ ಆಸ್ಥೆಯು ತಾತ್ಕಾಲಿಕವಾದುದು. ಅವರ ಆಟಗಳ ಮೂಲವನ್ನು ಮುಂದಿನ ಭವಿಷತ್ತಿಗೆ ಜೋಡಿಸುವದಕ್ಕಿಂತಲೂ ಇಂದಿನ ಅವರ ಜೀವನಕ್ಕೆ ಹೊಂದಿಸುವದೇ ಸರಿಯಾದುದೆಂದು ತೋರುವದು.

(೩) ಶರೀರದಲ್ಲಿ ಸಂಗ್ರಹಿಸಿದ ಮಲವನ್ನು ರೇಚಕದಿಂದ ಹೊರಗೆ ಹಾಕುವಂತೆ, ಕಾಡುಸ್ಥಿತಿಯ ಜೀವನದ ಅವಶೇಷಗಳನ್ನು ಮಕ್ಕಳು ಆಟಗಳ ಮುಖಾಂತರ ವಾಗಿ ಕಳೆದು ಕೊಳ್ಳುವರು; ಇಲ್ಲವೆ ಇದುವರೆಗೆ ಮಾನವ ಜನಾಂಗವು ಬೆಳೆಸಿಕೊಂಡು ಬಂದ ಸಂಸ್ಕೃತಿಯ ಮೆಟ್ಟಲುಗಳನ್ನು ಆಟಗಳ ಮುಖಾಂತರವಾಗಿ ಮತ್ತೊಮ್ಮೆ ನೆನಪು ಮಾಡಿಕೊಳ್ಳುವರು. ಈ ವಿಚಾರವನ್ನು ಪೂರ್ಣವಾಗಿ ಅಲ್ಲಗಳೆಯುವಂತಿಲ್ಲ. ಹೋರಾ ಟದ ಪ್ರೀತಿ, ಶರೀರ ಶೃಂಗಾರಕ್ಕಾಗಿ ತೋರಿ ಬರುವ ಲವಲವಿಕೆ- ಮಕ್ಕಳಿಗೂ ಕಾಡು ಜನರಿಗೂ ಸಮಾನವಾಗಿರುವವು. ಆದರೆ ಜೀವನವು ನಿಂತ ನೀರಿನಂತಿಲ್ಲ, ವಿಕಾಸಪರವಾದ ಪ್ರವಾಹವಾಗಿದೆ. ಹಿಂದಿನ ಜೀವನವನ್ನೇ ಇಂದಿಗೂ ಚಿಕ್ಕಮಕ್ಕಳು ತಮ್ಮ ಆಟಗಳಲ್ಲಿ ಅಣಿತೋರಿಸುವರೆಂಬುದು ಅಷ್ಟೊಂದು ಸಮಂಜಸವೆನಿಸದು.

(೪) ಮಕ್ಕಳ ಆಟಗಳಲ್ಲಿಯೂ ಫ್ರಾಯಿಡರೆಂಬ ಮನೋವಿಜ್ಞಾನಿಗಳಿಗೆ ಕಾಮಪ್ರವೃತ್ತಿಯ ಪ್ರಭಾವವೇ ಕಂಡು ಬರುವದು. ಚಿಕ್ಕಮಕ್ಕಳ ಆಟಗಳು ಅನಿಷ್ಟವಾದ ಕಾಮಪ್ರವೃತ್ತಿಯನ್ನು ಕಳೆದುಕೊಳ್ಳಲು ಉತ್ತಮ ಸಾಧನಗಳೆಂದು ಅವರ ಹೇಳಿಕೆ.

ತಿಳಿದುಮಾಡುವ ಸ್ವಚ್ಛಂದ ಕ್ರಿಯೆಯು 'ಆಟ' ವಾಗಿದೆ. ಈ ಸ್ವಚ್ಛಂದತೆಯು ಆಟದ ಹೆಗ್ಗುರುತು. ಹೊರಗಿನ ನಿರ್ಬಂಧವಿಲ್ಲದೆ, ತಾನೆ ತಾನಾಗಿ ವಿಹರಿಸುವದೆ ಆಟದ ಸ್ವರೂಪವಾಗಿದೆ. ಆಟದಲ್ಲಿ ದೊರೆಯುವ ಸಂತೋಷವು ಅಂತರಂಗದಿಂದಲೇ ಉಕ್ಕಿಬರು ವದು. ಕಲಿಯುವಕಾರ್ಯವು ಆಟದಂತೆ ಸ್ವಚ್ಛಂದವಾಗಿಯೂ, ಸ್ವಯಂಪ್ರೇರಿತ ವಾಗಿಯೂ, ಸಂತೋಷಜನಕವಾಗಿಯೂ ಇರಬೇಕು. ಹೀಗಾದರೆ ಮಾತ್ರ, ಆಟಗಳಲ್ಲಿ ತೋರಿಸುವ ಆಸ್ಥೆ-ಅವಧಾನಗಳನ್ನು ಕಲಿಯುವ ಕಾರ್ಯದಲ್ಲಿ ಕೂಡ ಚಿಕ್ಕಮಕ್ಕಳು ವಹಿಸಬಹುದು. ಶಿಕ್ಷಣದಲ್ಲಿ ನೀರಸತೆಯನ್ನು ತೆಗೆದು ಹಾಕಲು ಯೋಜಿಸಿದ ಇಂದಿನ

ಕ್ರೀಡಾಪದ್ಧತಿಯು ಈ ತತ್ವದ ಮೇಲೆಯೆ ನಿಂತಿದೆ. ಕಲಿಯುವದು ಸ್ವಯಂ ಪ್ರೇರಿತವೂ, ಸಂತೋಷಪ್ರದವೂ ಆದರೆ, ಅದೇ 'ಕ್ರೀಡೆ'ಯೆನಿಸುವದು.

**ಕಲಿಯುವದು:—** ಮಗುವಿನ ಮಾನಸಿಕ ಹಾಗೂ ಭಾವಶಕ್ತಿಗಳನ್ನು ಕಲಿಯುವ ಕಾರ್ಯದಲ್ಲಿ ಹೇಗೆ ವಿನಿಯೋಗಿಸಬೇಕೆಂಬುವದನ್ನು ಇದುವರೆಗೆ ವಿವೇಚಿಸಿದು ದಾಯಿತು. ಇವುಗಳ ಸಹಕಾರವು ದೊರೆಯದೆ ಶಿಕ್ಷಣವು ವೃಥಾಯಾಸವಿದ್ದಂತೆ. ಕಲಿಯುವದು ಹಾಗೂ ಕಲಿಸುವದು, ಈ ದ್ವಿಮುಖಕಾರ್ಯದಲ್ಲಿ ಬೇಕಾಗುವ ಮೂಲಧನವು ಚಿಕ್ಕ ಮಕ್ಕಳು ಪಡೆದು ಕೊಂಡು ಬಂದಿರುವ ಈ ನೈಸರ್ಗಿಕ ಶಕ್ತಿಗಳಲ್ಲಿಯೆ ಹುದುಗಿ ಕೊಂಡಿದೆ. ಇವೆರಡು ಕ್ರಿಯೆಗಳನ್ನು ಭಿನ್ನವೆಂದು ಭಾವಿಸುವದೂ ತಪ್ಪುತಿಳುವಳಿಕೆ. ಇವೆರಡೂ ಕ್ರಿಯೆಗಳು ಒಂದೇ ಮನೋವ್ಯಾಪಾರದ ಎರಡು ಮುಖಗಳಿದ್ದಂತೆ. 'ಮಗು ಕಲಿಯುವವರೆಗೆ ಕಲಿಸಿದಂತಾಗದು' ಎಂಬ ಮಾತಾದರೂ ಇದೇ ಅರ್ಥವನ್ನು ಸೂಚಿಸುವದು.

ಮಗುವನ್ನು ಕಲಿಯುವ ಕಾರ್ಯದಲ್ಲಿ ತೊಡಗಿಸಲು ಒಳಗಿನ ಹಾಗೂ ಹೊರಗಿನ—ಎರಡು ಪ್ರೇರಕ ಶಕ್ತಿಗಳಿವೆ. ಸಹಜ-ಪ್ರವೃತ್ತಿ ಹಾಗೂ ಭಾವಶಕ್ತಿಗಳಿವೆ. ಸಹಜಪ್ರವೃತ್ತಿ ಹಾಗೂ ಭಾವಶಕ್ತಿಗುಳು ಒಳಗಿನಿಂದಲೆ ಮಗುವನ್ನು ಪ್ರಚೋದಿಸುವವು. ಹುಟ್ಟಿದಂದಿನಿಂದ ಮಗು 'ಕಲಿಯ' ತೊಡಗುವದು. ತನ್ನ ಇಂದ್ರಿಯಗಳನ್ನು ಅಳವಡಿಸಿ ಕೊಂಡು 'ಬೌದ್ಧಿಕ ದಿಗ್ವಿಜಯ'ಕ್ಕಾಗಿ ಹೆಣಗುವದು. ಕುತೂಹಲ, ಕ್ರಿಯಾ ಹಾಗೂ ರಚನಾ ಪ್ರವೃತ್ತಿಗಳು ಕಲಿಯುವ ಕಾರ್ಯದಲ್ಲಿ ಮಗುವನ್ನು ಮುಂದೆ ಮುಂದೆ ಹೋಗು ಮಾತೆ ಮಾಡುವವು. ಮಗುವಿಗೆ ದೊರೆಯುವ, ಇಲ್ಲವೆ ದೊರೆಯುವಂತೆ ಮಾಡಿದ ಒಳ್ಳೇ ಸಂದರ್ಭಸನ್ನಿವೇಶಗಳು ಹೊರಗಿನ ಪ್ರಚೋದಕ ಶಕ್ತಿಯಾಗಿವೆ. ಪ್ರಶಾಂತ ಸ್ಥಳ, ಆಕರ್ಷಕವಾದ ಪುಸ್ತಕಗಳು, ಒಳ್ಳೇ ಗೆಳೆತನ, ಆತ್ಮೀಯರಾದ ಶಿಕ್ಷಕರು—, ಅಧ್ಯಯನಕ್ಕೆ ಇವೆಲ್ಲ ಅನುಕೂಲವಾದ ವಾತಾವರಣವನ್ನು ನಿರ್ಮಿಸುವವು. ಪರೀಕ್ಷೆ ಮುಖ್ಯವಾದ ಪ್ರಚೋದನೆಯಾಗಿಲ್ಲ. ಪರೀಕ್ಷೆಯು ಯಶಸ್ಸು ಧ್ಯೇಯ ಸಾಧನೆಯಲ್ಲಿ ಒಂದು ಮೆಟ್ಟಲು ಮಾತ್ರ. ವೃತ್ತಿ ಪ್ರಾಪ್ತಿ ಇಲ್ಲವೆ ಕೀರ್ತಿ, ಇವುಗಳ ಹಂಬಲವೆ ಹೊರಗಿನಿಂದ ಇನ್ನೊಂದು ಪ್ರೇರಕ ಶಕ್ತಿಯಾಗಿದೆ. ಉದ್ಯೋಗ ದೊರೆತರೆ, ಪ್ರಾಪ್ತಿ ಕೀರ್ತಿಗಳು ಲಭಿಸಿದರೆ—ಸಂತೋಷ ವೆನಿಸುವದು. ಇದು ಸಂತೋಷಕರವಾದ 'ಪರಿಣಾಮ'. ದುಡಿಯುವದು, ತಾಪ ತೊಂದರೆಗಳನ್ನು ಸಹಿಸುವದು— ಈ ಸಂತೋಷಕರವಾದ ಪರಿಣಾಮಕ್ಕಾಗಿ.

ಹುಟ್ಟಿದಂದಿನಿಂದ ಮಗುವಿಗೆ ಬೇರೆ ಬೇರೆ ಸನ್ನಿವೇಶಗಳಸಂಪರ್ಕವು ಒದಗುವದು. ವಿವಿಧವಾದ ಸನ್ನಿವೇಶಗಳು ಮಗುವನ್ನು ವಿವಿಧವಾಗಿ ಪ್ರಚೋದಿಸುವವು. ಅವುಗಳಲ್ಲಿ ಮಗು ವಿವಿಧ ರೀತಿಯಿಂದ ನಡೆದುಕೊಳ್ಳುವದು. ಮಗುವಿನ ಕೃತಿಯೆ ಪ್ರಚೋದನೆಗೆ ಪ್ರತ್ಯುತ್ತರ. ಈ ಪ್ರಚೋದನೆ-ಪ್ರತ್ಯುತ್ತರಗಳೆ ಕಲಿಯುವದ ಪೂರ್ವಪೀಠಿಕೆಯಾಗಿವೆ. ಹೆಚ್ಚು ಸಲ ಅದೇ ರೀತಿಯಲ್ಲಿ ನಡೆದುಕೊಂಡರೆ, ಇವೆರಡರ ಸಂಬಂಧವು ಹೆಚ್ಚು ನಿಕಟವಾಗುವದು. ತುಳಿತದಿಂದ ಹುಲ್ಲುಗದ್ದೆಯಲ್ಲಿ ಹಾದಿಯನ್ನು ಮಾಡಿದಂತೆ ಕಲಿಯುವದೆಂದರೆ ಮೆದುಳಿನ ಮಿದುವಾದ ಭೂಮಿಯಲ್ಲಿ ಈ ರೀತಿಯಿಂದ ಹಾದಿಯನ್ನು ಹಾಕಿಕೊಳ್ಳುವಿಕೆ.

ಈ ಹಾದಿಗಳಿಂದಲೆ ಜ್ಞಾನತಂತುಗಳು ತಮ್ಮ ಕ್ರಿಯೆಯನ್ನು ನಡೆಸುವವು. ಪ್ರಚೋದನೆಗೆ ಸರಿಯಾದ ಉತ್ತರವು ಬರಹತ್ತಿದರೆ ಕಲಿಯುವದು ಸಾಧಿಸಿದಂತಾಯಿತು. ಎರಡು ನಾಲ್ಕಲೆ ಎಷ್ಟು? ಎಂದು ಕೇಳಿದಾಗ್ಗೆ ಮಗು ಎಂಟು ಎಂದು ತಟ್ಟನೆ ಹೇಳಿದರೆ ಎರಡರ ಮಗ್ಗಿಯನ್ನು ಆತನು ಚನ್ನಾಗಿ ಕಲಿತಂತಾಯಿತು.

ಕಲಿಯುವ ಕ್ರಿಯೆಗೆ 'ಪುನರುಕ್ತಿ' ತತ್ವವು ತಳಹದಿಯೆನಿಸಿದೆ. ಈ ತತ್ವವನ್ನು ಬಹುವಿಧವಾಗಿ ವಿವರಿಸುವದುಂಟು.

(೧) ಪುನಃಪಠಣವನ್ನು ಬಿಟ್ಟು ಬಿಟ್ಟು ಮಾಡಬೇಕು. ಏಕಕಾಲಕ್ಕೆ ಇಡಿಯಾಗಿ ಪಾಠಮಾಡುವದಕ್ಕಿಂತಲೂ ಕ್ರಮಶಃ ಮಾಡುವದು ಹೆಚ್ಚು ಸಫಲವಾಗುವದು. ಒಂದೇ ದಿನದಲ್ಲಿ ಒಂದು ಪದ್ಯವನ್ನು ಹತ್ತುಸಾರೆ ಅನ್ನುವದಕ್ಕಿಂತಲೂ ಹತ್ತು ದಿನಗಳಲ್ಲಿ ದಿನಕ್ಕೊಮ್ಮೆಯಾದರೂ ಅಂದರೆ, ಹೆಚ್ಚಿಗೆ ಕಂಠಪಾಠವಾಗುವದು. ಒಂದೇ ದಿನದಲ್ಲಿ ಪಾಠ ಮಾಡಿದ್ದು, ಅಲ್ಪಕಾಲ ಉಳಿಯಬಹುದು. ಆದರೆ ಬಹಳ ದಿನಗಳಲ್ಲಿ ಕಲಿತದ್ದು, ಕಲ್ಲಿನಲ್ಲಿ ಕೊರೆದಂತೆ ಬಹುಕಾಲ ಉಳಿಯುವದು.

೨) ಖಂಡಶಃ ಕಲಿಯುದಕ್ಕಿಂತಲೂ, ಇಡಿಯಾಗಿ ಕಲಿಯುವದು ಲೇಸು. ಇಡಿಯಾಗಿ ಕಲಿಯುವದರಿಂದ, ಅರ್ಧದಷ್ಟು ವೇಳೆಯು ಉಳಿತಾಯವಾಗುವದು. ಇಡಿಯಾಗಿ ಕಲಿಯುವದರಿಂದ ಮೊದಲಿನಿಂದ ಕಡೆಯವರೆಗೆ ಮನಸ್ಸಿನ ಲಕ್ಷ್ಯವು ತೊಡಗುವದು.

(೩) ಕಲಿಯುವ ವಿಷಯವು ಪರಿಚಿತವಾಗುವವರೆಗೆ, ಮೊದಲಿಗೆ ಸಾವಕಾಶವಾಗಿಯೂ ಮುಂದೆ ವೇಗವಾಗಿಯೂ ಓದಬೇಕು. ಓದುವ ಸಮಯದಲ್ಲಿ ಆಗಾಗ್ಗೆ ಅಂದದ್ದನ್ನೇ ಮತ್ತೆ ಮತ್ತೆ ಪಠಿಸಿದರೆ, ಕಲಿಯುವಿಕೆಯು ಶೀಘ್ರವೂ, ಸುಗಮವೂ ಆಗುವದು. ಕಲಿಯುವದು ಒಂದು 'ರೂಢಿ'ಯನ್ನು ಹಾಕಿಕೊಂಡಂತೆ ಅದರ ಕ್ರಮವು ಸರಿಯಾಗಿರಬೇಕು. ಅನುಕೂಲವಾದ ಪರಿಸ್ಥಿತಿಯಿರಬೇಕು. ಸ್ವಚ್ಛತೆ, ಸಾಕಷ್ಟು ಗಾಳಿ ಬೆಳಕುಗಳು, ಸುತ್ತಲೂ ಶಾಂತತೆ, ಇವೆಲ್ಲವುಗಳ ಅನುಕೂಲತೆಯಿದ್ದರೆ ಕಲಿಯುವದು ಸಲೀಸವಾಗಿ ಸಾಗುವದು.

ಕಲಿಯುವ ವೇಗ ಒಂದೇ ಸಮನಾಗಿ ಉಳಿಯುವದಿಲ್ಲ; ತೆರೆಗಳಂತೆ ಅದರಲ್ಲಿ ಏರಿಳಿತಗಳು ಕಂಡುಬರುವವು. ಪ್ರಾರಂಭದಲ್ಲಿ ವೇಗ-ಪ್ರಗತಿಗಳು ಹೆಚ್ಚು; ಮುಂದೆ ಮುಂದೆ ಅವು ಸಾವಧಾನವಾಗಿ ಸಾಗುವವು. ಮತ್ತೆ ವೇಗ ಪ್ರಗತಿಗಳಲ್ಲಿ ಹೆಚ್ಚುವಿಕೆ ಕಂಡು ಬರುತ್ತದೆ. ಈ ಏರಿಳಿತಗಳ ನಡುವೆ, ವೇಗ ಪ್ರಗತಿಗಳು ಕಾಣದೆ ಇದ್ದ ಅವಧಿಯೂ ಇರುವದು. ಕಲಿಯುವದರಲ್ಲಿ ಇದು ಸಮಪಾತಳಿಯಕಾಲ.

ಕಲಿಯುವ ವಿಧಾನದಲ್ಲಿ ಇನ್ನೆರಡೂ ಮಹತ್ವದ ಮಾನಸಿಕ ಕ್ರಿಯೆಗಳಾದ ಆಸ್ಥೆ-ಅವಧಾನಗಳ ಬಗ್ಗೆ ಹಿಂದೆ ವಿವರವಾಗಿ ಹೇಳಿಕೊಟ್ಟದೆ. ಆಸ್ಥೆಗೂ ಶರೀರ ಸ್ವಾಸ್ಥ್ಯಕ್ಕೂ ಇರುವ ಸಂಬಂಧವನ್ನು ಕಡೆಗಣಿಸುವಂತಿಲ್ಲ. ಇದಲ್ಲದೆ, ಶಿಕ್ಷಕನ ಕಲಿಸುವ ರೀತಿಯು ಸರಿಯಾಗಿರದಿದ್ದರೆ, ಆಸ್ಥೆಯು ಎಂದೂ ಜನಿಸದು. 'ಕಣ್ಣೀರು ಸುರಿಸದೆ ಕಲಿಯುವದು', ಎಂಬ ತತ್ವದಿಂದ ಸಾಗಿದ ಇಂದಿನ ಶಿಕ್ಷಣಕ್ಕೆ, ಮಕ್ಕಳಿಗೆ ಅದರಲ್ಲಿ ದುಡಿತವೇ ಇಲ್ಲವೆಂಬ ಆಪಾ

ದಣಿಯುತ್ತಿದೆ. ಇಂದಿನ ಶಿಕ್ಷಣವು ದುಡಿತದ ಆಗತ್ಯವನ್ನು ಎಂದಿಗೂ ಅಲ್ಲಗಳೆಯುವದಿಲ್ಲ; ಆದರೆ ನೀರಸವಾದ, ನಿರರ್ಥಕವಾದ ದುಡಿತವನ್ನು ಮಾತ್ರ ನಿರಾಕರಿಸುವದು.

**ಕಲಿಯುವದರಲ್ಲಿ ದಣಿವು** :— ಹವಣಾಮೀರಿ ದಂಡಿಸಿದರೆ, ಇಲ್ಲವೆ ಗಾಣದ ಎತ್ತಿನಂತೆ ಅದೇ ಅದೇ ಕೆಲಸವನ್ನು ಮಾಡುತ್ತ ಹೋದರೆ ನಮಗೆ 'ದಣಿವು' ಇಲ್ಲವೆ 'ಬೆಸರ'ಎನಿಸುವವು. ದಣಿವು ದೇಹದ ಆಯಾಸ;— ಬೇಸರ ಮಾನಸಿಕ ಆಯಾಸ. ಇವೆರಡು ಆಯಾಸಗಳು ತೋರಿಕೆಯಲ್ಲಿ ಬೇರೆಯಾಗಿ ತೋರಿದರೂ, ಪರಸ್ಪರಾವಲಂಬಿಯಾಗಿರುವವು. ಶರೀರದ ಸ್ವಾಸ್ಥ್ಯ ಮಾನಸಿಕ ಸ್ವಾಸ್ಥ್ಯಕ್ಕೆ ಅಗತ್ಯವೆಂಬುದು ಎಲ್ಲರಿಗೂ ಅನುಭವದ ಸಂಗತಿಯಾಗಿದೆ. ದುಡಿತದಿಂದ ದೇಹದಲ್ಲಿ 'ಸವಕಳಿ'ಯುಂಟಾಗುವದು. ಸವೆದ ಅಂಶಗಳು ವಿಷರೂಪಗಳಾಗಿ ( toxin ) ಪರಿಣಮಿಸಿ ಕಾರ್ಯಶಕ್ತಿಯನ್ನು ಕುಂದಿಸುತ್ತವೆ. ಉತ್ತೇಜಕ ಪೇಯಗಳಿಂದ ಕಾರ್ಯಶಕ್ತಿಯನ್ನು ತಾತ್ಪೂರ್ತಿಕವಾಗಿ ಪ್ರಚೋದಿಸಬಹುದು. ಆದರೆ ಉಚಿತವಾದ ವಿಶ್ರಾಂತಿಯು ಉಂಟಾದ ಸವಕಳಿಯನ್ನು ಪೂರೈಸುವದು, ಕಾರ್ಯಶಕ್ತಿಯನ್ನು ಮತ್ತೆ ಚೇತರಿಸುವದು. ಇದೇ ಹಿತು ವಿಹಿತವಾದಮಾರ್ಗ.

**ದಣಿವು ಹೇಗೆ ವ್ಯಕ್ತವಾಗುವದು ?** :— (೧) ಕಾರ್ಯದ ಗುಣ ಮಾತ್ರತೆ ಕಡಿಮೆಯಾಗುವದು. ದಣಿದು ಕೊಂಡ ಮಗುವಿಗೆ ಈ ಸಂಗತಿಯು ಅರಿವು ಕೂಡ ಇರಲಿಕ್ಕಿಲ್ಲ. (೨) ಕೆಲಸದ ಪ್ರಮಾಣವು ಕಡಿಮೆಯಾಗುತ್ತ ಹೋಗುವದು. (೩) ಮಗುವಿನ ಅವಧಾನದಲ್ಲಿ ಶಿಥಿಲತೆಯುಂಟಾಗುವದು. ಚಿತ್ತ ಚಂಚಲವಾಗುವದು; ಅತ್ತಿತ್ತ ಹರಿಯತೊಡಗುವದು. ದಣಿವಿನಿಂದ ಉಂಟಾದ ಈ ಚಿತ್ತ ಚಾಂಚಲ್ಯವನ್ನು ಶಿಕ್ಷಕರು ಕಂಡು ಹಿಡಿಯಬೇಕು. ಅದಕ್ಕಾಗಿ ಮಕ್ಕಳನ್ನು ದೂಷಿಸಕೂಡದು.

ಕಲಿಯುವಿಕೆಯಲ್ಲಿ ದಣಿವಿನ ದೋಷವನ್ನು ದೂರಮಾಡಲು ಕೆಲವೊಂದು ಸುಲಭವಾದ ವಿಧಾನಗಳನ್ನು ಅನುಸರಿಸಬಹುದಾಗಿದೆ. (೧) ಚಿಕ್ಕ ಮಕ್ಕಳ ಅವಧಾನದ ಅವಧಿಯೂ ಚಿಕ್ಕದು ೨೫ ನಿಮಿಷಗಳಿಗಿಂತಲೂ ಹೆಚ್ಚುಕಾಲ ಅದನ್ನು ಒತ್ತಾಯದಿಂದ ವಿನಿಯೋಗಿಸಬಾರದು. (೨) ಕಲಿಯುವ ವಿಷಯವು ಅವರ ವಯೋಮಾನಕ್ಕೆ, ಒಲವು ಶಕ್ತಿಗಳಿಗೆ ಅನುರೂಪವಾಗುವಂತೆ ದಕ್ಷತೆ ವಹಿಸಬೇಕು. ವಿಷಯದ ಸುಲಭತೆ—ಗಹನತೆಗಳ ಕಡೆಗೂ ಲಕ್ಷಕೊಡಬೇಕು. ಉತ್ಸಾಹವು ಜಾಗ್ರತವಾಗಿರುವ ಅವಧಿಯಲ್ಲಿ ಗಹನ ವಿಷಯಗಳನ್ನು ತೆಗೆದುಕೊಳ್ಳುವದು ಫಲಕಾರಿಯಾಗುವದು. ವೇಳಾಪತ್ರಿಕೆಯ ರಚನೆ ಈ ತತ್ವವನ್ನು ಅನುಸರಿಸುವದು. (೩) ವರ್ಗದ ಪರಿಸರಣವು ದಣಿವಿಗೆ ಕಾರಣವಾಗಿರಬಹುದು. ಮಂದ ಪ್ರಕಾಶ, ತೇವು, ಸಾಕಷ್ಟು ಹವೆಯಾಡುವಂತಿಲ್ಲ, ಸೆಕೆ, ಸುತ್ತಲಿನ ಗದ್ದಲ, ಸ್ಥಳಾಭಾವ—ಇವೇ ಮುಂತಾದ ಅಲ್ಪವೆಂದು ತೋರುವ ಸಂಗತಿಗಳು ಮಕ್ಕಳಿಗೆ ಆಯಾಸ ಜನಕಗಳಾಗುವವು. ಇಲ್ಲವೆ ಅವರ ಆಸ್ಥೆಯನ್ನು ಕಡಿಮೆಮಾಡುವವು. (೪) ವಿಷಯ ವಿವೇಚನೆಯಲ್ಲಿ ವಿವಿಧತೆಯಿರಬೇಕು. ಕಾರ್ಯಬದಲಿಸುವದೆ ವಿಶ್ರಾಂತಿಯಾಗಿ ಪರಿಣಮಿಸುವದು. (೫) ದಣಿವು ಪ್ರಾರಂಭವಾಗುವ ಪೂರ್ವದಲ್ಲಿಯೆ ಅಲ್ಪಕಾಲದ ವಿರಾಮವನ್ನು ಒದಗಿಸಬೇಕು.

ಒಟ್ಟಿನಲ್ಲಿ, ಶಿಕ್ಷಕರು ದಣಿವಿನ ಕಾರಣಗಳನ್ನು ಸೂಕ್ಷ್ಮವಾಗಿ ಕಂಡು ಹಿಡಿದು, ಕಲಿಯುವ ಕ್ರಿಯೆಗೆ ದಣಿವು ಬಾಧಕವಾಗದಂತೆ ದಕ್ಷತೆ ವಹಿಸಬೇಕಾಗುವದು. ಅವಧಾನದ ಪರಮಾವಧಿಯು ಮೀರದಂತೆ ವಿಷಯ ವಿವೇಚನೆಯನ್ನು ಮರ್ಯಾದಿತಗೊಳಿಸಬೇಕು. ಕಲಿಯುವದು ಕ್ರೀಡೆಯಂತೆ ಆನಂದ ಪೂರ್ಣವಾದರೆ, ಸ್ವಯಂಪ್ರೇರಿತವಾದರೆ, ದಣಿವಿನ ಭಯವು ತಾನಾಗಿಯೇ ದೂರವಾಗುವದು.

## ಅಭ್ಯಸನಗಳು

೧. ಕ್ರಿಯಾತ್ಮಕ ಶಿಕ್ಷಣವು ಕೇವಲ ಬುದ್ಧಿ ಪ್ರಧಾನವಾದ ಶಿಕ್ಷಣಕ್ಕಿಂತ ಯಾವ ಅಂಶಗಳಲ್ಲಿ ಮಿಗಿಲಾಗಿದೆ?

೨. ಆಟದ ಸ್ವರೂಪವೇನು ? ಕಲಿಯುವ ಕ್ರಿಯೆಯಲ್ಲಿ ಆಟದ ತಿರುಳನ್ನು ಹೇಗೆ ಹೊಂದಿಸಿ ಕೊಳ್ಳಬಹುದು ?

೩. ಮಗುವನ್ನು ಕಲಿಯುವದರಲ್ಲಿ ತೊಡಗಿಸಲು ಪ್ರೇರಕ ಶಕ್ತಿಗಳು ಯಾವು ?

೪. ಕಲಿಯುವ ಕ್ರಿಯೆಯಲ್ಲಿ 'ಪುನರಪಿ' ತತ್ವವನ್ನು ವಿವರಿಸುವ ನಿಯಮಗಳು ಯಾವು ?

೫. ಕಲಿಯುವ ಕ್ರಿಯೆ ಎಂದರೇನು ? ಅದು ಹೇಗೆ ಪೂರ್ತಿಗೊಳ್ಳುವದು ?

೬. ಕಲಿಯುವದರಲ್ಲಿ 'ದಣಿವು' ಹೇಗೆ ಉಂಟಾಗುವದು ? ಹೇಗೆ ವ್ಯಕ್ತವಾಗುವದು ?

೭. 'ದಣಿವು' 'ಬೇಸರ' ಅಂತರವೇನು ?

೮. ಕಲಿಯುವಿಕೆಯಲ್ಲಿ ದಣಿವಿನ ಭಯವನ್ನು ಹೇಗೆ ತಪ್ಪಿಸಬಹುದು ?

# ಅಭಿನವ ಶಿಕ್ಷಣ

**ಭಾಗ : ೨ ಮತ್ತು ಭಾಗ : ೩**

**ಶೀಘ್ರದಲ್ಲಿಯೆ ಹೊರಬೀಳಲಿವೆ**

— ಕಾಯಿರಿ —